# ಶ್ರೀ ಶ್ರೀ ವಿಶ್ವೋತ್ತಮತೀರ್ಥರು

(ಜೀವನ ಚರಿತ್ರೆ, ಮಹಿಮೆಗಳು, ಸ್ತೋತ್ರ ಹಾಗೂ ಕೀರ್ತನೆಗಳನ್ನೊಳಗೊಂಡಿವೆ)



ಸಂಪಾದಕರು: ಶ್ರೀ ಕೆ.ಎಸ್. ವಾದಿರಾಜ

# ಸಮರ್ಪಣೆ



ಶ್ರೀವಾದಿರಾಜಗುರುಸಾರ್ವಭೌಮರ ಪೂರ್ಣಾನುಗ್ರಹಕ್ಕೆ ಪಾತ್ರರಾದ, ಶ್ರೀಕೃಷ್ಣದೇವರ ನಾಲ್ಕು ಪರ್ಯಾಯಗಳನ್ನು ಪೂರೈಸಿದ, ಸ್ವಾಪ್ನ ವೃಂದಾವನಾಖ್ಯಾನವನ್ನು ಶಿಲಾಲೇಖನ ಮಾಡಿಸಿದ, ದೈವಿ ಸಂಪತ್ತಿನ ಸಾಕಾರಮೂರ್ತಿಗಳಾದ ಹಾಗೂ ಭಕ್ತಾನುಗ್ರಾಹಿಗಳಾದ ಶ್ರೀಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರ ಹೃತ್ಕಮಲಮಧ್ಯ ನಿವಾಸಿಯಾದ ಶ್ರೀ ವಾದಿರಾಜ ಗುರುಸಾರ್ವಭೌಮರ ಅಂತರ್ಯಾಮಿಯಾದ ಶ್ರೀ ಅಶ್ವಿನೀಪತಿ ಶ್ರೀ ಹಯವದನ ದೇವರ ದಿವ್ಯ ಪಾದಕಮಲದಲ್ಲಿ ಈ ಕೃತಿಯನ್ನು ಸಮರ್ಪಿಸುತ್ತೇವೆ.

ಶ್ರೀ ಕೆ.ಎಸ್. ವಾದಿರಾಜ (ಸಂಪಾದಕರು)<br>
ಶ್ರೀ ಕೆ.ಪಿ. ರಾಧಾಕೃಷ್ಣ (ಪ್ರಕಾಶಕರು)

ಶ್ರೀ

# ಶ್ರೀ ಶ್ರೀ ವಿಶ್ವೋತ್ತಮತೀರ್ಥರು

(ಜೀವನ ಚರಿತ್ರೆ, ಮಹಿಮೆಗಳು, ಸ್ತೋತ್ರ ಹಾಗೂ ಕೀರ್ತನೆಗಳು)

ಸಂಪಾದಕರು

**ಶ್ರೀ ಕೆ.ಎಸ್. ವಾದಿರಾಜ**

ಪ್ರಕಾಶಕರು

**ಶ್ರೀ ಕೆ.ಪಿ. ರಾಧಾಕೃಷ್ಣ**

೧೦೫೦/೫೧, ೪ನೇ 'ಎಂ' ಬ್ಲಾಕ್, ಡಾ॥ ರಾಜಕುಮಾರ ರಸ್ತೆ

ರಾಜಾಜಿನಗರ, ಬೆಂಗಳೂರು – ೫೬೦೦೧೦

ದೂರವಾಣಿ : ೨೩೩೫೭೯೫೪

"ಶ್ರೀ ಶ್ರೀ ವಿಶ್ವೋತ್ತಮತೀರ್ಥರು", ಸಂಪಾದಕರು : ಶ್ರೀ ಕೆ.ಎಸ್. ಪಾದಿರಾಜ, # ೫೪/೧೦, 'ಮಾತರಿಶ್ವಾ' ಶ್ರೀರಾಮಮಂದಿರ ರಸ್ತೆ, ೪ನೇ ಅಡ್ಡರಸ್ತೆ, ೧೩ನೇ ಮುಖ್ಯರಸ್ತೆ, ದೂಪನಹಳ್ಳಿ ಹೆಚ್.ಎ.ಎಲ್. ಎರಡನೇ ಹಂತ, ಇಂದಿರಾನಗರ, ಬೆಂಗಳೂರು – ೫೬೦೦೦೮, ದೂರವಾಣಿ : ೦೮೦–೨೫೨೯೫೬೭೨



ಪ್ರತಿಗಳು : ೧೦೦೦

ಪ್ರಥಮ ಮುದ್ರಣ : ೨೦೧೦

ಪುಟಗಳು : viii + ೧೫೬

ಮುದ್ರಣ :




23, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835

ಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದಂಗಳವರು
ಶ್ರೀಕೃಷ್ಣಾಪುರ ಮಠ, ರಥಬೀದಿ
ಉಡುಪಿ - ೫೭೬ ೧೦೧
ಫೋನ್ : ೦೮೨೦ - ೨೫೨೦೫೯೮



Shri Vidyasagara Thirtha Swamiji
Shri Krishnapur Mutt
Car Street, Udupi - 576 101
Phone : 0820 - 2520598

ಸೋದಾ ಶ್ರೀ ವಾದಿರಾಜ ಮಠದ ಶಿಷ್ಯರೂ ನಮ್ಮ ವಿದ್ಯಾಗುರುಗಳಾದ ಶ್ರೀಶ್ರೀ ವಿಶ್ವೋತ್ತಮತೀರ್ಥರ ಅಭಿಮಾನಿಗಳೂ ಆಗಿರುವ ಶ್ರೀ ಕೆ.ಎಸ್. ವಾದಿರಾಜ ಇವರು "ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು" ಎಂಬ ಪುಸ್ತಕವನ್ನು ಸಂಪಾದಿಸಿರುತ್ತಾರೆ. ಶ್ರೀಯುತರ ಈ ಸಂಗ್ರಹವನ್ನು ಓದಿದರೆ ಶ್ರೀ ಸೋದಾವಾದಿರಾಜ ಮಠದ ಗುರುಪರಂಪರೆಯು ಭಾವೀ ಸಮೀರ ಶ್ರೀ ವಾದಿರಾಜತೀರ್ಥರ ಹಿರಿಮೆಯು ಹಾಗೂ ಗುರುಗಳಾದ ಶ್ರೀ ವಿಶ್ವೋತ್ತಮತೀರ್ಥರ ಜೀವನದ ಪರಿಚಯ ನಮಗಾಗಿ, ಅವರಲ್ಲಿ ನಮಗೆ ಭಕ್ತಿ ಮೂಡುವುದು. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದು ಹರಿದಾಸರು ಹಾಡಿದಂತೆ ದೇವಾನುಗ್ರಹಕ್ಕೆ ಗುರ್ವನುಗ್ರಹ ಅತ್ಯಗತ್ಯವಾದ್ದರಿಂದ ಸಜ್ಜನರೆಲ್ಲರೂ ಗುರುಗಳ ಮಹಿಮೆಯನ್ನು ತಿಳಿಸತಕ್ಕಂತಹ ಈ ಪುಸ್ತಕವನ್ನು ಕೊಂಡು ಓದಿ ಹರಿಗುರುಗಳಲ್ಲಿ ವಿಶೇಷ ಭಕ್ತಿ ಮಾಡಿ ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗಲಿ. ಈ ಪುಸ್ತಕವನ್ನು ಪ್ರಕಟಿಸಿದಂತಹ ಶ್ರೀ ಕೆ.ಪಿ. ರಾಧಾಕೃಷ್ಣರಾವ್ ದಂಪತಿಗಳ ಇಷ್ಟಾರ್ಥ ನೆರವೇರಲಿ ಎಂದು ನಮ್ಮ ಆರಾಧ್ಯದೇವರಾದ ಶ್ರೀ ನೃಸಿಂಹ ಕಾಲಿಯ ಮರ್ದನ ಕೃಷ್ಣದೇವರಲ್ಲಿ ಪ್ರಾರ್ಥಿಸುತ್ತೇವೆ.

**SHRI SODE VĀDIRAJA MUTT**
Udupi - 576 101
Udupi Dist. (Karnataka)
Phone : 0820 - 2524004

## ॥ ಶ್ರೀ ಹರಿಃ ಶರಣಂ ಸದಾ ॥

ನಮ್ಮ ಗುರುಗಳಾಗಿರುವ ಪರಮಪೂಜ್ಯ ಶ್ರೀಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರ ವ್ಯಕ್ತಿತ್ವ ಎಲ್ಲರಿಗೂ ಆದರ್ಶರೂಪವಾದುದು. ಅವರ ಸಂನ್ಯಾಸಿ ಬದುಕು ಶ್ರೀಹರಿವಾಯುಗಳಿಗೆ ಅತ್ಯಂತ ಪ್ರೀತಿಕರವಾಗಿತ್ತು. "ಸಂನ್ಯಾಸಸ್ತು ತುರಿಯೋ ವೈ ಪ್ರೀತಿರ್ಮಮ ಗರೀಯಸೀ" ಎಂಬ ಭಗವದುಕ್ತಿಗೆ ಗುರುಗಳು ಒಳ್ಳೆಯ ನಿದರ್ಶನವಾಗಿದ್ದರು. ಶೀಗುರುರಾಜರ ಪರಮಾನುಗ್ರಹಕ್ಕೆ ಪಾತ್ರರಾದ ಅವರ ಸ್ಮರಣೆಯೂ ಶ್ರೀಗುರುರಾಜರ ಭಕ್ತರ ಪಾಲಿಗೆ ಉದ್ಧಾರಕ್ಕೆ ಸಾಧನವಾಗಿದೆ.

ಅಂತಹವರ ಕುರಿತು ಉಪಲಬ್ಧವಿರುವ, ಅಲ್ಲಲ್ಲಿ ಪ್ರಕಟಿತವಾದ ವಿಚಾರಗಳನ್ನು ಒಂದೆಡೆ ಸಂಗ್ರಹಿಸಿ ಪುಸ್ತಕವೊಂದನ್ನು ಶ್ರೀಹರಿಗುರು ಭಕ್ತರಾದ ಕೆ.ಎಸ್. ವಾದಿರಾಜ ಅವರು ಹೊರತರುತ್ತಿರುವುದು ನಮಗೆ ಸಂತೋಷವನ್ನುಂಟುಮಾಡಿದೆ. ಶ್ರೀಯುತರ ಪ್ರಯತ್ನವನ್ನು ಅಭಿನಂದಿಸುತ್ತಾ, ಅವರಿಂದ ಉತ್ತಮ ಕೃತಿಗಳು ಬರಲೆಂದೂ, ಅವರಿಗೆ ಆಯುರಾದಿ ಸಕಲ ಸಂಪತ್ತುಗಳನ್ನು ಶ್ರೀಹರಿಗುರುಗಳು ಕರುಣಿಸಲೆಂದು ನಾವು ನಮ್ಮ ಉಪಾಸ್ಯದೇವರನ್ನು ವಿಶೇಷವಾಗಿ ಪ್ರಾರ್ಥಿಸುತ್ತೇವೆ. ಹಾಗೂ ಈ ಕೃತಿಯನ್ನು ಪ್ರಕಟಿಸಿದ ಶ್ರೀ ಕೆ.ಪಿ. ರಾಧಾಕೃಷ್ಣರಾವ್ ಇವರಿಗೂ ಶ್ರೀ ಹರಿಗುರುಗಳು ಸಕಲ ಸಂಪತ್ತುಗಳನ್ನೂ ಕುರುಣಿಸಲೆಂದು ನಾವು ನಮ್ಮ ಉಪಾಸ್ಯದೇವರಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಶ್ರೀಶ್ರೀವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು
ಶ್ರೀಸೋದೆ ವಾದಿರಾಜ ಮಠ, ಉಡುಪಿ

## ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು ಪೂಜಿಸಿದ ಶ್ರೀ ಹರಿ ಗುರುಗಳು


ಶ್ರೀ ಭೂವರಾಹದೇವರು


ರಮಾತ್ರಿವಿಕ್ರಮದೇವರು


ಉಡುಪಿ ಕೃಷ್ಣ


ಶ್ರೀ ಹಯಗ್ರೀವ ದೇವರು


ಶ್ರೀ ಶ್ರೀ ಮನ್ಮಧ್ವಾಚಾರ್ಯರು


ಶ್ರೀ ವಾದಿರಾಜರ ಪಂಚವೃಂದಾವನ ಸನ್ನಿಧಿ


ಶ್ರೀ ಭೂತರಾಜರು



ಪೂರ್ವಾಶ್ರಮದ ಮಾತಾ ಪಿತರೊಂದಿಗೆ
ಬಾಲಕ ಮಾಧವನು



ವಿದ್ಯಾಗುರುಗಳಾದ ಶ್ರೀ ಕಾಣಿಯೂರು
ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಮುದ್ರತೀರ್ಥರು



ಆಶ್ರಮ ಗುರುಗಳಾದ ಶ್ರೀ ವಿಶ್ವೇಂದ್ರತೀರ್ಥರು ಹಾಗೂ
ಶಿಷ್ಯರಾದ ಶ್ರೀ ವಿಶ್ವೋತ್ತಮತೀರ್ಥರು



ಮೊದಲ ಪರ್ಯಾಯ
(1948–50)ಸಮಯದಲ್ಲಿ



ಎರಡನೆಯ ಪ್ರರ್ಯಾಯ
(1964–66) ಸಮಯದಲ್ಲಿ



ಶ್ರೀಗಳವರ ಪೂರ್ವಾಶ್ರಮ ಮಾತೋಶ್ರೀಯವರು
ಹಾಗೂ ಬಂಧುವರ್ಗ



ಶ್ರೀ ವಿಶ್ವೋತ್ತಮತೀರ್ಥರು ಕೋಟೇಶ್ವರದಲ್ಲಿ
1950ರಲ್ಲಿ ಪ್ರತಿಷ್ಠಾಪಿಸಿದ ಕೋದಂಡರಾಮದೇವರು



ತೃತೀಯ ಪರ್ಯಾಯೋತ್ಸವ ಮೆರವಣಿಗೆ ದೃಶ್ಯ
1980 ರಲ್ಲಿ



ಹೊರೆಕಾಣಿಕೆ



ಪೂಜಾಧಿಕಾರ ಹಸ್ತಾಂತರ



ಟ್ಯಾಬ್ಲೋ



ಪರ್ಯಾಯ ದರ್ಬಾರು ದೃಶ್ಯ
1980ರ ತೃತೀಯ ಪರ್ಯಾಯದ ದೃಶ್ಯಗಳು

## ಶ್ರೀ ವಾದಿರಾಜತೀರ್ಥರ ಅವತಾರದ ಪಂಚಶತಾಬ್ಧಿ ಉತ್ಸವದ ದೃಶ್ಯಗಳು



ಅಭೂತಪೂರ್ವ
ಮೆರವಣಿಗೆಯ
ದೃಶ್ಯ



ಪರ್ಯಾಯ ಅರಳು
ಗದ್ದುಗೆಯಲ್ಲಿ
ಇರಿಸಲಾದ
ಶ್ರೀ ವಾದಿರಾಜರ ವಿಗ್ರಹ



ಸಭೆಯಲ್ಲಿ
ಉಪಸ್ಥಿತರಿದ್ದ
ಶ್ರೀಗಳವರು



ಸಭೆಯಲ್ಲಿ
ರಾಜಕುಮಾರ
ಹಾಡುವ ದೃಶ್ಯ

## ಕೋಟೇಶ್ವರದಲ್ಲಿ 1993ರಲ್ಲಿ ಆಚರಿಸಿದ ಷಷ್ಠಬ್ಧಿ ಪೂರ್ತಿಶಾಂತಿ ಸಂದರ್ಭದ ದೃಶ್ಯಗಳು



ಶ್ರೀಗಳವರನ್ನು ಮುತ್ತೈದೆಯರು ಪೂರ್ಣ ಕುಂಭದೊಂದಿಗೆ ಸ್ವಾಗತ ಮಾಡುತ್ತಿರುವ ದೃಶ್ಯ



ಮೆರವಣಿಗೆಯಲ್ಲಿ ಶ್ರೀ ಪಾದಂಗಳವರು



ಹೋಮ, ಹವನಗಳು ದೃಶ್ಯ



ಸಭೆಯಲ್ಲಿ ವಿರಾಜಮಾನರಾದ ಯತಿಗಳು



ಶ್ರೀಗಳವರ ತುಲಭಾರ ಸಂದರ್ಭ



ಶ್ರೀಗಳವರಿಗೆ ಕನಕಾಭಿಷೇಕ

ಕ್ರಿ.ಶ. 1996ರಲ್ಲಿ ನಡೆದ ಶ್ರೀ ವಿಶ್ವೋತ್ತಮ ತೀರ್ಥರ ನಾಲ್ಕನೆಯ ಪರ್ಯಾಯದ ದೃಶ್ಯಗಳು





ಪರ್ಯಾಯ ಮೆರವಣಿಗೆಯಲ್ಲಿಯ ಸ್ತಬ್ಧ ಚಿತ್ರಗಳು



ಮೆರವಣಿಗೆಯಲ್ಲಿ ಯಾನಾರೂಢ ಶ್ರೀಪಾದಂಗಳವರು



ಪರ್ಯಾಯ ದರ್ಬಾರ ದೃಶ್ಯ





ಸರ್ವಜ್ಞಪೀಠ ಅಲಂಕರಿಸಿದಾಗ, ಪ್ರಶಸ್ತಿ ಪಡೆದ ಗಣ್ಯರು ಸಭೆಯಲ್ಲಿ ವ್ಯಾಸರಾಯಬಲ್ಲಾಳ, ವಿಷ್ಣುವರ್ಧನ, ಭಾರತಿ ಆತ್ರಕೂರು ಆನಂದ ತೀರ್ಥಾಚಾರ್ಯರು

2000ನೇ ಇಸ್ವಿ ಏಪ್ರಿಲನಲ್ಲಿ ಸೋದೆಯಲ್ಲಿ ನಡೆದ ಸ್ವಾಪ್ನವೃಂದಾವನಾಖ್ಯಾನ ಭವನ ಸಮರ್ಪಣೆ ದೃಶ್ಯಗಳು



ಸ್ವಾಪ್ನವೃಂದಾವನ ಭವನ ಎದುರಿಗೆ ಉಭಯ ಶ್ರೀಗಳವರು



ಸ್ವಾಪ್ನವೃಂದಾವನಾಖ್ಯಾನ ಮಂದಿರ ಉದ್ಘಾಟನೆ ದೃಶ್ಯ



ಶ್ರೀಗಳಿಗೆ ರತ್ನಾಭಿಷೇಕ ಶ್ರೀ ನಾಗಭೂಷಣರಾಯರಿಂದ



ಆಖ್ಯಾನ ಶ್ಲೋಕಗಳನ್ನು ಕೆತ್ತಿರುವ ದೃಶ್ಯ



ಬದರಿಯಾತ್ರೆ ಸಮಯದಲ್ಲಿ ವಸುಧಾರಾಕ್ಕೆ
ಹೋಗುವಾಗ ಖುರ್ಚಿ ಹೊತ್ತವರ ಸಂಗಡ



ಚಿಪ್ಪಗಿರಿಯಲ್ಲಿ ವಿಜಯದಾಸರಿಗೆ ನೈವೈದ್ಯ
ಸಮರ್ಪಣೆ



ಶಿಷ್ಯ ಸ್ವೀಕಾರ







ಶ್ರೀ ವಿಶ್ವೋತ್ತಮರ ಮೂಲವೃಂದಾವನ ಬೆಳ್ಳಿಕವಚದೊಂದಿಗೆ



ಅಂತಿಮ ದರ್ಶನ
18–8–2007

# ಸಂಪಾದಕರ ಮಾತು

ಪ್ರಾತಃ ಸ್ಮರಣೀಯರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥರು ಸ್ವಪ್ನ ವೃಂದಾವನಾಖ್ಯಾನೋಕ್ತ ದೇವತಾಪುರುಷರು, ಮಹಾ ತಪಸ್ವಿಗಳು, ವಾಕ್ಸಿದ್ಧಿಯುಳ್ಳವರು, ಶಾಪಾನುಗ್ರಹಶಕ್ತರು, ಶ್ರೀ ವಾದಿರಾಜರ ವಿಶೇಷ ಸನ್ನಿಧಾನವುಳ್ಳವರು. ಆದುದರಿಂದ ನಡೆದಾಡುವ ವಾದಿರಾಜರೆಂದೇ ಪ್ರಖ್ಯಾತರಾದವರು. ನಮಗೆಲ್ಲಾ ಇವರ ಅನುಗ್ರಹ ದೊರೆತಿರುವುದು ಪೂರ್ವ ಜನ್ಮದ ಸುಕೃತದ ಫಲವೇ ಆಗಿದೆ.

ತಮ್ಮ ಜೀವನಪರ್ಯಂತ ಶಮದಮಾದಿ ಸಂಪನ್ನರಾಗಿ, ಸೌಜನ್ಯಭರಿತರಾಗಿ ತಪೋ ವಿದ್ಯಾ ವೈರಾಗ್ಯಾದಿಗಳಿಂದ ಭೂಷಿತರಾಗಿ ಶಾಂತ ಸುಪ್ರಸನ್ನ ವದನರಾಗಿ ಜನತೆಯ ಪ್ರೇಮಾದರ ಗೌರವಗಳನ್ನು ಪಡೆದು ಆದರ್ಶಯತಿಗಳಾಗಿ ಜೀವನ ನಡೆಸಿದರು.

"ಶ್ರೀಗಳವರು ಅನುಗ್ರಹಿಸಿ ಮಂತ್ರಾಕ್ಷತೆ ನೀಡಿದರೆ ಭಕ್ತರ ಸಂಕಷ್ಟ ನಿವಾರಣೆ, ಅಭೀಷ್ಟ ಈಡೇರಿಕೆ ಶೇಕಡಾ ೯೫ ರಷ್ಟು ಖಾತರಿ. ಅಷ್ಟು ಶಕ್ತಿ ನಮ್ಮ ಗುರುಗಳಲ್ಲಿತ್ತು" ಎನ್ನುತ್ತಿದ್ದರು. ಶ್ರೀಗಳವರನ್ನು ಅಜೀವ ಪರ್ಯಂತ ಸೇವೆಗೈದ ದಿ॥ ಗೋವಿಂದಣ್ಣನವರು. ಶ್ರೀಗಳವರಿಂದ ಆಶೀರ್ವಾದ ಪೂರ್ವಕವಾಗಿ ಮಂತ್ರಾಕ್ಷತೆಯನ್ನು ಪಡೆದ ಸಂತಾನವಿಲ್ಲದವರಿಗೆ ಸಂತಾನಪ್ರಾಪ್ತಿ, ಸಂಪತ್ತಿಲ್ಲದವರಿಗೆ ಸಂಪತ್ತು ಪ್ರಾಪ್ತಿಯಾಗುತ್ತಿತ್ತು. ಎಂಥಾ ಕಾಯಿಲೆಯೂ ಗುರುರಾಜರ ಮೃತ್ತಿಕೆಯನ್ನು ಶ್ರೀಗಳವರ ಕೈಯಿಂದ ಪಡೆದು ಸೇವನೆ ಮಾತ್ರದಿಂದಲೇ ರೋಗಿಯು ನಿರೋಗಿಯಾಗುತ್ತಿದ್ದನು. ಹೀಗೆ ಶ್ರೀಗಳವರಿಂದ ಅನುಗೃಹಿತರಾಗಿ ತಮ್ಮ ಅಭೀಷ್ಟ ಪಡೆದವರ ಸಂಖ್ಯೆ ಅದೆಷ್ಟೋ ?

ಇಂತಹ ಮಹಾತ್ಮರು ನಮ್ಮಿಂದ ಅಗಲಿ ಆಗಲೆ ಮೂರು ವರ್ಷಗಳಾದವು. ಈ ಅವಧಿಯಲ್ಲಿ ಅವರನ್ನು ಕುರಿತು ಅನೇಕ ಪುಸ್ತಕಗಳು ಪ್ರಕಟವಾಗಿವೆ. ಈಗ ನಾವೂ ಕೂಡ "ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು" ಎಂಬ ಪುಸ್ತಕ ಸಂಪಾದಿಸಿ, ಪ್ರಕಟಿಸುತ್ತಿದ್ದೇವೆ. ಈಗ ಇದರ ಅವಶ್ಯಕತೆಯಿತ್ತೇ ಎಂಬುದಾಗಿ ಪ್ರಶ್ನೆ ಉದ್ಭವಿಸಬಹುದು. ಅದಕ್ಕೆ ನಮ್ಮ ಉತ್ತರ ಇಷ್ಟೇ! ನಾವು (ಸಂಪಾದಕರು ಹಾಗೂ ಪ್ರಕಾಶಕರು) ಶ್ರೀ ಶ್ರೀ ವಿಶ್ವೋತ್ತಮ ತೀರ್ಥರಿಂದ ಅನುಗ್ರಹಿತರಾದವರು, ಆದುದರಿಂದ ಕೃತಜ್ಞತಾರೂಪದಿಂದ ಭಕ್ತಿಯುತರಾಗಿ ಇದನ್ನು ಪ್ರಕಟಿಸುತ್ತಿದ್ದೇವೆ.

ಇದರಲ್ಲಿಯ ಹೆಚ್ಚಿನ ವಿಷಯಗಳು ಈ ಹಿಂದೆ ಪ್ರಕಟವಾಗಿರುವ ಪುಸ್ತಕಗಳಲ್ಲಿ ಬಂದಿವೆ. ಅವುಗಳನ್ನೆಲ್ಲಾ ಸಂಗ್ರಹಿಸಿ ಇದರಲ್ಲಿ ಕೊಡಲಾಗಿದೆ. ಇಷ್ಟೇ ಅಲ್ಲದೆ ಸೋದಾಮಠದ ಹಿಂದಿನ ಗುರುಪರಂಪರೆ, ವಿದ್ಯಾಗುರುಗಳಾದ ಶ್ರೀ ವಿದ್ಯಾಸಮುದ್ರತೀರ್ಥರ ಕಿರು ಪರಿಚಯ ಕೊಡಲಾಗಿದೆ. ಶ್ರೀಗಳವರ ಮೂರನೆಯ ಮತ್ತು ನಾಲ್ಕನೆಯ ಪರ್ಯಾಯದ ವಿಸ್ತೃತ ವಿವರಣೆ, ಶ್ರೀ ವಾದಿರಾಜ ಗುರುಸಾರ್ವಭೌಮರ ಪಂಚ ಶತಾಬ್ಧಿಯ ವಿವರ, ಕೋಟೇಶ್ವರದಲ್ಲಿ ನಡೆದ

ಶ್ರೀಗಳ ಷಷ್ಠ್ಯಬ್ಧಿಪೂರ್ತಿ ಕಾರ್ಯಕ್ರಮದ ವಿವರಣೆ, ಹೊಳೆಹೊನ್ನೂರಿನಲ್ಲಿ ನಡೆದ ಸುವರ್ಣ ಮಹೋತ್ಸವದ ಕಾರ್ಯಕ್ರಮ ವಿವರಣೆ, ಕ್ರಿ.ಶ. ೨೦೦೦ರಲ್ಲಿ ನಡೆದ ನಡೆದ ಸ್ವಾಪ್ನ ವೃಂದಾವನಾಖ್ಯಾನ ಭವನದ ಉದ್ಘಾಟನೆ ಹಾಗೂ ಶ್ರೀ ವಾದಿರಾಜ ಗುರುಗಳ ೪೦೦ನೇ ಆರಾಧನಾ ಮಹೋತ್ಸವದ ವಿಸ್ತೃತ ವಿವರಣೆ, ನಾಲ್ಕನೆಯ ಪರ್ಯಾಯದ ಸಂದರ್ಭದಲ್ಲಿ, 'ತರಂಗ' ವಾರಪತ್ರಿಕೆಯಲ್ಲಿ ಮುದ್ರಿತವಾದ ಶ್ರೀ ವಿಶ್ವೋತ್ತಮ ತೀರ್ಥರ ಸಂದರ್ಶನವನ್ನು ಕೊಡಲಾಗಿದೆ. ಹಾಗೂ ಶ್ರೀಗಳವರ ಅನೇಕ ಮಹಿಮೆಗಳನ್ನು ಸಂಗ್ರಹಿಸಿಕೊಟ್ಟಿರುವುದು ಇನ್ನೊಂದು ವಿಶೇಷತೆ. ಒಟ್ಟಾರೆ ಹೇಳಬೇಕೆಂದರೆ ಸಾಕಷ್ಟು ವಿಷಯ ನೀಡಲು ಪ್ರಯತ್ನಿಸಿದ್ದೇವೆ. ಭಕ್ತ ಜನರು ಇದರಲ್ಲಿಯ ಸಾರಭಾಗವನ್ನು ಸ್ವೀಕರಿಸಿ ಶ್ರೀ ವಿಶ್ವೋತ್ತಮತೀರ್ಥರಲ್ಲಿ ವಿಶೇಷ ಭಕ್ತಿ ಹೊಂದಿದರೆ ನಮ್ಮ ಶ್ರಮ ಸಾರ್ಥಕ.

ಈ ಕೃತಿಗೆ ಆಶೀರ್ವಚನ ನೀಡಿ ಅನುಗ್ರಹಿಸಿದ ಶ್ರೀಕೃಷ್ಣಾಪುರ-ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಾಗರ ಶ್ರೀಗಳವರಿಗೂ ಹಾಗೂ ಭಾವಿ ಪರ್ಯಾಯ ಪೀಠಸ್ಥರಾದ ಶ್ರೀ ಸೋದೆ ಮಠಾಧೀಶರಾದ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದಂಗಳವರಿಗೂ ನಮ್ಮ ಶಿರಸಾಷ್ಟಾಂಗ ಪೂರ್ವಕ ಅನೇಕ ನಮಸ್ಕಾರಗಳು.

ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳವರಿಂದ ಅನುಗೃಹಿತರಾಗಿ ಸಂತಾನ ಭಾಗ್ಯ ಪಡೆದ ದಂಪತಿಗಳಾದ ಶ್ರೀಮತಿ ಚಂದ್ರಿಕಾ (ಮಗಳು), ಶ್ರೀ ಕೆ.ಪಿ. ರಾಧಾಕೃಷ್ಣ (ಅಳಿಯ) ಇವರು ಈ ಕೃತಿಯನ್ನು ಮುದ್ರಣ ಮಾಡಿಸಿ ಪುಣ್ಯಭಾಜನರಾಗಿದ್ದಾರೆ. ಇವರಿಗೆ ಶ್ರೀ ವಿಶ್ವೋತ್ತಮ ತೀರ್ಥಾಂತರ್ಗತ, ಶ್ರೀ ವಾದಿರಾಜ ಗುರ್ವಂತರ್ಗತ ಶ್ರೀಕೃಷ್ಣ ಪರಮಾತ್ಮನು ಸದಾ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪುಸ್ತಕ ಪ್ರಕಟಣೆಗಾಗಿ ಬಹುವಾಗಿ ಪರಿಶ್ರಮಪಟ್ಟ ಮಿತ್ರರಾದ ಚಿತ್ರದುರ್ಗದ ಶ್ರೀ ಕೆ.ಆರ್. ವಾದಿರಾಜರಾವ್‌ರನ್ನೂ ಹಾಗೂ ಕರಡು ಪ್ರತಿಯನ್ನು ತಿದ್ದುವ ಕೆಲಸದಲ್ಲಿ ಸಹಾಯ ಮಾಡಿದ, ಶ್ರೀಮತಿ ನಾಗರತ್ನ ರಮೇಶರನ್ನೂ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಅಲ್ಪಕಾಲದಲ್ಲಿಯೇ ಅಂದವಾಗಿ ಮುದ್ರಣ ಮಾಡಿಸಿಕೊಟ್ಟ ವಿಶ್ವಾಸ್ ಪ್ರಿಂಟ್ಸ್ ಮಾಲೀಕರಾದ ಶ್ರೀ ವೆಂಕಟೇಶ್ ಮೂರ್ತಿಗಳಿಗೂ ಹಾಗೂ ಅವರ ಸಿಬ್ಬಂದಿವರ್ಗವನ್ನು ಹೃತ್ಪೂರ್ವಕ ಅಭಿನಂದಿಸುತ್ತೇನೆ.

ದಿನಾಂಕ : ೧೫-೭-೨೦೧೦ **ಕೆ.ಎಸ್. ವಾದಿರಾಜ**

# ವಿಷಯಾನುಕ್ರಮಣಿಕೆ

॥ ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ ॥

॥ ಶ್ರೀ ಮದ್ಭಾವಿಸಮೀರ ವಾದಿರಾಜ ಗುರುಸಾರ್ವಭೌಮೋ ವಿಜಯತೇ ॥

# ಶ್ರೀಮನ್ ಮಧ್ವಾಚಾರ್ಯರು

**ಅವತಾರ ಹಿನ್ನಲೆ :**

ತತ್ವಜ್ಞಾನಕ್ಕೆ ಆಗಮ ಶಾಸ್ತ್ರಗಳೇ ಮೂಲ, ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣಗಳು ವೇದಗಳು, ಮಂತ್ರ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್‌ಗಳು ಇವೇ ಮೊದಲಾದವುಗಳು ಅದರ ಪ್ರಭೇದಗಳು. ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ ಮತ್ತು ಕಲ್ಪ ಎಂಬುದಾಗಿ ವೇದಾಂಗಗಳು ಆರು ಬಗೆ. ಮಹಾಭಾರತ ಮೂಲ ರಾಮಾಯಣ ಹಾಗೂ ಪಂಚರಾತ್ರ ಇವುಗಳು ಇತಿಹಾಸಗಳು ಹಾಗೂ ಹದಿನೆಂಟು ಪುರಾಣಗಳು ಇವುಗಳಲ್ಲೂ ಸಾತ್ವಿಕ, ರಾಜಸ ಹಾಗೂ ತಾಮಸ ಎಂಬ ಭೇದಗಳಿವೆ. ವ್ಯಾಸಸ್ಮೃತಿ ಮನುಸ್ಮೃತಿ ಮೊದಲಾದವುಗಳು ಸ್ಮೃತಿಗಳು. ಇವುಗಳು ಶಾಸ್ತ್ರ ಪ್ರಪಂಚ, ತತ್ತ್ವಜ್ಞಾನದ ಮೂಲ ಆಕರ.

ಕೃತಯುಗ ತತ್ತ್ವಜ್ಞಾನದ ಉಚ್ಛ್ರಾಯ ಕಾಲವಾದರೆ ದ್ವಾಪರಯುಗದ ಕೊನೆಭಾಗವು ನಿಕೃಷ್ಟಕಾಲ. ಕಾಲದ ಪ್ರಭಾವದೊಂದಿಗೆ ಗೌತಮರ ಶಾಪವೂ ಸೇರಿ, ತತ್ತ್ವಜ್ಞಾನ ಪ್ರಪಂಚದಲ್ಲಿ ಕತ್ತಲೆ ಕವಿಯಿತು. ಆಗಿನ್ನೂ ಮಹಾಭಾರತಾದಿಗಳು ರಚಿತವಾಗಿರಲಿಲ್ಲ. ವೇದಾರ್ಥ ತಿಳಿದಿದ್ದ ಭೂ ಲೋಕದ ಋಷಿ ಮುನಿಗಳೆಲ್ಲ ಗೌತಮರ ಶಾಪದಿಂದಾಗಿ ಜ್ಞಾನ ಹೀನರಾದರು. ಆಗ ಭಗವಂತ ಶ್ರೀ ವೇದವ್ಯಾಸರರೂಪದಿಂದ ಅವತರಿಸಿ ವೇದಗಳ ಉದ್ಧಾರ, ಹಾಗೂ ಅವುಗಳ ವಿಭಾಗದಿಂದಾಗಿ, ಬ್ರಹ್ಮಸೂತ್ರಗಳ ರಚನೆಯಿಂದ ವೇದಾಧ್ಯಯನ ಸುಕರ ಮಾಡಿದನು. ಹಾಗೂ ಶ್ರೀ ವೇದವ್ಯಾಸರ ಮಹಾಭಾರತಾದಿಕೃತಿಗಳಿಂದ ಅರ್ಥ ನಿರ್ಣಯ ಸುಗಮವಾಯಿತು. ಕೃತಯುಗಕ್ಕೆ ಸರಿಸಾಟಿಯಾಗಿ ಅಧ್ಯಾತ್ಮವಿದ್ಯೆ ಪೂರ್ಣ ಪ್ರಮಾಣದಲ್ಲಿ ಬೆಳಗಿತು.

ಆದರೆ ಅಯೋಗ್ಯರೂ ಶಾಸ್ತ್ರದ ಕಡೆ ಆಸಕ್ತರಾಗತೊಡಗಲು ಭಗವಂತನು ಬುದ್ಧಾವತಾರ ಪ್ರಕಟಿಸಿ ಅವರನ್ನು ಮೋಹಗೊಳಿಸಿ ಅವರಿಂದ ಶಾಸ್ತ್ರವನ್ನು ರಕ್ಷಿಸಿದನು. ಕಾಲಕಳೆದಂತೆ ಕಲಿಯ ಪ್ರಭಾವದಿಂದ ಮತ್ತೊಮ್ಮೆ ಜನತೆ ತತ್ತ್ವಜ್ಞಾನದಿಂದ ವಿಮುಖರಾದರು. ಪರಮಾತ್ಮನನ್ನು ಮರೆತು ಆತ್ಮೋದ್ಧಾರ ಚಿಂತನೆಯನ್ನು ತೊರೆದು ವಿವಿಧದರ್ಶನಗಳು ಹುಟ್ಟಿದವು. ಇವುಗಳ ಪ್ರಭಾವದಿಂದ ವೇದವ್ಯಾಸರ ಉಪದೇಶವು ಮರೆಯಾಗತೊಡಗಿತು. ಹೀಗೆ ಆಧ್ಯಾತ್ಮ ಕುರುಡರ ಸಂತೆಯಾಯಿತು. ಅವೈದಿಕದರ್ಶನಗಳಂತೆ ವೈದಿಕ ದರ್ಶನಗಳೂ ನಾಸ್ತಿಕ ತತ್ತ್ವದೆಡೆಗೆ ಸಾಗಿತು. ಕೆಲವರು ಬ್ರಹ್ಮನ ಅಪೂರ್ಣತ್ವವಾದಿಗಳೂ, ಕೆಲವರು ಅಹಂ ಬ್ರಹ್ಮಾಸ್ಮಿ ವಾದಿಗಳೂ ಕೆಲವರು ನಿರ್ಗುಣತ್ವವಾದಿಗಳೂ ಕೆಲವರು ಸಗುಣ ವಾದಿಗಳೂ ಹೀಗೆ ಅನೇಕ ದರ್ಶನಗಳು ತತ್ತ್ವಜ್ಞಾನದ ಯಥಾರ್ಥಜ್ಞಾನ ನೀಡುವ ಬದಲಿಗೆ ಅಜ್ಞಾನ ಪ್ರದರ್ಶಿಸಿ ಸಜ್ಜನರಿಗೆ ದಿಕ್ಕುತಪ್ಪಿಸತೊಡಗಿದವು.

ಇಂತಹ ಪರಿಸ್ಥಿತಿಯಲ್ಲಿ ಸಾತ್ವಿಕ ಜನತೆ, ಸಾತ್ವಿಕ ವಿಚಾರ ಅಲ್ಲಲ್ಲಿ ಉಳಿದಿದ್ದರೂ ಅವರಾರಿಗೂ "ಯಥಾರ್ಥ ಜ್ಞಾನದ ಬೆಳಕನ್ನು" ತೋರಿಸಿ ಮಾರ್ಗದರ್ಶನ ಮಾಡುವ ಪರಮ ಗುರುವಿಗಾಗಿ ಜಗತ್ತು ಪ್ರತೀಕ್ಷಿಸುತ್ತಿತ್ತು. ಆಗ ಪರಮಾತ್ಮನ ಆಜ್ಞೆಯಂತೆ ವಾಯುದೇವರು ಪರಶುರಾಮ ಕ್ಷೇತ್ರದ ಉಡುಪಿ ಹತ್ತಿರವಿರುವ ಪಾಜಕದಲ್ಲಿ ಮಧ್ಯಗೇಹ ಭಟ್ಟರು ಹಾಗೂ ವೇದವತಿಯೆಂಬ ಸಾತ್ವಿಕ ಭಗವದ್ಭಕ್ತ ದಂಪತಿಗಳಲ್ಲಿ 'ವಾಸುದೇವ' ಎಂಬ ಹೆಸರಿನಿಂದ ಕ್ರಿ.ಶ. ೧೨೩೮ ಶಾ. ಶಕ ೧೧೬೦ ವಿಳಂಬಿ ನಾಮ ಸಂವತ್ಸರದ ಆಶ್ವಯುಜ ಶುದ್ಧ ದಶಮಿ (ವಿಜಯದಶಮಿ) ಬುಧವಾರದಿನದಂದು ಅವತರಿಸಿದರು. ಆ ಮಗು ಮೂವತ್ತೆರಡು ಸಲ್ಲಕ್ಷಣಗಳಿಂದ ಯುಕ್ತವಾಗಿತ್ತು.

**ಬಾಲ್ಯದ ಮಹಿಮೆಗಳು :** ತಂದೆಯ ಸಾಲ ತೀರಿಸಲು ಚಿಕ್ಕ ಬಾಲಕ ಕೊಟ್ಟ ಹುಣಸೆಬೀಜ ಕಕ್ಕಶೆಟ್ಟಿಗೆ ಪುರುಷಾರ್ಥ ಬೀಜಗಳೇ ಆದವು; ಓಂಕಾರವನ್ನು ಕಿವಿಯಲ್ಲಿ ಊದಿ ಸ್ನೇಹಿತನ ಶಿರೋವೇದನೆಯನ್ನು ನೀಗಿಸಿದರು. ಕೋಲಿನಿಂದ ಗೆರೆ ಎಳೆದು ಗುರುಗಳ ಗದ್ದೆಗೆ ನೀರು ಹಾಯುವಂತೆ ಮಾಡಿ ಪಚ್ಚೆ ಪೈರು ಬೆಳೆಯಲು ಕಾರಣರಾದರು. ಶಿವಶರ್ಮ ಪುರಾಣಿಕನ ತಪ್ಪನ್ನು ಎಳೆಯ ವಯಸ್ಸಿನಲ್ಲಿಯೇ ತಿದ್ದಿದರು. ತಂದೆ ಅರ್ಥ ಹೇಳದೆ ಮುಂದೆ ಹೋದ ಶಬ್ಧಕ್ಕೆ ಅರ್ಥವನ್ನು ಸ್ಪಷ್ಟಪಡಿಸಿದರು.

ಇಂತಹ ನೂರಾರು ಮಹಿಮೆಗಳನ್ನು ಬಾಲಕ ವಾಸುದೇವ ತೋರಿಸಿ ತಾವು ಅಸಾಧಾರಣ ಪುರುಷನೆಂದು ತೋರ್ಪಡಿಸಿದರು. ವೇದ ಮೊದಲಾದವುಗಳಿಗೆ ವಿರುದ್ಧಾರ್ಥವನ್ನು ಕಲ್ಪಿಸಿ ಜನರನ್ನು ವಂಚಿಸುವ ಅದ್ವೈತಮತವನ್ನು ಖಂಡಲಿಚ್ಛಿಸಿ, ಹಂಸರೂಪಿ ಪರಮಾತ್ಮನಿಂದ ಪ್ರಾರಂಭಿಸಿ ಸನಕ ದುರ್ವಾಸಾದಿ ಋಷಿಗಳ ಪರಂಪರೆಯವರಾದ ಉಡುಪಿಯಲ್ಲಿ ವಾಸವಾಗಿದ್ದ ಶ್ರೀ ಅಚ್ಯುತಪ್ರೇಕ್ಷ (ಪುರುಷೋತ್ತಮ ತೀರ್ಥ) ರಿಂದ ಸನ್ಯಾಸಾಶ್ರಮ ಸ್ವೀಕರಿಸಿದರು. ಅವರು ವೇದಾಂತ ವಿದ್ಯಾ ಸಾಮ್ರಾಜ್ಯದಲ್ಲಿ ಪಟ್ಟಾಭೀಷೇಕ ಮಾಡಿ ಪೂರ್ಣಪ್ರಜ್ಞಾಚಾರ್ಯ, ಆನಂದತೀರ್ಥರು ಎಂಬುದಾಗಿ ನಾಮಕರಣ ಮಾಡಿದರು. ಇಷ್ಟಸಿದ್ಧಿ ಗ್ರಂಥದ ಪ್ರಾರಂಭ ಶ್ಲೋಕದಲ್ಲೇ ದ್ವಾತ್ರಿಂಶತಿ ದೋಷಗಳನ್ನು ತೋರಿಸಿ ಪಾಠ ಪ್ರಾರಂಭ ಮಾಡಿಸಿದ ಗುರುಗಳಿಗೇ ದಿಗ್‌ಭ್ರಮೆ ಹಿಡಿಸಿದರು. ಕೆಲವೇ ಸಮಯದಲ್ಲಿ ವಾದಿಸಿಂಹ ಹಾಗೂ ಬುದ್ಧಿಸಾಗರಯೆಂಬ ಬೌದ್ಧ ಪಂಡಿತರನ್ನು ವಾದದಲ್ಲಿ ಸೋಲಿಸಿದರು. ಆಚಾರ್ಯರು ದಿಗ್ವಿಜಯ ಮಾಡುತ್ತಾ ಪರವಾದಿಗಳನ್ನು ವಾದದಲ್ಲಿ ಗೆಲ್ಲುತ್ತಾ ವಿಷ್ಣುಮಂಗಲ, ಅನಂತಶಯನ, ರಾಮೇಶ್ವರ, ಶ್ರೀರಂಗ ಕ್ಷೇತ್ರಗಳನ್ನು ಸಂದರ್ಶಿಸಿ ಉಡುಪಿಗೆ ಬಂದು ಗೀತಾಭಾಷ್ಯವನ್ನು ವಿರಚಿಸಿ ಗುರುಗಳಿಗೆ ಅರ್ಪಿಸಿದರು. ಹಾಗೆ ಬದರಿಗೆ ಪ್ರಯಾಣಿಸಿ ನಾರಾಯಣ ದೇವರಿಗೆ ಆ ಗ್ರಂಥ ಸಮರ್ಪಿಸಲು ಆಗ ಪರಮಾತ್ಮನು ಗ್ರಂಥದ ಪ್ರಾರಂಭದಲ್ಲಿ "ಶಕ್ತಿತಃ" ಎಂಬ ಪದ ಬದಲಿಗೆ "ಲೇಶತಃ" ಎಂದು ತಿದ್ದು ಪಡಿ ಮಾಡಲು ತಿಳಿಸಲು ಆಚಾರ್ಯರು ಆ ಆಜ್ಞೆಯನ್ನು ಶಿರಸಾವಹಿಸಿದರು. ಹಾಗೂ ಶ್ರೀ ಮನ್ನಾರಾಯಣನು ಬ್ರಹ್ಮಸೂತ್ರ ಭಾಷ್ಯವನ್ನು ಬರೆಯಲು ಅಪ್ಪಣೆ ಮಾಡಲು ಆಚಾರ್ಯರರು ಬದ್ರಿಯ ಅನಂತಮಠಕ್ಕೆ ಬಂದು, ಅಲ್ಲಿ ಹಿಂದಿನ ೨೧ ಜನರು ತಮ್ಮ ಮನಸ್ಸಿಗೆ ತೋರಿದಂತೆ ಶೃತಿಸ್ಮೃತಿಗಳಿಗೆ ಅಸಮ್ಮತ ಅರ್ಥವುಳ್ಳ ಬರೆದ ಭಾಷ್ಯಗಳನ್ನೆಲ್ಲಾ ಖಂಡಿಸಿ, ಶ್ರೀ ವೇದವ್ಯಾಸರ ಅಭಿಪ್ರಾಯವನ್ನು ತೋರಿಸುವ, ಶ್ರೀ ಪರಮಾತ್ಮನು ಗುಣಪೂರ್ಣನೂ, ದೋಷದೂರನೂ, ಜ್ಞಾನಶಕ್ತಿಗಳನ್ನೀಯುವವನೂ, ಮುಕ್ತಿಸುಖ ಕೊಡುವವನೂ ಎಂದು

ಸಾಧಿಸುವ ಎಲ್ಲ ಭಾಷ್ಯಲಕ್ಷಣವುಳ್ಳ ಹಿಂದಿನವರು, ವರ್ತಮಾನಕಾಲದವರೂ ಹಾಗೂ ಇನ್ನು ಮುಂದಿನವರು ಸಹ ಖಂಡಿಸಲಾಗದಂತ ಭಾಷ್ಯ ಬರೆದು ಬದರಿನಾರಾಯಣನಿಗೆ ಸಮರ್ಪಿಸಿ ಅಲ್ಲಿಂದ ಹೊರಟ ಆಚಾರ್ಯರು ಅನೇಕ ದೇಶಗಳಲ್ಲಿ ದಿಗ್ವಿಜಯ ಮಾಡುತ್ತಾ, ದ್ವೈತ ದುಂದುಭಿಯನ್ನು ಮೊಳಗಿಸುತ್ತ ಗೋದಾವರಿ ತೀರಕ್ಕೆ ಬಂದು ಪ್ರಕಾಂಡ ಪಂಡಿತರಾದ ಶೋಭನಭಟ್ಟರನ್ನು ವಾದದಲ್ಲಿ ಸೋಲಿಸಿ ಅವರಿಗೆ ಸಂನ್ಯಾಸಾಶ್ರಮ ನೀಡಿ ಪದ್ಮನಾಭತೀರ್ಥರೆಂದು ಶುಭನಾಮ ನೀಡಿ, ಬ್ರಹ್ಮಸೂತ್ರ ಭಾಷ್ಯ ಪಾಠಹೇಳಿದರು.

ಕಲಿಯುಗದಲ್ಲಿ ಸಜ್ಜನರ ಉದ್ಧಾರಕ್ಕಾಗಿ ದ್ವಾರಕೆಯಲ್ಲಿದ್ದ ರುಕ್ಮಿಣಿ ಕರಾರ್ಚಿತರಾದ ಶ್ರೀ ಬಾಲಕೃಷ್ಣ ಮೂರ್ತಿ ಹಾಗೂ ಬಲರಾಮ ವಿಗ್ರಹಗಳು ಗೋಪಿಚಂದನದ ಹೆಂಟೆಯಲ್ಲಿ ಮುಚ್ಚಿತ್ತು, ವರ್ತಕನೊಬ್ಬನ ಹಡಗಿನಲ್ಲಿ ಮಲ್ಪೆಯ ಸಮೀಪಬರುತ್ತಿರುವಾಗ ಪ್ರಚಂಡ ಬಿರುಗಾಳಿಯಿಂದ ಹಡಗು ಮುಳುಗಲು ತೊಡಗಲು ಮಧ್ವಾಚಾರ್ಯರು ತಮ್ಮ ಕಾವಿಶಾಟಿಯನ್ನು ಬೀಸಿದೊಡನೆ ಗಾಳಿಶಾಂತವಾಗಿ ಹಡಗು ದಡಸೇರಿತು. ಆಗ ಆಚಾರ್ಯರು ಆ ಹಡಗಿನ ವರ್ತಕನಿಂದ ಕೇವಲ ಗೋಪಿಚಂದನದ ಹೆಂಟೆಗಳನ್ನು ಪಡೆದರು. ವಡಪಾಂಡೇಶ್ವರದಲ್ಲಿ ಬಲರಾಮ ವಿಗ್ರಹವನ್ನೂ ಉಡುಪಿಯಲ್ಲಿ ಶ್ರೀಕೃಷ್ಣ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಶ್ರೀಕೃಷ್ಣಪೂಜೆಯನ್ನು ನವವಿಧವಾದ ನಿತ್ಯಪೂಜೆಗಳಿಂದ ಪೂಜಿಸಿ ಅಲ್ಲಿ ಭಗವಂತನ ವಿಶೇಷ ಸನ್ನಿಧಾನವನ್ನು ನೆಲಸುವಂತೆ ಮಾಡಿದರು. ತಾವು ಉಡುಪಿಯಲ್ಲಿ ಇಲ್ಲದಿದ್ದಾಗ ಪೂಜಾ ವಿನಿಯೋಗಗಳು ನಿರಾತಂಕವಾಗಿ ನಡೆಯುವಂತೆ ಎಂಟು ಜನ ಬಾಲಬ್ರಹ್ಮಚಾರಿಗಳಿಗೆ ಸನ್ಯಾಸದೀಕ್ಷೆ ನೀಡಿ ಪ್ರತಿಯೊಬ್ಬರೂ ಎರಡೆರಡು ತಿಂಗಳು ಸರದಿಯಂತೆ ಶ್ರೀಕೃಷ್ಣನ ಪೂಜೆ ಮಾಡುವಂತೆ ನಿಯಮಿಸಿದರು.

ನಂತರ ಆಚಾರ್ಯರು ಮತ್ತೊಮ್ಮೆ ಬದರಿಯಾತ್ರೆ ಮಾಡಿ ಬಂದರು. ಈ ಸಂದರ್ಭದಲ್ಲಿ ಆಚಾರ್ಯರು ತೋರಿದ ಲೀಲೆಗಳಿಗೆ ಲೆಖ್ಖವಿಲ್ಲ. ಈಶ್ವರದೇವನೆಂಬ ರಾಜನು ಜನರಿಂದ ಬಲತ್ಕಾರವಾಗಿ ಬಿಟ್ಟಿ ಕೆಲಸ ಮಾಡಿಸಿಕೊಳ್ಳುತ್ತಿದ್ದನು. ಆಚಾರ್ಯರನ್ನು ತಡೆದು ನಿಲ್ಲಿಸಿ ನೆಲವನ್ನು ಅಗೆದು ಹೋಗಬೇಕೆಂದು ನಿರ್ಭಂದಿಸಲು. "ನೀನು ಮಾಡಿ ತೋರಿಸಿದರೆ, ನಾವು ಮಾಡುವೆವು" ಎನ್ನಲು ಆಗ ರಾಜನು ತನ್ನ ಕೈಯಲ್ಲಿ ಗುದ್ದಲಿ ಹಿಡಿದು ನೆಲವನ್ನು ಅಗೆಯಲು ಪ್ರಾರಂಭಿಸಿದನು. ಎಷ್ಟು ಹೊತ್ತಾದರೂ ನಿಲ್ಲಿಸಲೇ ಇಲ್ಲ. ಅಗೆಯುತ್ತಲೇ ಇದ್ದನು. ಆಚಾರ್ಯರು ಮುಂದೆ ಸಾಗಿದರು.

ಒಮ್ಮೆ ಬದರಿಯ ಮಾರ್ಗದಲ್ಲಿ ಆಚಾರ್ಯರ ಪರಿವಾರವನ್ನು ಕಳ್ಳರ ಗುಂಪೊಂದು ತಡೆಯಲು ಆಚಾರ್ಯರು ತಮ್ಮ ಕೈಯಲ್ಲಿದ್ದ ಕಾವಿ ಬಟ್ಟೆಯ ಗಂಟನ್ನು ಕಳ್ಳರ ಗುಂಪಿನೆಡೆಗೆ ಎಸೆಯಲು ಅದರಲ್ಲಿ ಸಂಪತ್ತಿದೆಯಂದು ಭ್ರಮಿಸಿದ ಕಳ್ಳರ ಗುಂಪು ಪರಸ್ಪರ ಬಡಿದಾಡಿ ನಾಶ ಹೊಂದಿದರು.

ಒಂದು ಕಾಡಿನಲ್ಲಿ ಪ್ರಯಾಣಿಸುತ್ತಿದ್ದಾಗ ದೈತ್ಯನೊಬ್ಬನು ಹುಲಿಯ ರೂಪದಿಂದ ಭೀಕರ ಗರ್ಜನೆ ಮಾಡುತ್ತಾ ಬರುತ್ತಿರಲು ಆಗ ಆಚಾರ್ಯರು ಆ ಹುಲಿಯನ್ನು ಕೈಯಿಂದ ಹೊಡೆದೋಡಿಸಿದರು.

ಆಚಾರ್ಯರು ದೊಡ್ಡ ಬದರಿಗೆ ತಾವೊಬ್ಬರೇ ಹೋಗಿ ಶ್ರೀ ವೇದವ್ಯಾಸರು ನೀಡಿದ ಎಂಟು ಲಕ್ಷ್ಮೀನಾರಾಯಣರ ಸನ್ನಿಧಾನವುಳ್ಳ ವ್ಯಾಸಮುಷ್ಟಿ ಸ್ವೀಕರಿಸಿದರು ಆಗ ವೇದವ್ಯಾಸರು "ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯ" ಬರೆಯುವಂತೆ ಆಚಾರ್ಯರಿಗೆ ಆದೇಶಿಸಿದರು.

ನಂತರ ಆಚಾರ್ಯರರು ಕುರುಕ್ಷೇತ್ರಕ್ಕೆ ಬರಲು ಶಿಷ್ಯರ ಅಪೇಕ್ಷೆಯಂತೆ ತಾವು ಮಹಾಭಾರತ ಯುದ್ಧದಲ್ಲಿ ಬಳಸಿದ ಗದೆಯನ್ನು ತೋರಿಸಿದರು ಹಾಗೂ ಆಗ ಅಲ್ಲಿದ್ದ ಒಬ್ಬ ಡಾಂಭಿಕ ತಪಸ್ವಿಯನ್ನು ತೋರಿಸಿ ಮುಂದಿನ ರಾಮಾವತಾರ ಕಾಲದಲ್ಲಿ ಮಾರೀಚನಾಗಿ ಹುಟ್ಟುತ್ತಾನೆ ಎಂದು ತಿಳಿಸುವ ಮೂಲಕ ತಾವು ತ್ರಿಕಾಲ ಜ್ಞಾನಿಗಳೆಂದು ಪ್ರಕಟಪಡಿಸಿದರು.

ಆಗಿನಕಾಲದಲ್ಲಿದ್ದ ಅದ್ವೈತಮತದ ಪ್ರಕಾಂಡಪಂಡಿತರಾದ ತ್ರಿವಿಕ್ರಮ ಪಂಡಿತಾಚಾರ್ಯರು ಕುಡೇಲ ಗ್ರಾಮದಲ್ಲಿ ಮಧ್ವಾಚಾರ್ಯರೊಂದಿಗೆ ೭-೮ದಿನ ವಾದ ಮಾಡಿ ಸೋತು ಆಚಾರ್ಯರಲ್ಲಿ ಶಿಷ್ಯತ್ವ ವಹಿಸಿ ಬ್ರಹ್ಮ ಸೂತ್ರ ಭಾಷ್ಯವನ್ನು, ಅಭ್ಯಾಸಮಾಡಿ, ಮಧ್ವಾಚಾರ್ಯರ ಅಪ್ಪಣೆಯಂತೆ ಮಧ್ವಭಾಷ್ಯಕ್ಕೆ "ತತ್ತ್ವ ಪ್ರದೀಪ" ಎಂಬ ಟೀಕೆಯನ್ನು ಬರೆದು ಅವರ ಕೃಪೆಗೆ ಪಾತ್ರರಾದರು.

ಶ್ರೀ ಮಧ್ವಾಚಾರ್ಯರ ಪೂರ್ವಾಶ್ರಮದ ತಂದೆ ತಾಯಿಗಳು ವಿಧಿವಶರಾಗಲು, ಪರಮವಿರಕ್ತರಾದ ಇವರ ತಮ್ಮನು ಅಣ್ಣನಿಂದ ಸನ್ಯಾಸದೀಕ್ಷೆ ಪಡೆದು ಶ್ರೀ ವಿಷ್ಣುತೀರ್ಥರೆಂದು ಪ್ರಸಿದ್ಧರಾದರು.

ಭದ್ರಾನದಿಯ ದಂಡೆಯಲ್ಲಿರುವ ಕಳಸಗ್ರಾಮದ ಹತ್ತಿರ ಅಂಬುತೀರ್ಥ ಎಂಬಲ್ಲಿ ನದಿಯ ಪ್ರವಾಹ ತಡೆಯುವ ಸಲುವಾಗಿ ದೊಡ್ಡ ಬಂಡೆಗಲ್ಲನ್ನು ಇರಿಸಲು ಸಾವಿರಾರು ಜನರು ಪ್ರಯತ್ನಿಸಲು ಅದು ಸಾಧ್ಯವಾಗದಿದ್ದುದನ್ನು ಗಮನಿಸಿದ ಆಚಾರ್ಯರು ತಾವೊಬ್ಬರೆ ಒಂದೆ ಕೈಯಿಂದ ಅನಾಯಾಸವಾಗಿ ಆ ಬಂಡೆಗಲ್ಲನ್ನು ಎತ್ತಿ ನಿರ್ದಿಷ್ಟ ಸ್ಥಳದಲ್ಲಿ ಇರಿಸುವ ಮೂಲಕ ತಮ್ಮ ಭೀಮಬಲ ಪ್ರದರ್ಶಿಸಿದರು. ಆ ಶಿಲೆಯ ಮೇಲೆ "ಶ್ರೀ ಮಧ್ವಾಚಾರ್ಯೈರೇಕ ಹಸ್ತೇನ ಆನೀಯ ಸ್ಥಾಪಿತ ಶಿಲಾ" ಎಂಬುದಾಗಿ ಸ್ಪಷ್ಟ ಉಲ್ಲೇಖವಿದೆ. ಅದರ ಜೊತೆಯಲ್ಲಿ ಶ್ರೀ ಮಧ್ವರ ರೇಖಾಚಿತ್ರವಿದೆ.

ಹೀಗೆ ಬಹು ಅಮಾನುಷ ಮಹಿಮೆ ತೋರಿಸುತ್ತಾ, ತಮ್ಮ ಸಿದ್ಧಾಂತ ಪ್ರಚಾರ ಮಾಡುತ್ತಾ, ದುರ್ವಾದಿಗಳನ್ನು ವಾದದಲ್ಲಿ ಸೋಲಿಸುತ್ತಾ ೭೯ ವರ್ಷ ಮಾನವರ ದೃಷ್ಟಿ ಗೋಚರವಾಗಿದ್ದು. ನಂತರ ಬದರಿಗೆ ಪ್ರಯಾಣಿಸಲು ನಿಶ್ಚಯಿಸಿದರು. ತಮ್ಮ ಅವತಾರ ಉದ್ದೇಶ ಈಡೇರಲು, ತಮ್ಮ ತತ್ತ್ವವಾದ ಪರಂಪರೆಯನ್ನು ಮುಂದುವರೆಸುವ ಹೊಣೆಯನ್ನು ಶಿಷ್ಯರಿಗೆ ವಹಿಸಿ ಕಲಿವರ್ಷ ೪೪೧೮, ಪಿಂಗಲ ಸಂವತ್ಸರದ ಮಾಘ ಶುದ್ಧ ನವಮಿ ಕ್ರಿ.ಶ. ೧೩೧೭ರಂದು ಉಡುಪಿಯ ಅನಂತೇಶ್ವರ ದೇವಸ್ಥಾನದಲ್ಲಿ ಶಿಷ್ಯರಿಗೆ ಐತರೇಯ ಭಾಷ್ಯದ ಪಾಠ ಹೇಳುತ್ತಿರಲು, ಆಕಾಶದಲ್ಲಿ ದೇವತೆಗಳು ಪುಷ್ಪವೃಷ್ಟಿಗರೆಯಲು, ಆಚಾರ್ಯರು ಅದರಲ್ಲಿ ಮುಚ್ಚಿಹೋದರು. ಎಷ್ಟೋತ್ತಾದರೂ ಆಚಾರ್ಯರ ಧ್ವನಿ ಕೇಳದಿರಲು ಶಿಷ್ಯರು ಪುಷ್ಪದ ರಾಶಿಯಲ್ಲಿ ಆಚಾರ್ಯರನ್ನು ಹುಡುಕಲು ಅವರು ಅಲ್ಲಿ ಇರಲಿಲ್ಲ; ಬದರಿಗೆ ತೆರಳಿದ್ದರು. ಆಗ ಅವರಿಗೆ ಗುರುವಾಕ್ಯ "ನಾವು ಬದರಿಯಲ್ಲಿ ಸಾಕ್ಷಾತ್ತಾಗಿಯೂ, ಇಲ್ಲಿ ಅದೃಶ್ಯರೂಪದಿಂದ ಇರುವುದಾಗಿ" ಹೇಳಿದ್ದು ನೆನಪಾಯಿತು. ಆಗ ಭಕ್ತವೃಂದ ಸ್ತುತಿಸಿತು.

ನಮಸ್ತೆ ಪ್ರಾಣೇಶ ಪ್ರಣತವಿಭವಾಯಾಮ ನಿಮಗಾ ।
ನಮಃ ಸ್ವಾಮಿನ್ ರಾಮಪ್ರಿಯತಮ ಹನುಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್
ನಮಃ ಶ್ರೀಮನ್ಮಧ್ವಪ್ರದಿಶ ಸುದೃಶಂ ನೋ ಜಯ ಜಯಾ ॥

| ಮಠ | ಮೂಲಶಿಷ್ಯರು | ಪಟ್ಟದದೇವರು | ದ್ವಂದಮಠ |
|---|---|---|---|
| ಫಲಿಮಾರು | ಹೃಷಿಕೇಶ ತೀರ್ಥರು | ಶ್ರೀರಾಮ ದೇವರು | ದ್ವಂದಮಠ |
| ಅದಮಾರು | ನರಹರಿ ತೀರ್ಥರು | ಚತುರ್ಭುಜ ಕಾಲೀಯ ಮರ್ದನ ಕೃಷ್ಣದೇವರು | |
| ಕೃಷ್ಣಾಪುರ | ಜನಾರ್ಧನ ತೀರ್ಥರು | ದ್ವಿಭುಜ ಕಾಲೀಯ ಮರ್ದನ ಕೃಷ್ಣದೇವರು | ದ್ವಂದಮಠ |
| ಪುತ್ತಿಗೆ | ಉಪೇಂದ್ರ ತೀರ್ಥರು | ವಿಠಲದೇವರು | |
| ಶಿರೂರು | ವಾಮನತೀರ್ಥರು | ವಿಠಲದೇವರು | ದ್ವಂದಮಠ |
| ಸೋದೆ | ವಿಷ್ಣುತೀರ್ಥರು | ಭೂವರಾಹ ದೇವರು | |
| ಕಾಣಿಯೂರು | ರಾಮತೀರ್ಥರು | ನೃಸಿಂಹದೇವರು | ದ್ವಂದಮಠ |
| ಪೇಜಾವರ | ಅಧೋಕ್ಷಜ ತೀರ್ಥರು | ವಿಠಲದೇವರು | |

ಶ್ರೀ ಮಧ್ವಾಚಾರ್ಯರು ತಾವೇ ಎಂಟು ಮಂದಿ ಬಾಲವಟುಗಳಿಗೆ ಪರಮಹಂಸಾಶ್ರಮ ನೀಡಿ ಉಡುಪಿಕೃಷ್ಣನ ಪೂಜೆಗೆ ನಿಯೋಜಿಸಿ ಅವರು ತಮ್ಮ ಪರಂಪರೆಯನ್ನು ಮುಂದುವರೆಯುವಂತೆ ಮಾಡಿದರು. ಸನಕಾದಿ ಯತಿ ಪರಂಪರೆಯಲ್ಲಿ ಬಂದ ತಮ್ಮ ಆಶ್ರಮ ಗುರುಗಳಾದ ಶ್ರೀ ಅಚ್ಯುತ ಪ್ರೇಕ್ಷಾಚಾರ್ಯರ ಭೀಮಸೇತುಮುನಿವೃಂದ ಪೀಠಕ್ಕೆ ಶ್ರೀ ಸತ್ಯತೀರ್ಥರೆಂಬ ಸನ್ಯಾಸಿ ಶಿಷ್ಯರನ್ನು ಅಧಿಪತಿಯನ್ನಾಗಿ ಮಾಡಿ ಪರಂಪರೆ ಮುಂದುವರೆಯುವಂತೆ ಮಾಡಿದರು. ತಮ್ಮ ಅನುಜರಾದ ಶ್ರೀ ವಿಷ್ಣು ತೀರ್ಥರನ್ನು ಸುಬ್ರಮಣ್ಯಮಠಕ್ಕೆ ನಿಯೋಜಿಸಿ ಅವರಿಂದ ಮುಂದೆ ಶ್ರೀ ಅನಿರುದ್ಧತೀರ್ಥರ ಮುಖಾಂತರ ಪರಂಪರೆ ಮುಂದುವರೆಯುವಂತೆ ಮಾಡಿದರು.

ಶ್ರೀ ಪದ್ಮನಾಭತೀರ್ಥರಿಗೆ, ಶ್ರೀ ನರಹರಿತೀರ್ಥರಿಂದ ಕಳಿಂಗ ದೇಶದಿಂದ ತರಿಸಲ್ಪಟ್ಟ ಮೂಲರಾಮ ಪ್ರತಿಮೆ ನೀಡಿ ಘಟ್ಟದ ಮೇಲಿನ ಯತಿಪರಂಪರೆ ಮುಂದುವರೆಯುವಂತೆ ಮಾಡಿದರು. ಶ್ರೀ ಪದ್ಮನಾಭತೀರ್ಥರ ನಂತರ ಶ್ರೀ ನರಹರಿತೀರ್ಥ, ಶ್ರೀ ಮಾಧವತೀರ್ಥ, ಶ್ರೀ ಅಕ್ಷೋಭ್ಯತೀರ್ಥ ಹಾಗೂ ಶ್ರೀ ಜಯತೀರ್ಥರಿಂದ ಕಾಲಕಳೆದಂತೆ ಪ್ರಸಿದ್ಧ ಮಠಗಳಾದ ಉತ್ತರಾದಿ, ಶ್ರೀ ಪಾದರಾಯ, ರಾಘವೇಂದ್ರಸ್ವಾಮಿಗಳ ಮಠ ಹಾಗೂ ವ್ಯಾಸರಾಯ ಮಠಗಳು ಅಸ್ತಿತ್ವಕ್ಕೆ ಬಂದವು.

**ಶ್ರೀ ಮಧ್ವಮತದ ತತ್ತ್ವಗಳು :** ಶ್ರೀ ಮಧ್ವಮತದ ಸಕಲ ಪ್ರಮೇಯಗಳನ್ನು ಶ್ರೀ ವ್ಯಾಸರಾಜರು ಒಂದೇ ಶ್ಲೋಕದಲ್ಲಿ ಸಂಗ್ರಹಿಸಿ ಹೀಗೆ ಹೇಳುತ್ತಾರೆ.

ಶ್ರೀ ಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ ।
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂ ಗತಾಃ ॥
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಮ್ ।
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋಹರಿಃ ॥

೧. ಶ್ರೀ ಹರಿಯೇ ಸರ್ವೋತ್ತಮನು ೨. ಪ್ರಪಂಚವು ಸತ್ಯವಾದುದು ೩. ಪರಮಾರ್ಥಿಕವಾಗಿ ಭೇದವುಂಟು; ಅವು ಪಂಚಭೇದಗಳು. ೪. ಜೀವರೆಲ್ಲರೂ ಶ್ರೀ ಹರಿಯ ಅನುಚರರು. (ದಾಸರು) ೫. ತಾರತಮ್ಯ ಹೊಂದಿದವರು. ೬. ಸ್ವಾಭಾವಿಕವಾದ ಸ್ವರೂಪ ಸುಖದ ಅನುಭವವೇ ಮೋಕ್ಷವು ೭. ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಕಾರಣವು ೮. ಪ್ರತ್ಯಕ್ಷ ಅನುಮಾನ, ಆಗಮಗಳೇ ಪ್ರಮಾಣಗಳು ೯. ಶ್ರೀ ಹರಿಯೇ ಸಕಲ (ಅನಂತ) ವೇದಗಳಲ್ಲಿಯೂ ಪ್ರತಿಪಾದ್ಯನು.

### ಶ್ರೀ ಮಧ್ವಾಚಾರ್ಯರು ರಚಿಸಿದ ೩೭ ಸರ್ವ ಮೂಲ ಗ್ರಂಥಗಳು

**ಗೀತಾ ಪ್ರಸ್ಥಾನ ಗ್ರಂಥಗಳು :** ಗೀತಾಭಾಷ್ಯ, ಗೀತಾತಾತ್ಪರ್ಯ ನಿರ್ಣಯ

**ಸೂತ್ರಪ್ರಸ್ಥಾನ ಗ್ರಂಥಗಳು :** ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನ ಅಣುಭಾಷ್ಯ ನ್ಯಾಯ ವಿವರಣ.

**ಉಪನಿಷತ್ಪ್ರಸ್ಥಾನ ಗ್ರಂಥಗಳು :** ಐತರೇಯೋಪನಿಷದ್ಭಾಷ್ಯ, ಛಾಂದೋಗ್ಯೋ ಪನಿಷದ್ಭಾಷ್ಯ, ಬೃಹದಾರಣ್ಯ ಕೋಪನಿಷದ್ಭಾಷ್ಯ, ಈಶಾವಾಸ್ಯೋಪನಿಷದ್ಭಾಷ್ಯ, ತಲವಕಾರೋಪನಿಷದ್ಭಾಷ್ಯ, ಷಟ್ಪ್ರಶ್ನೋಪನಿಶದ್ಭಾಷ್ಯ, ಕಾಠಕೋಪನಿಷದ್ಭಾಷ್ಯ, ಅಥರ್ವಣೋಪನಿದ್ಭಾಷ್ಯ, ಮಾಂಡಕೋಪನಿಷದ್ಭಾಷ್ಯ, ತೈತಿರೀಯೋ ಪನಿಷದ್ಭಾಷ್ಯ.

**ಶ್ರುತಿ ಪ್ರಸ್ಥಾನ ಗ್ರಂಥ :** ಋಗ್ಭಾಷ್ಯ

**ಇತಿಹಾಸ ಪ್ರಸ್ಥಾನ ಗ್ರಂಥಗಳು :** ಮಹಾಭಾರತ ತಾತ್ಪರ್ಯ ನಿರ್ಣಯ, ಯಮಕ ಭಾರತ

**ಪುರಾಣ ಪ್ರಸ್ಥಾನ ಗ್ರಂಥ :** ಭಾಗವತ ತಾತ್ಪರ್ಯ ನಿರ್ಣಯ

**ಪ್ರಕರಣ ಗ್ರಂಥಗಳು :** ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ವಿಷ್ಣು ತತ್ತ್ವವಿನಿರ್ಣಯ, ಪ್ರಮಾಣ ಲಕ್ಷಣ, ಕಥಾಲಕ್ಷಣ, ಉಪಾಧಿಖಂಡನ, ಮಾಯಾವಾದ ಖಂಡನ, ಪ್ರಪಂಚ ಮಿಥ್ಯಾತ್ವನುಮಾನ ಖಂಡನ, ಕರ್ಮನಿರ್ಣಯ.

**ಆಚಾರ ಗ್ರಂಥಗಳು :** ತಂತ್ರಸಾರ ಸಂಗ್ರಹ, ಸದಾಚಾರಸ್ಮೃತಿ, ಜಯಂತಿ ನಿರ್ಣಯ, ಕೃಷ್ಣಾಮೃತ ಮಹಾರ್ಣವ, ಪ್ರಣವಕಲ್ಪ.

**ಸ್ತೋತ್ರ ಕೃತಿಗಳು :** ನಖಸ್ತುತಿಃ, ದ್ವಾದಶಸ್ತೋತ್ರ, ಕಂದುಕಸ್ತುತಿಃ.

**ಸನ್ಯಾಸದ ಬಗ್ಗೆ ಕೆಲವು ವಿಷಯಗಳು :** ಸನ್ಯಾಸ ಸ್ವೀಕರಿಸಿದವರೆಲ್ಲಾ ಮುಕ್ತಿ ಪಡೆಯುವುದಿಲ್ಲ. ಆದ್ದರಿಂದ ವೈರಾಗ್ಯವಿರುವವರು ಮಾತ್ರ ಸನ್ಯಾಸ ಸ್ವೀಕರಿಸಬೇಕು. ವಿಷಯ ವಿರಕ್ತಿ ಇಲ್ಲದವನು ಸನ್ಯಾಸ ತೆಗೆದುಕೊಂಡು ಜಾರಿದಲ್ಲಿ 'ಆರೂಢ ಪತಿತ' ಎನಿಸುವನು. ಆದುದರಿಂದ ವಿಷಯ ವಿರಕ್ತಿಯೇ ಸನ್ಯಾಸಕ್ಕೆ ಅರ್ಹತೆ.

**ಸನ್ಯಾಸಕ್ಕೆ ಅನರ್ಹರು :** ಸನ್ಯಾಸದೀಕ್ಷೆ ಪಡೆಯುವವನು ಷಂಢ ಪತಿತ, ಅಂಗವಿಕಲ, ಸ್ತ್ರೀಲೋಲ, ಕಿವುಡ, ಹಸುಳೆ, ಮೂಕ, ನಾಸ್ತಿಕ, ವೈರಾಗ್ಯಹೀನನಾಗಿರಬಾರದು.

**ಸನ್ಯಾಸದಲ್ಲಿ ವೈವಿಧ್ಯ :** ಸನ್ಯಾಸದಲ್ಲಿ ೧. ಕುಟೀಚಕ ೨. ಬಹೂದಕ ೩. ಹಂಸ ಹಾಗೂ ೪. ಪರಮಹಂಸ ಎಂಬುದಾಗಿ ನಾಲ್ಕು ವಿಧ ಈ ನಾಲ್ವರಲ್ಲಿ ಹಿಂದಿನವರಿಗಿಂತ ಮುಂದಿನವರು ಶ್ರೇಷ್ಠರು, ಇವರ ಲಕ್ಷಣಗಳು. ಲಘು ವಿಷ್ಣು ಸ್ಮೃತಿ, ಹಾರೀತ ಸ್ಮೃತಿ, ಸ್ಕಾಂಧ ಪುರಾಣ, ಪಾರಾಶರ ಸ್ಮೃತಿ ಮುಂತಾದ ಗ್ರಂಥಗಳಲ್ಲಿ ವರ್ಣಿತವಾಗಿವೆ.

**೧. ಕುಟೀಚಕ :** ಪುತ್ರಮಿತ್ರಾದಿಗಳ ಜೊತೆಯಿದ್ದು ಕಾವಿಶಾಟಿಧರಿಸಿ ಶಿಖಾಯಜ್ಞೋಪವೀತ ತ್ರಿದಂಡಗಳುಳ್ಳವನಾಗಿ ಭಗವದ್‌ಜ್ಞಾನಿಯಾಗಿರುವವನು ಕುಟೀಚಕನು.

**೨. ಬಹೂದಕ :** ಕುಟೀಚಕರಂತೆ ಕಾವಿಶಾಟಿ ಮುಂತಾದವುಗಳನ್ನು ಧರಿಸಿ ಏಕದಂಡಿಯಾಗಿ ಗೃಹವನ್ನು ತ್ಯಜಿಸಿ ಏಳು ಮನೆಗಳಲ್ಲಿ ಭಿಕ್ಷೆಬೇಡಿ ಜೀವಿಸುವವನು ಬಹೂದಕನು.

**೩. ಹಂಸ :** ಕಾವಿಶಾಟಿ ಧರಿಸಿ ಏಕದಂಡಧಾರಿಯಾಗಿ ಜ್ಞಾನಿಯಾಗಿರುವವನು ಹಂಸನು.

**೪. ಪರಮಹಂಸ :** ಶಿಖಾಯಜ್ಞೋಪವಿತಗಳನ್ನು ತ್ಯಜಿಸಿ ಏಕದಂಡಿಯಾಗಿ ಕಾಯಾ, ವಾಚಾ, ಮನಸಾ ನಿಯಂತ್ರಣದಲ್ಲಿಟ್ಟುಕೊಂಡು ತ್ರಿದಂಡಿಧಾರಿಯಾಗಿದ್ದು ವಿರಕ್ತನಾಗಿ ನಿರಂತರ ಪರಮಾತ್ಮನನ್ನೇ ಭಜಿಸುವವನು ಪರಮಹಂಸನು.

**೫. ಪಾರಿವ್ರಾಜ್ಯ ಪದಸ್ಥರು :** ಎಂಬ ಐದನೆಯ ವರ್ಗವೂ ಇದೆ. ಪಾರಿವ್ರಾಜ್ಯಪದಸ್ಥರಿಗೆ ಗುರುಗಳು ಪಟ್ಟಾಭಿಷೇಕವನ್ನು ಮಾಡುವರು. ಇವರಿಗೆ ತಪ್ತ ಮುದ್ರಾಧಿಕಾರ, ನಿಗ್ರಹಾನುಗ್ರಹಶಕ್ತಿ, ಪಾಠಪ್ರವಚನ, ಭಗವಂತನ ಪೂಜೆ, ಅನ್ನದಾನ, ಅಭಯದಾನ, ಯಾನಾರೋಹಣ, ರಾಜರಂತೆ ವೈಭವ, ಸ್ನೇಹತ್ಯಾಗ ಶರೀರ ಮತ್ತು ಗೃಹ, ಮಠ, ಮಂದಿರಾದಿಗಳಲ್ಲಿ ಮಮತೆ ಇಲ್ಲದಿರುವುದು, ನಾನು ನನ್ನದೆಂಬ ಭಾವನೆ ಪರಿತ್ಯಾಗ ಮೊದಲಾದವುಗಳು ಬ್ರಹ್ಮಾಂಡ ಪುರಾಣದಲ್ಲಿ ಹೇಳಲ್ಪಟ್ಟಿವೆ. ಆದುದರಿಂದ ಸಂಸ್ಥಾನ ಯತಿಗಳು ಈ ಐದನೆಯ "ಪಾರಿವ್ರಾಜ್ಯ ಪದಸ್ಥ"ರಲ್ಲಿ ಸೇರಿದವರು ಸಂಸ್ಥಾನದ ಯತಿಗಳನ್ನು "ಪಾರಿವ್ರಾಜ್ಯ ಪದಾಧಿಕಾರಿ ಪರಮಹಂಸ" ಎಂದು ಅರ್ಥಮಾಡಬಹುದು. ಇವರು ಪರಮಾತ್ಮನಿಗೆ ಅರ್ಪಿಸಿದ ಪರಿಮಳ ಸುವಾಸನೆಯುಕ್ತ ಶ್ರೀ ಗಂಧಾದಿಗಳನ್ನು ಭುಜ, ಹೆಗಲು, ಎದೆಗಳಿಗೆ ಹಚ್ಚಿಕೊಂಡು ರೇಷ್ಮೆಕಾವಿವಸ್ತ್ರ ಧರಿಸಬಹುದೆಂಬ ಸಂಪ್ರದಾಯವನ್ನು ಉಡುಪಿ ಅಷ್ಟಮಠದ ಯತಿಗಳು ಈಗಲೂ ಅನುಸರಿಸುತ್ತಿರುವರು.

**ಸೋದಾ ಮಠದ ವೈಶಿಷ್ಟ್ಯಗಳು :** ಶ್ರೀಮನ್ಮಧ್ವಾಚಾರ್ಯರು ಅಷ್ಟಮಠದ ಮೂಲ ಯತಿಗಳಿಗೆ ಹೆಚ್ಚಾಗಿ ರಾಮ, ಕೃಷ್ಣರ ಪ್ರತಿಮೆಗಳನ್ನು ಕೊಟ್ಟಿರುವರು. ಆದರೆ ಸೋದಾಮಠದ ಮೂಲ ಪುರುಷರಾದ ಶ್ರೀ ವಿಷ್ಣುತೀರ್ಥರಿಗೆ ಭೂವರಾಹಮೂರ್ತಿಯನ್ನು ಅನುಗ್ರಹಿಸಿದ್ದಾರೆ. ಭೂವರಾಹದೇವರನ್ನು ಪೂಜಿಸುವವರು ಶ್ರೇಷ್ಠಮಟ್ಟದ ಸಾಧಕರಾಗಿರಬೇಕು. ತ್ರಿಕಾಲಜ್ಞಾನಿಗಳಾದ ಆಚಾರ್ಯರು ಸೋದಾಮಠದಲ್ಲಿ ಮುಂದೆ ಉಚ್ಚಮಠದ ಸಾಧಕರು ಅವತರಿಸಿ ಬಂದು ತಮ್ಮ ಸಾಧನೆ ಮಾಡಿಕೊಳ್ಳುವರೆಂಬುದನ್ನು ತಿಳಿದೇ ಅವರಿಗೆ ಭೂವರಾಹದೇವರನ್ನು ಅನುಗ್ರಹಿಸಿರುವರು ಇದು ಒಂದು ವೈಶಿಷ್ಟ್ಯವು.

ಶ್ರೀ ವಾದಿರಾಜ ಗುರುಸಾರ್ವಭೌಮರಿಗೆ ಅರ್ಚಾರೂಪದಿಂದ ಒಲಿದು ಬಂದ 'ಶ್ರೀಹಯಗ್ರೀವ' ದೇವರನ್ನು ಶ್ರೀ ಮಠದ ಪಟ್ಟದದೇವರಾದ ಶ್ರೀ ಭೂವರಾಹ ದೇವರ ಜೊತೆಯಲ್ಲಿ ಸಮಾನವಾಗಿ ಪೂಜಿಸುವ ಸಂಪ್ರದಾಯವಿದೆ. ಹಾಗಾಗಿ ಸೋದೆ ಮಠದಲ್ಲಿ ಇಬ್ಬರು ಪಟ್ಟದದೇವರಿದ್ದಾರೆ. ಇದೂ ಒಂದು ವೈಶಿಷ್ಟ್ಯ.

ಶ್ರೀವಾದಿರಾಜರ ಕಾಲದಿಂದ ಭೀಮಸೇನ ಕರಾರ್ಚಿತ ನರಸಿಂಹದೇವರು, ವೃಂದಾವನಾಚಾರ್ಯರಕಾಲದಿಂದ ವ್ಯಾಸಮುಷ್ಟಿ ಸಾಲಿಗ್ರಾಮ ಹಾಗೂ ಇನ್ನೂ ಹಲವಾರು ಸಾಲಿಗ್ರಾಮ, ಪ್ರತಿಮೆಗಳು ಪೂಜಿಸಲ್ಪಡುತ್ತಿವೆ. ಈ ಮಠದಲ್ಲಿರುವಷ್ಟು ದೇವರು ಬೇರೆಯಾವ ಮಠದಲ್ಲಿಯೂ ಇಲ್ಲ.

ಶ್ರೀ ಮಠದಲ್ಲಿ ಪ್ರತಿದಿನವೂ ಶ್ರೀವೇದವ್ಯಾಸದೇವರಿಗೆ ನವವಿಧ ಪೂಜೆ ನಡೆಯುತ್ತದೆ. ಹಗಲಿನ ಮಹಾಪೂಜೆ ಮುಗಿದ ಕೂಡಲೇ ಶ್ರೀ ವೇದವ್ಯಾಸರಿಗೆ ರಾತ್ರಿ ಪೂಜೆ, ನೈವೇದ್ಯ ಮಂಗಳಾರತಿ ಸಮರ್ಪಿಸಲಾಗುತ್ತದೆ.

ಪರ್ಯಾಯ ಕಾಲದಲ್ಲಿ ಶ್ರೀ ಕೃಷ್ಣಮಠದಲ್ಲಿ ಮಹಾಪೂಜೆಯಾಗುವಾಗ ಎರಡು ಸಿಡಿಮದ್ದು ಸುಡುವ ವಾಡಿಕೆಯಿದೆ. ಆದರೆ ಶ್ರೀ ಸೋದಾಮಠದ ಪರ್ಯಾಯಕಾಲದಲ್ಲಿ ಶ್ರೀ ವೇದವ್ಯಾಸ ದೇವರ ಪೂಜಾನಿಮಿತ್ತವಾಗಿ ಇನ್ನೇ ಸಿಡಿಮದ್ದು ಸುಡುವ ಸಂಪ್ರದಾಯವಿದೆ.

ಶ್ರೀ ಮಠದಲ್ಲಿ ಮಹಾಪೂಜಾಕಾಲದಲ್ಲಿ ಶ್ರೀ ವಾಯುದೇವರೇ ಬಸವನರೂಪದಲ್ಲಿ ಸನ್ನಿಹಿತರಾಗಿರುವ ಘಂಟೆಯನ್ನು (ಸೋದಾ ರಾಜನ ಐಂದ್ರಜಾಲಿಕ ಮಾಯಾ ಗುರುವನ್ನು ಗೆದ್ದುದರ ಕುರುಹಾಗಿ) ಉಪಯೋಗಿಸಲ್ಪಡುತ್ತಿರುವುದು ಮಾಧ್ವ ಪರಂಪರೆಯಲ್ಲಿಯೇ ಅತ್ಯಂತ ವಿಶಿಷ್ಟವಾದುದು.

ಶ್ರೀ ಮಠದಲ್ಲಿ ಪೂಜಾನಂತರ ದೇವರಿಗೆ ಸಾಷ್ಟಾಂಗ ಪ್ರಣಾಮ ಸಲ್ಲಿಸಿ ನಂತರ ಪ್ರದಕ್ಷಿಣೆ ಬರುವ ಸತ್ಸಂಪ್ರದಾಯವಿದೆ. ಇತರ ಎಲ್ಲಾ ಮಠಮಂದಿರಗಳಲ್ಲಿ ಮೊದಲು ಪ್ರದಕ್ಷಿಣೆ ಬಂದು ನಂತರ ನಮಸ್ಕಾರ ಸಲ್ಲಿಸುವ ಕ್ರಮವಿದೆ.

**ಶ್ರೀವೇದವೇದ್ಯರ ಕಾಲದಿಂದ ಬಂದ ಸಂಪ್ರದಾಯಗಳು :** ಶ್ರೀ ಗುರುಸಾರ್ವಭೌಮರ ಭಾವಿಸಮೀರತ್ವ ದ್ಯೋತಕವಾಗಿ ಶ್ರೀ ಮಠದಲ್ಲಿ ಶ್ರೀ ಮುಖ್ಯ ಪ್ರಾಣದೇವರಿಗೂ ಶ್ರೀ ಗುರುರಾಜರಿಗೂ ಸಮಾನ ಪೂಜೆ, ಸಮಾನ ನೈವೇದ್ಯ ಸಮರ್ಪಣೆ ನಡೆಯುವ ಸತ್ಸಂಪ್ರದಾಯವಿದೆ.

ಶ್ರೀ ಮಠದಲ್ಲಿ ಪ್ರತಿದಿನರಾತ್ರಿ ಪೂಜೆಯಾದ ನಂತರ ಶ್ರೀ ವಾದಿರಾಜ ಗುರುಸಾರ್ವಭೌಮರ ಭಾವಿಸಮೀರತ್ವದ್ಯೋತಕವಾದ ಎರಡು ಪರಾಕುಗಳನ್ನು ಘೋಷಿಸಲಾಗುತ್ತದೆ.

ಕಳೆದ ನಾಲ್ಕು ನೂರು ವರ್ಷಗಳಿಂದ ಶ್ರೀ ಮಠದಲ್ಲಿ ಶ್ರೀ ಗುರುರಾಜರ ಮೃತ್ತಿಕಾಧಾರಣೆ ಮತ್ತು ಮೃತ್ತಿಕಾ ತೀರ್ಥಪ್ರಾಶನದ ಸತ್ಸಂಪ್ರದಾಯ ನಡೆದು ಬಂದಿದೆ.

ಪ್ರತಿದಿನ ಪೂಜಾ ಸಮಯದಲ್ಲಿ ಭೂತರಾಜರಿಗೂ ಅಭಿಷೇಕ, ನೈವೇದ್ಯ ಹಾಗೂ ಆರತಿಯಿಂದ ಪೂಜೆ ಮಾಡಲ್ಪಡುತ್ತದೆ. ರಾತ್ರೆ ಭೂತರಾಜರ ಪೂಜೆ ನಡೆಯುವುದು. ನಡೆದು ಬಂದಿದೆ.

ಒಮ್ಮೆ ವಾದಿರಾಜರು ಏಕಾದಶಿಯಂದು ಅಲಂಕಾರ ಪೂಜೆ ಮುಗಿಸಿ ಧ್ಯಾನಮಗ್ನರಾಗಿ ಮಾನಸ ಪೂಜೆ ಮಾಡುತ್ತಾ ಹಗಲು ಮತ್ತು ಇಡೀ ರಾತ್ರಿ ಧ್ಯಾನದಲ್ಲೇ ಕಳೆದರು. ಧ್ಯಾನದಿಂದ ಬಹಿರ್ಮುಖರಾದಾಗ ದ್ವಾದಶೀ ಸಮೀಪಿಸಿತ್ತು. ಆದುದರಿಂದ ಏಕಾದಶಿ ಪೂಜೆಯನ್ನು ಫಲಸಮರ್ಪಣೆಯೊಂದಿಗೆ ಮುಗಿಸಿ ನಂತರ ದ್ವಾದಶೀ ಪೂಜೆಯನ್ನು ಮುಂದುವರೆಸಿದರು.

ಇದರ ನೆನಪಿಗಾಗಿ ಇಂದಿಗೂ ಶ್ರೀ ಮಠದಲ್ಲಿ ಏಕಾದಶೀ ದಿನದಂದು ಅಲಂಕಾರವಾದ ಮೇಲೆ ಫಲಸಮರ್ಪಣೆ ಮಾತ್ರಮಾಡಿ ಪೂಜೆ ಮುಗಿಸುವ ಸಂಪ್ರದಾಯ ಬೆಳೆದು ಬಂದಿದೆ. ಆದಿನ ಮಹಾಮಂಗಳಾರತಿ ಇತ್ಯಾದಿಗಳಿರುವುದಿಲ್ಲ.

ಹಿಂದೊಮ್ಮೆ ಭಕ್ತನೊಬ್ಬ ದೈವಪ್ರೇರಣೆಯಂತೆ ಸರ್ವಶಾಕಗಳನ್ನು (ಬಗೆ ಬಗೆಯ ತರಕಾರಿಗಳು) ಮಧ್ಯವಾಟಮಠದಲ್ಲಿದ್ದ ಶ್ರೀಮಧ್ವರ ಸನ್ನಿಧಾನಕ್ಕೆ ಸಮರ್ಪಿಸಿದ. ಶ್ರೀ ಹರಿಯ ಸಂಕಲ್ಪವನ್ನರಿತ ಶ್ರೀ ಮಧ್ವರು ಶಾಕವ್ರತದ ಕಾಲವಾಗಿದ್ದರೂ ಆ ಬಗೆ ಬಗೆಯ ಶಾಕಗಳನ್ನು ವೇದವ್ಯಾಸದೇವರಿಗೆ ಸಮರ್ಪಿಸಿದರು. ಅದರ ಕುರುಹಾಗಿ ಇಂದಿಗೂ ಆಷಾಢಹುಣ್ಣಿಮೆಯಂದು ಶ್ರೀ ವೇದ್ವ್ಯಾಸರಿಗೆ ಮಧ್ಯಾಹ್ನ ಸರ್ವಶಾಕ ಸಮರ್ಪಣೆ ಮಾಡಿ ಭಕ್ತರೆಲ್ಲಾ ಸಮರ್ಪಿತವಾದ ಶಾಕ ಪ್ರಸಾದವನ್ನು ಸ್ವೀಕರಿಸುವ ಸಂಪ್ರದಾಯವಿದೆ.

ಸೋದಾಮಠದ ಮೂಲ ಯತಿಗಳಾದ ಶ್ರೀವಿಷ್ಣು ತೀರ್ಥರು ಶ್ರೀಮಧ್ವಾಚಾರ್ಯರ ಪೂರ್ವಾಶ್ರಮದ ಅನುಜರು. ಅವರು ಅತ್ಯಕ್ತದೇಹವುಳ್ಳವರಾಗಿ ಈಗಲೂ ಕುಮಾರ ಪರ್ವತಶ್ರೇಣಿಯಲ್ಲಿರುವ ಹರಿಶ್ಚಂದ್ರ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿರುವರು. ೩೨೦೦೦ ವರ್ಷಗಳ ಬಳಿಕ ಶ್ರೀ ಮಧ್ವಾಚಾರ್ಯರ ಅಪ್ಪಣೆಯಂತೆ ಕೆಳಗಿಳಿದು ಬಂದು ಸೇತುತಿಲದಲ್ಲಿಯ ಸರ್ವಮೂಲಗ್ರಂಥಗಳನ್ನು ಹೊರತೆಗೆದು ಖಿಲವಾದ ಸಿದ್ಧಾಂತವನ್ನು ಪುನಃಸ್ಥಾಪನೆ ಮಾಡುತ್ತಾರೆ. ಇಂತಹ ಮಹನೀಯರು ಈ ಮಠದ ಮೂಲಪುರುಷರಾಗಿರುವುದು ಈ ಮಠದ ವೈಶಿಷ್ಟ್ಯ.

ಭಾವೀ ಸಮೀರರೆಂದೇ ಖ್ಯಾತರಾದ ಲಾತವ್ಯನಾಮಕ ಋಜುಗಳಾದ ಶ್ರೀ ವಾದಿರಾಜರು ಸಶರೀರರಾಗಿ ೧೨೦ ವರ್ಷವಿದ್ದು, ನಂತರ ಸಶರೀರ ವೃಂದಾವನಸ್ಥರಾದ ಮಹನೀಯರು. ಮಧ್ವಾಚಾರ್ಯರ ಸದೃಶರಾಗಿದ್ದರು. ಮಧ್ವಾಚಾರ್ಯರಂತೆ ಉಡುಪಿಯಷ್ಟೇ ಪವಿತ್ರವಾದ ಸೋದಾಕ್ಷೇತ್ರದಲ್ಲಿ ತ್ರಿವಿಕ್ರಮ ದೇವರನ್ನು ಪ್ರತಿಷ್ಠಾಪಿಸಿ ತಮ್ಮ ಪಂಚವೃಂದಾವನದಲ್ಲಿ ೩೩ ಕೋಟಿ ದೇವತಾ ಸನ್ನಿಧಾನಯಿರುವಂತೆ ಮಾಡಿ, ಗವ್ಯ ಪದಾರ್ಹ ಋಜುಗಳಾದ ವೇದವೇದ್ಯರು, ಭಾವಿ ಗರುಡ ಪದಾರ್ಹ ವೇದನಿಧಿಗಳು. ರುದ್ರಪದಾರ್ಹ ಭೂತರಾಜರನ್ನು ತಮ್ಮ ಭೃತ್ಯನನ್ನಾಗಿ ಮಾಡಿಕೊಂಡು, ಭಾವೀ ಇಂದ್ರ ಪದಾರ್ಹ ವಿಶ್ವಪ್ರಿಯರನ್ನು ತಮ್ಮ ಮಠದ ಪರಂಪರೆಯಲ್ಲಿ ಜನ್ಮವೆತ್ತುವಂತೆ ಮಾಡಿ ಅವರ ಸೇವೆ ಸ್ವೀಕರಿಸಿ ಅನುಗ್ರಹ ಮಾಡಿದವರು ಶ್ರೀ ವಾದಿರಾಜರು. ಇಂತಹ ಪರಂಪರೆಯನ್ನು ಬೇರೆ ಎಲ್ಲಿಯೂ ಕಾಣಲಾರೆವು.

ಶ್ರೀ ವಿಷ್ಣುತೀರ್ಥರಿಂದ ಶ್ರೀ ವಿಶ್ವವಲ್ಲಭರ ವರೆಗೂ ಪ್ರತಿಯೊಬ್ಬರು ಅವರ ಗುರುಗಳ ಸಾಕ್ಷಾತ್ ಕರಕಮಲ ಸಂಜಾತರಾಗಿರುವುದು ಈ ಮಠದ ವೈಶಿಷ್ಟ್ಯವಾಗಿದೆ.

**ಸೋದಾಮಠದ ಗುರುಪರಂಪರೆ : (ಗುರುರಾಜಾಚಾರ್ಯ, ಕೃ. ನಿಪ್ಪಾಣಿಯವರ ಕೃಪೆಯಿಂದ)**

**೧. ಶ್ರೀ ವಿಷ್ಣುತೀರ್ಥರು :** ಶ್ರೀ ಮಧ್ವಾಚಾರ್ಯರಿಗೆ ಶ್ರೀ ವಿಷ್ಣುತೀರ್ಥರು ಪೂರ್ವಾಶ್ರಮದ ಸಹೋದರರು. ನಂತರ ಆಶ್ರಮ ಶಿಷ್ಯರು. ಮಾತಾಪಿತರ ಕಾಲದ ನಂತರ, ಪರಮ ವೈರಾಗಿಗಳಾಗಿದ್ದ ಇವರು ಅಣ್ಣನಿಂದ ಆಶ್ರಮ ಪಡೆದರು. ಯಾವಾಗಲೂ ಶ್ರವಣಾದಿಗಳಿಂದಲೂ ಕಠಿಣತಪಸ್ಸಿನಿಂದಲೂ ಜಿತೇಂದ್ರಿಯರಾಗಿ ಧ್ಯಾನನಿರತರಾಗಿ ಭಗವದ್ ಸಾಕ್ಷಾತ್ಕಾರ ಹೊಂದಿ ಧನ್ಯರಾದರು ಶ್ರೀ ವಿಷ್ಣುತೀರ್ಥರು ಸನ್ಯಾಸ ಪದ್ಧತಿ ಶ್ರವಣದ್ವಾದಶೀನಿರ್ಣಯ, ವಿಷ್ಣು ಪಂಚಕ

ನಿರ್ಣಯ ಮತ್ತು ಪಂಚ ಸಂಸ್ಕಾರಸಂಗ್ರಹ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಶ್ರೀ ವಿಷ್ಣುತೀರ್ಥರಿಗೆ ವ್ಯಾಸತೀರ್ಥರು ಮತ್ತು ಅನಿರುದ್ಧತೀರ್ಥರು ಎಂಬುದಾಗಿ ಇಬ್ಬರು ಶಿಷ್ಯರು. ಶ್ರೀ ವ್ಯಾಸತೀರ್ಥರಿಂದ ಪ್ರಕೃತ ಸೋದೆಮಠವು, ಅನಿರುದ್ಧತೀರ್ಥರಿಂದ ಸುಬ್ರಮಣ್ಯ ಮಠವು ಮುಂದುವರೆಯಿತು. ಅನಿರುದ್ಧತೀರ್ಥರಿಗೆ ಐದುವ್ಯಾಸಮುಷ್ಠಿಗಳನ್ನುಳ್ಳ ಅಭೇದ್ಯ ಸಂಪುಟವನ್ನು ಕರುಣಿಸಿದರು. ವ್ಯಾಸತೀರ್ಥರಿಗೆ ಮಧ್ವಾಚಾರ್ಯರು ಅನುಗ್ರಹಿಸಿಕೊಟ್ಟ ಶ್ರೀ ಭೂವರಾಹ ಮೂರ್ತಿ ಕೊಟ್ಟು ಪರಂಪರೆ ಮುಂದುವರೆಯುವಂತೆ ಮಾಡಿದರು. ಶ್ರೀ ವಿಷ್ಣು ತೀರ್ಥರು ಈಗಲೂ ತಪಸ್ಸನ್ನು ಆಚರಿಸುತ್ತಿದ್ದಾರೆ. ಶ್ರೀ ವಿಷ್ಣುತೀರ್ಥರು ಕುಮಾರ ಪರ್ವತಾರೋಹಣ ಮಾಡಿದ್ದು ಪುಷ್ಯ ಪೌರ್ಣಿಮೆಯಂದು.

**೨. ವ್ಯಾಸತೀರ್ಥರು :** ಪಂಡಿತ ಚಕ್ರವರ್ತಿಗಳು ತಪೋವೈರಾಗ್ಯ ಮೂರ್ತಿಗಳು. ಶ್ರೀ ಮದಾನಂದತೀರ್ಥರಿಗೆ ಅಚ್ಚುಮೆಚ್ಚಿನವರಾಗಿ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು. ವೃಂದಾವನ ಪ್ರವೇಶ ಕ್ರಿ.ಶ. ೧೩೨೭.

**೩. ಶ್ರೀ ವೇದ್ಯತೀರ್ಥರು :** ಸದಾಕಾಲ ಪಾಠ ಪ್ರವಚನ ನಿರತರಾಗಿದ್ದು ೯ ವರ್ಷ ಪೀಠವನ್ನಾಳಿ ೧೩೩೬ರಲ್ಲಿ ವೃಂದಾವನ ಪ್ರವೇಶ. ಮಾಡಿದರು.

**೪. ಶ್ರೀ ವೇದಗರ್ಭತೀರ್ಥರು :** ಮಂತ್ರ ಸಿದ್ಧಿಯನ್ನು ಪಡೆದು ಅನೇಕ ಸಜ್ಜನರನ್ನು ಉದ್ಧರಿಸಿದರು. ವೃಂದಾವನ ಪ್ರವೇಶ ಕ್ರಿ.ಶ. ೧೩೪೬ ಪೀಠವನ್ನಾಳಿದ್ದು ಹತ್ತುವರ್ಷ.

**೫. ಶ್ರೀ ಪರೇಶತೀರ್ಥರು :** ಸರ್ವಮೂಲಗ್ರಂಥವನ್ನು ಪುಸ್ತಕ ಸಹಾಯವಿಲ್ಲದೆ ಅನುವಾದ ಮಾಡುತ್ತಾ ಪಾಠಪ್ರವಚನದಲ್ಲಿ ನಿರತರಾಗಿ ೮ವರ್ಷ ಪೀಠವನ್ನಾಳಿ ೧೩೫೪ರಲ್ಲಿ ವೃಂದಾವನ ಪ್ರವೇಶ.

**೬. ಶ್ರೀ ವಾಮನತೀರ್ಥರು :** ಪುಣ್ಯಕ್ಷೇತ್ರ ಸಂದರ್ಶಿಸುತ್ತ ಭಾಗವತ ಪ್ರವಚನ ಮಾಡುತ್ತಿದ್ದರು. ೮ ವರ್ಷ ಪೀಠವಾಳಿ ೧೩೬೨ರಲ್ಲಿ ವೃಂದಾವನ ಪ್ರವೇಶ.

**೭. ವಾಸುದೇವತೀರ್ಥರು :** ಸಂಚಾರ ಮಾಡದೆ ಕೃಷ್ಣ ಸನ್ನಿಧಿಯಲ್ಲಿರುತ್ತಾ ಬ್ರಹ್ಮಸೂತ್ರ ಭಾಷ್ಯದ ಪಾಠಪ್ರವಚನ ಮಾಡುತ್ತಾ ೭ ವರ್ಷ ವೇದಾಂತ ಸಾಮ್ರಾಜ್ಯವನ್ನಾಳಿದರು.

**೮. ಶ್ರೀ ವೇದವ್ಯಾಸತೀರ್ಥರು :** ಶ್ರೀಗಳು ಪರವಾದಿ ನಿಗ್ರಹದಲ್ಲಿ ನಿಪುಣರಾಗಿದ್ದರು. ವೇದಾಂತ ಸಾಮ್ರಾಜ್ಯ ಪಟ್ಟ ೮ ವರ್ಷ. ವೃಂದಾವನ ಪ್ರವೇಶ ೧೩೭೭.

**೯. ಶ್ರೀ ವರಾಹತೀರ್ಥರು :** ಜಪತಪಾನುಷ್ಠಾನದಲ್ಲಿ ಆಸಕ್ತಿ ಹೊಂದಿದ ಇವರು ಏಕಾಂತಪ್ರಿಯರು. ೯ ವರ್ಷ ಪೀಠವನ್ನಾಳಿ ಕ್ರಿ.ಶ. ೧೩೮೬ರಲ್ಲಿ ವೃಂದಾವಸ್ಥರಾದರು.

**೧೦. ಶ್ರೀ ವೇದಾತ್ಮತೀರ್ಥರು :** ಸ್ವತಃ ಕವಿಗಳಾದ ಇವರು "ಕವಿಕರ್ಣಾಮೃತಂ" ಎಂಬ ವಾಯುಸ್ತುತಿಗೆ ವ್ಯಾಖ್ಯಾನ ಬರೆದಿರುವರು ಹಾಗೂ ಅಸಾಧಾರಣ ವ್ಯಾಕರಣ ಪಂಡಿತರಾಗಿದ್ದರು. ವೃಂದಾವನ ಪ್ರವೇಶ ೧೩೯೮ ಪಟ್ಟ೧೨ ವರ್ಷ.

**೧೧. ಶ್ರೀ ವಿಶ್ವವಂದ್ಯತೀರ್ಥರು :** ವ್ಯಾಖ್ಯಾರ್ಥ ನಿಪುಣರು ಎದುರಾಳಿಯನ್ನು ಚುಟುಕು ಉತ್ತರದಿಂದ ಸೋಲಿಸುತ್ತಿದ್ದರು. ವೃಂದಾವನ ಪ್ರವೇಶ ೧೪೨೨ ಪಟ್ಟ ೨೪ ವರ್ಷ.

೧೨. ಶ್ರೀ ರತ್ನಗರ್ಭತೀರ್ಥರು : ನಾರಳದಲ್ಲಿದ್ದು ಘೋರ ತಪಸ್ಸನ್ನಾಚರಿಸಿದರು. ತಮ್ಮ ಯೋಗ ಶಕ್ತಿಯಿಂದ ಭೂಮಿಯಿಂದ ನೂರಾರು ಅಡಿ ಮೇಲೆ ಹೋಗಿ ಅಲ್ಲಿ ಅಂತರಿಕ್ಷದಲ್ಲಿ ಘೋರತಪಸ್ಸನ್ನಾಚರಿಸುತ್ತಿದ್ದರು. ವೈರಿಗಳ ಆಕ್ರಮಣಕ್ಕೆ ತುತ್ತಾಗಿ ರಾಜ್ಯಭ್ರಷ್ಟನಾಗಿ ಪಲಾಯನ ಮಾಡುತ್ತಿದ್ದ ಚೌಟರಾಜನು ಶರಣು ಬರಲು ಶ್ರೀ ವರಾಹದೇವರ ಅನುಗ್ರಹದಿಂದ ವೈರಿನಾಶವಮಾಡಿಸಿ ಅನುಗ್ರಹಿಸಿದರು. ಸಂತುಷ್ಟನಾದ ರಾಜನು ವಿಶಾಲವಾದ ತಪೋಭೂಮಿಯನ್ನು ಧಾರೆಯೆರೆದು ಧನ್ಯನಾದನು. ತಮ್ಮ ಗುರುಗಳಿರುವಾಗಲೇ ಶ್ರೀವೇದಾಂಗತೀರ್ಥರನ್ನು ಶಿಷ್ಯರನ್ನಾಗಿ ಸ್ವೀಕರಿಸಿ ನಾರಳದಲ್ಲಿ ಕ್ರಿ.ಶ. ೧೪೨೨ಕ್ಕಿಂತ ಮೊದಲೇ ವೃಂದಾವನಸ್ಥರಾದರು.

೧೩. ಶ್ರೀ ವೇದಾಂಗತೀರ್ಥರು : ವೇದವೇದಾಂತಾದಿ ಶಾಸ್ತ್ರಗಳಲ್ಲಿ ಅಪಾರಜ್ಞಾನ ಹೊಂದಿದ್ದರು. ಪ್ರಥಮವಾಗಿ ಸುಮಧ್ವವಿಜಯಕ್ಕೆ ಟೀಕೆ ಬರೆದಿರುತ್ತಾರೆ. ಇವರು ಕೃತಿಗಳು ೧. ಶ್ರೀ ವಾಯುಸ್ತುತಿ ಟೀಕಾ, ೨. ಸುಮಧ್ವವಿಜಯಕ್ಕೆ ಟೀಕಾ ೩. ಮಹಾಭಾರತ ತಾತ್ಪರ್ಯ ನಿರ್ಣಯ ಟೀಕಾ ೪. ಶ್ರೀ ಮಧ್ಭಗವದ್ಗೀತಾ ಟೀಕಾ ೫. ಪಾರಿಜಾತಹರಣ ಟೀಕಾ ೬. ಅಣುಮಧ್ವವಿಜಯ ಟೀಕಾ ೭. ಭಜಮಧ್ವೇಶಂ ೮. ಐತರೇಯ ಉಪನಿಷದ್ವ್ಯಾಖ್ಯ ಟೀಕಾ ಇನ್ನು ಹಲವಾರು ಕೃತಿಗಳು ರಚಿಸಿರಬಹುದೆಂದು ನಂಬಿಕೆ. ಸಿದ್ಧಾಪುರದ ಹತ್ತಿರ ಬೀಳಗಿಯೆಂಬಲ್ಲಿ ಕ್ರಿ.ಶ. ೧೪೪೧ರಲ್ಲಿ ವೃಂದಾವನ ಪ್ರವೇಶ. ಶ್ರೀವಾದಿರಾಜರು ಇವರ ವೃಂದಾವನದ ಬಳಿ ತಮ್ಮ ಕೃತಿಗಳನ್ನೆಲ್ಲಾ ಭೂಗತ ಮಾಡಿ, ಭೂತರಾಜರನ್ನು ಸ್ಥಾಪಿಸಿರುವರು.

೧೪. ಶ್ರೀ ವಿದ್ಯಾಪತಿತೀರ್ಥರು : ಹೆಚ್ಚಾಗಿ ಉಡುಪಿಯಲ್ಲಿದ್ದು ಸಚ್ಛಾಸ್ತ್ರಗ್ರಂಥಗಳನ್ನು ಪಾರಾಯಣ ಮಾಡುತ್ತಾ ಇದ್ದರಂತೆ ವೃಂದಾವನ ಪ್ರವೇಶ ೧೪೪೯. ೮ ವರ್ಷ ಪಟ್ಟ.

೧೫. ಶ್ರೀ ವಿಶ್ವವಂದ್ಯತೀರ್ಥರು(೨) : ಪರಮಕರುಣಾಳುಗಳಾದ ಗುರುಗಳು ಸಜ್ಜನರ ಉದ್ಧಾರಕರು. ಕೆಲವು ದುಷ್ಕರ್ಮಿಗಳು ಪರ್ಯಾಯ ಕಾಲದಲ್ಲಿ ತೊಂದರೆಯನ್ನುಂಟು ಮಾಡಿದಾಗ ತಮ್ಮ ತಪಸ್ಸಿದ್ಧಿಯಿಂದಲೇ ಸ್ತಂಭಿತರನ್ನಾಗಿ ಮಾಡಿದರಂತೆ. ಪಟ್ಟ ೯ ವರ್ಷ. ವೃಂದಾವನ ಪ್ರವೇಶ ೧೪೫೮.

೧೬. ಶ್ರೀ ವಿಶ್ವತೀರ್ಥರು : ಆಶ್ರಮ ಧರ್ಮಗಳನ್ನು ಚಾಚೂತಪ್ಪದೆ ಆಚರಿಸುತ್ತಾ ಸಿದ್ಧಾಂತ ಪ್ರಚಾರ ಮಾಡಿದ ಮಹನೀಯರು ೮ ವರ್ಷ ಪಟ್ಟ ಕಾಲ. ಕ್ರಿ.ಶ. ೧೪೬೬ರಲ್ಲಿ ವೃ. ಪ್ರವೇಶ

೧೭. ಶ್ರೀ ವಿಠ್ಠಲತೀರ್ಥರು : ಮಧ್ಯವಾಟಮಠದಲ್ಲಿದ್ದು ಶ್ರೀ ವೇದವ್ಯಾಸರ ಸೇವೆ ಮಾಡಿ ಅವರ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದರು. ವೃಂದಾವನ ಪ್ರವೇಶ ೧೪೭೩.

೧೮. ಶ್ರೀ ವರದರಾಜ ತೀರ್ಥರು(೧) : ಮೊದಲ ಬಾರಿಗೆ ಕುಂಭಾಶಿ ಮಠ ಜೀರ್ಣೋದ್ಧಾರ ಮಾಡಿದರು. ಕುಂಭಾಶಿಯಲ್ಲಿ ಇವರ ವೃಂದಾವನವಿದೆ. ವೃಂದಾವನ ಪ್ರವೇಶ ಕ್ರಿ.ಶ. ೧೪೮೧ ಪಟ್ಟ ೮ ವರ್ಷ.

೧೯. ಶ್ರೀ ವಾಗೀಶತೀರ್ಥರು : ಶ್ರೀ ವಾದಿರಾಜರ ಆಶ್ರಮ ಗುರುಗಳಾದ ಶ್ರೀ ವಾಗೀಶತೀರ್ಥರು ಮಹಾಮಹಿಮರು. ಇವರ ಮುಖಾಂತರವೇ ಭೂವರಾಹದೇವರು ಶ್ರೀ ವಾದಿರಾಜರ ಅವತಾರಕ್ಕಾಗಿ ಶ್ರೀರಾಮಾಚಾರ್ಯ ದಂಪತಿಗಳನ್ನು ಅನುಗ್ರಹಿಸಿದ್ದಾರೆ. ಇವರು ಕ್ರಿ.ಶ. ೧೫೨೮ರಲ್ಲಿ ಉಡುಪಿಯಲ್ಲಿ ವೃಂದಾವನ ಪ್ರವೇಶ ಮಾಡಿದರು. ಇವರ ಸೇವೆ ಮಾಡಿ

ಶ್ರೀ ಪಾಡಿಗೇರು ಕುಪ್ಪಣ್ಣಾಚಾರ್ಯ ದಂಪತಿಗಳು ಸತ್ಸಂತಾನ ಪಡೆದು ತತ್ಫಲವಾಗಿ ವೃಂದಾವನಕ್ಕೆ ಹಿತ್ತಾಳೆ ಕವಚವನ್ನು ಅರ್ಪಿಸಿರುತ್ತಾರೆ. ಇವರು ೩೨ ವರ್ಷ ಪಟ್ಟವಾಳಿದರು. ಇವರ ಆರಾಧನೆ ಚೈತ್ರ ಕೃಷ್ಣ ದ್ವಿತೀಯಾ.

ಉಡುಪಿಯಲ್ಲಿ ಶ್ರೀಕೃಷ್ಣಮಠದ ಉತ್ತರದಿಕ್ಕಿನಲ್ಲಿ ಸುಮಾರು ೪೩ ವೃಂದಾವನಗಳಿವೆ. ಅಲ್ಲಿರುವ ವೃಂದಾವನಗಳಲ್ಲಿ ಅತ್ಯಂತ ಪ್ರಾಚೀನ ವೃಂದಾವನ ಶ್ರೀ ವಾಗೀಶತೀರ್ಥರದು ಎಂದು ಶ್ರೀ ವಿಶ್ವೋತ್ತಮ ತೀರ್ಥರು ಅಭಿಪ್ರಾಯ ಪಟ್ಟಿರುವರು.

ತೀರ್ಥ ಪ್ರಬಂಧದಲ್ಲಿ ಶ್ರೀ ವಾದಿರಾಜರಿಂದ ರಚಿತ ಶ್ರೀ ವಾಗೀಶತೀರ್ಥರ ಸ್ತುತಿ ಹೀಗೆ ಇದೆ.

ವಾಗೀಶತೀರ್ಥ ಮುನಿವರ್ಯ ಭವದ್ದಯಾಂಬು
ಯೋಗೇನ ಪಾವಯ ಮನೋಗೃಹ ಮನ್ವಹಂ ಮೇ
ನಾಗೇಂದ್ರ ತಲ್ಪಮಧಿರೋಪಯ ತತ್ಕೃದಾಜ್ಞ
ರಾಗೇಣ ರಂಜಯ ಕಲಿಂಜಯ ತದ್ವಿ ನಿಕ್ಷುಂ ॥

**೨೦. ಶ್ರೀ ಮದ್ವಾದಿರಾಜ ತೀರ್ಥರು :** ಶ್ರೀ ಮನ್‌ಮಧ್ವಾಚಾರ್ಯರು ವೇದಾಂತ ಸಾಮ್ರಾಜ್ಯದ ಸಾಮ್ರಾಟರಾದರೆ. ಶ್ರೀ ವಾದಿರಾಜರು ಆ ಸಾಮ್ರಾಜ್ಯದ ಯುವರಾಜರು. ಭಗವದಾಜ್ಞೆಯಿಂದ ಲಾತವ್ಯನಾಮಕ ಋಜುಗಳು. ಕ್ರಿ.ಶ> ೧೪೮೧ರಲ್ಲಿ ಕುಂಭಾಸಿಕ್ಷೇತ್ರದ ಅನತಿದೂರದಲ್ಲಿರುವ ಹೂವಿನಕೆರೆಯಲ್ಲಿ ಅವತರಿಸಿದರು. ಭೂವರಾಹನಾಮಕರಾಗಿ ಬಾಲಲೀಲೆಗಳನ್ನು ತೋರಿಸುತ್ತ ತಮ್ಮ ಎಂಟನೆ ವಯಸ್ಸಿನಲ್ಲಿ ಶ್ರೀ ವಾಗೀಶತೀರ್ಥರಿಂದ ಸನ್ಯಸ್ತರಾದರು. ವೇದವೇದಾಂತಾದಿ ಶಾಸ್ತ್ರಾಧ್ಯಯನ ಮಾಡಿಗುರುಗಳ ಅಪ್ಪಣೆ ಪಡೆದು ವಿಸ್ತೃತ ತೀರ್ಥಯಾತ್ರೆಯನ್ನು ಕೈಗೊಂಡರು. ಶ್ರೀ ವೇದವ್ಯಾಸದೇವರ ಅಪ್ಪಣೆಯಂತೆ ಲಕ್ಷಾಲಂಕಾರವನ್ನು ರಚಿಸಿ ಅರ್ಪಿಸಿದರು. ಉಡುಪಿ ಶ್ರೀಕೃಷ್ಣದೇವರ ಪೂಜಾಪರ್ಯಾಯವನ್ನು ಎರಡು ವರ್ಷಗಳ ಅವಧಿಗೆ ವಿಸ್ತರಿಸಿ ವೈಭವೋಪೇತವಾಗಿ ಮಾಡಿದರು. ವಿಜಯನಗರದ ಅರಸರಿಗೆ ಬಂದ ಆರ್ಥಿಕ ಸಂಕಟವನ್ನು ದೂರ ಮಾಡಿದರು. ರಾಜ್ಯ ಭ್ರಷ್ಟನಾದ ಅರಸಪ್ಪ ನಾಯಕನನ್ನು ಅನುಗ್ರಹಿಸಿದರು. ವೀರಶೈವ ರಾಜಗುರುವನ್ನು ಪರಾಜಯಗೊಳಿಸಿ ರಾಜವೈಭವ ಮಾನಿತರಾದರು. ಋಜೋತ್ತಮರಿಂದ ಅರ್ಚನೀಯ ತ್ರಿವಿಕ್ರಮಮೂರ್ತಿಯನ್ನು ಬದರಿಕಾಶ್ರಮದಿಂದ ಶ್ರೀಭೂತರಾಜರ ಮೂಲಕ ತರಿಸಿ ಸೋದೆಯಲ್ಲಿ ಪ್ರತಿಷ್ಠಾಪಿಸಿದರು. ಶ್ರೀ ಕೃಷ್ಣದೇವರ ನಾಲ್ಕು ಪೂಜಾ ಪರ್ಯಾಯಗಳನ್ನು ವೈಭವದಿಂದ ಆಚರಿಸಿ (೧೫೩೨-೩೩, ೧೫೪೮-೪೯, ೧೫೬೪-೬೫, ೧೫೮೦-೮೧) ಐದನೆಯ ಪರ್ಯಾಯವನ್ನು ಶ್ರೀವೇದವೇದ್ಯರಿಗೆ ಬಿಟ್ಟುಕೊಟ್ಟು (೧೫೯೬-೯೭) ರಲ್ಲಿ ತಮ್ಮ ಪರ್ಯಾಯ ಸೋದೆಯಲ್ಲಿ ಪೂರೈಸಿದರು. ಶ್ರೀ ಸೋದಾಕ್ಷೇತ್ರವನ್ನು ಪ್ರತಿಕೃಷ್ಣಕ್ಷೇತ್ರವನ್ನಾಗಿ ನಿರ್ಮಿಸಿ ಅನುಗ್ರಹಿಸಿದರು. ವೃಂದಾವನ ಪ್ರವೇಶಕ್ಕಿಂತ ಪೂರ್ವದಲ್ಲಿ ಪಂಚವೃಂದಾವನಗಳನ್ನು ನಿರ್ಮಿಸಿ ಪೂಜಿಸಿದರು. ಶ್ರೀ ಹಯಗ್ರೀವಾದಿ ಅನಂತ ಭಗವದ್ರೂಪಗಳು, ಅವತಾರತ್ರಯೋಪೇತ ಶ್ರೀವಾಯುದೇವರು ಮತ್ತು ಇತರ ದೇವತೆಗಳು ಮೂರ್ತಿವಂತರಾಗಿ ಸನ್ನಿಹಿತರಾಗುವಂತೆ ಮಾಡಿದರು. ೧೨೦ ವರುಷ ಸಶರೀರ ದೃಶ್ಯರಾಗಿದ್ದದ್ದು ೧೬೦೧ರಲ್ಲಿ ಸಶರೀರರಾಗಿಯೇ ವೃಂದಾವನ ಪ್ರವೇಶ ಮಾಡಿದರು. ಪ್ರವೇಶ ಪೂರ್ವದಲ್ಲಿ ಮತ್ತು ನಂತರ ಅನನ್ಯ ಭಕ್ತಿಯಿಂದ ಸೇವೆ ಮಾಡುತ್ತಿದ್ದ ಏಡ ಮೂಕನಂತಿದ್ದ ಲಕ್ಷ್ಮೀಪತಿ ಎನ್ನುವ ವಿಪ್ರನಿಗೆ ಸ್ವಪ್ನದಲ್ಲಿ

ಗುರ್ವಂತರ್ಯಾಮಿ ಶ್ರೀ ಹರಿಯ ಉಪಾಸನಾರಹಸ್ಯ ತಿಳಿಸುವುದರೊಂದಿಗೆ ತಮ್ಮ ಋಜುಮಹಿಮೆಯನ್ನು ವೃಂದಾವನ ವೈಭವವನ್ನೂ ವರ್ಣಿಸಿ ಬೋಧಿಸಿದರು. ಅದುವೇ ಮಂತ್ರ ತುಲ್ಯವಾದ "ಸ್ವಾಪ್ನ ವೃಂದಾವನಾಖ್ಯಾನ" ಎಂಬ ಪ್ರಸಿದ್ಧ ಕೃತಿಯಾಗಿದೆ. ಶ್ರೀ ವಾದಿರಾಜರು ಯುಕ್ತಿಮಲ್ಲಿಕಾದಿ ಶತಾಧಿಕ ಕೃತಿಗಳನ್ನು ನಿರ್ಮಿಸಿ, ಸಾರಸ್ವತ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ. ಅವರ ಕೃತಿಗಳು ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ, ತುಳುವಿನಲ್ಲಿಯೂ, ತೆಲುಗುವಿನಲ್ಲಿಯೂ ರಚಿತವಾಗಿದ್ದು, ಪ್ರಸಿದ್ಧಿ ಪಡೆದಿವೆ. ಶ್ರೀ ವಾದಿರಾಜರ ಸನ್ನಿಧಾನದ ಸೋದಾ ಕ್ಷೇತ್ರವು ಪರಮ ಪಾವನತಮವಾಗಿದ್ದು, ಸಾತ್ವಿಕ ಸಾಧಕರಿಗೆ ಇಹಪರ ಶ್ರೇಯಸ್ಸನ್ನು ಅನುಗ್ರಹಿಸುವ ಸಿದ್ಧಿಪ್ರದ ಕ್ಷೇತ್ರವಾಗಿ ಕಂಗೊಳಿಸುತ್ತಿದೆ. ಗುರುರಾಜರ ಪುಣ್ಯದಿನ ಪಾಲ್ಗುಣ ಬಹುಳ ತೃತೀಯಾ.

**ವಾದಿರಾಜರ ಕೃತಿಗಳು**

**೧. ಟೀಕಾಗ್ರಂಥಗಳು :** ೧. ಮಹಾಭಾರತ ಲಕ್ಷಾಲಂಕಾರ ೨. ಮಹಾಭಾರತ ತಾತ್ಪರ್ಯ ನಿರ್ಣಯ ಭಾವ ಪ್ರಕಾಶಿಕಾ ೩. ತಲವಕಾರೋಪನಿಷದ್ಭಾಷ್ಯ ಟೀಕಾ ೪. ತೈತ್ತಿರೀಯೋಪ ನಿಷದ್ಭಾಷ್ಯ ಟೀಕಾ ೫. ಕಾಠಕೋಪನಿಷದ್ಭಾಷ್ಯ ಟೀಕಾ ೬. ಅಥರ್ವಣೋಪನಿಷದ್ಭಾಷ್ಯ ಟೀಕಾ ೭. ಮಾಂಡಕೋಪನಿಷದ್ಭಾಷ್ಯ ಟೀಕಾ ೮. ತಂತ್ರಸಾರ ಟೀಕಾ.

**೨. ಟಿಪ್ಪಣೀ ಗ್ರಂಥಿಗಳು :** ೧. ನ್ಯಾಯಸುಧಾಗುರ್ವರ್ಥ ದೀಪಿಕಾ ೨. ತತ್ವಪ್ರಕಾಶಿಕಾ ಗುರ್ವರ್ಥ ದೀಪಿಕಾ ೩. ಈಶಾವಾಸ್ಯೋಪನಿಷದ್ಭಾಷ್ಯ ಟೀಕಾ ಟಿಪ್ಪಣಿ ೪. ಷಟ್ಪ್ರಶ್ನೋಪನಿಷದ್ಭಾಷ್ಯ ಟೀಕಾ ಟಿಪ್ಪಣಿ ೫. ಗೀತಾಭಾಷ್ಯ ಟಿಪ್ಪಣಿ.

**೩. ಸ್ವತಂತ್ರ ಶಾಸ್ತ್ರಗ್ರಂಥಗಳು :** ೧. ಯುಕ್ತಿ ಮಲ್ಲಿಕಾ ೨. ನ್ಯಾಯ ರತ್ನಾವಲಿ ೩. ಚಕ್ರಮೀಮಾಂಸಾ ೪. ಉಪನ್ಯಾಸರತ್ನಮಾಲಾ ೫. ಹರಿಭಕ್ತಿ ಲತಾ ೬. ಶೃತಿತತ್ವಪ್ರಕಾಶಿಕಾ ೭. ಸದಾಚಾರಸ್ಮೃತಿ ೮. ಸಂಕಲ್ಪ ಪದ್ಧತಿ ೯. ಏಕಾದಶೀನಿರ್ಣಯ ೧೦. ಭೂಗೋಲ ನಿರ್ಣಯ ೧೧. ತಾರತಮ್ಯ ೧೨. ಚಿಂತಾಖಂಡನಂ ೧೩. ಪಾಷಂಡಮತಖಂಡನಂ ೧೪. ಕಲ್ಪಲತಾ (ವಾದಿರಾಜಸೂರಿ ಎಂಬ ಜೈನ ಪಂಡಿತನ 'ಪ್ರಮಾಣ ನಿರ್ಣಯ' ಗ್ರಂಥದ ಖಂಡನೆ) ೧೫. ವಿವರಣವ್ರಣಂ (ಪಂಚಪಾದಿಕಾ, ವಿವರಣ ಹಾಗೂ ತತ್ವದೀಪನ ಎಂಬ ಅದ್ವೈತಗ್ರಂಥಗಳ ಖಂಡನೆ) ೧೬. ಶಕುನಮಾಲಾ ೧೭. ಮುಹೂರ್ತರಾಜ ೧೮. ಮಾಧ್ವವಾಗ್ವಜ್ರಾವಲಿ ೧೯. ಸಂಸ್ಕೃತ ಸೂತ್ರಾರ್ಥ ೨೦. ಅಧಿಕರಣಾವಳಿ.

**೪. ಸ್ವತಂತ್ರ ಕಾವ್ಯಗಳು :** ೧. ರುಕ್ಮಿಣೀಶ ವಿಜಯ ೨. ಸರಸಭಾರತೀ ವಿಲಾಸ ೩. ತೀರ್ಥಪ್ರಬಂಧ ೪. ಕವಿಕದಂಬಕಂಠಭೂಷಾ.

**೫. ಸ್ತೋತ್ರ ಗ್ರಂಥಗಳು :** ೧. ರೂಪ್ಯಪೀಠ ಸ್ತುತಿ ೨. ಅಶ್ವಧಾಟೀ ೩. ವಿಷ್ಣು ಸ್ತುತಿ ೪. ಹಯಗ್ರೀವ ಸ್ತುತಿ ೫. ಶ್ರೀ ಶಗುಣದರ್ಪಣ ೬. ವೆಂಕಟೇಶ ಮಂಗಳಾಷ್ಟಕ ೭. ಪ್ರಾರ್ಥನಾದಶಕ ೮. ಕೇಶವಾದಿ ಚತುರ್ವಿಂಶತಿ ಮೂರ್ತಿ ಸ್ತುತಿ ೯. ದಶಶ್ಲೋಕಿ ೧೦. ವ್ಯಾಸ ಸ್ತುತಿ ೧೧. ಅಭಯಸ್ತೋತ್ರ ೧೨. ರಮೇಶಸ್ತುತಿ ೧೩. ಸಂಕಲ್ಪ ಪದ್ಧತಿ ೧೪. ಕೃಷ್ಣಸ್ತುತಿ ೧೫. ಶ್ರೀ ಕೃಷ್ಣಸ್ತುತಿ ೧೬. ರಾಮಕೃಷ್ಣಸ್ತೋತ್ರ ೧೭. ಅಷ್ಟ ಮಹಿಷಿಯುಕ್ತ ಕೃಷ್ಣಸ್ತೋತ್ರ ೧೮. ಆಪಾದ ಸ್ತೋತ್ರ ೧೯. ತ್ರಿವಿಕ್ರಮ ಸ್ತೋತ್ರ ೨೦. ದಶಾವತಾರ ಸ್ತೋತ್ರ ೨೧. ವರಾಹ ಹಯಗ್ರೀವ

ಸ್ತೋತ್ರ ೨೨. ಹಯಗ್ರೀವ ಸ್ತೋತ್ರ ೨೩. ಹಯಗ್ರೀವ ಸ್ತುತಿ ೨೪. ಹಯಗ್ರೀವ ವರಾಹ ಸ್ತುತಿ ೨೫. ಹಯಗ್ರೀವ ಪಂಚಕ ೨೬. ಹಯಗ್ರೀವ ಸಂಪದಾ ಸ್ತೋತ್ರ ೨೭. ಹಯಗ್ರೀವ ಕವಚ ೨೮. ನೃಸಿಂಹ ವರಾಹ ಪಂಚಕ ೨೯. ದಶಾವತಾರ ಸ್ತೋತ್ರ ೩೦. ನೃಹರ್ಯಷ್ಟಕ ೩೧. ರಾಮಸ್ತೋತ್ರ ೩೨. ವ್ಯಾಸಸ್ತೋತ್ರ ೩೩. ಅಧಿಕರಣ ನಾಮಾವಳಿ ೩೪. ಶ್ಲೋಕತ್ರಯ ೩೫. ವಿಘ್ನಪರಿಹಾರ ಸ್ತೋತ್ರ ೩೬. ಭಯ ಪರಿಹಾರ ಸ್ತೋತ್ರ ೩೭. ಋಣ ಮೋಚನ ಸ್ತೋತ್ರ ೩೮. ಆರ್ಯಾವೃತ್ತ ೩೯. ಸಹಸ್ರಾರಸ್ತುತಿ ೪೦. ಚಕ್ರಸ್ತುತಿ ೪೧. ವಾಯುಸ್ತುತಿ ೪೨. ಮಧ್ವಾಷ್ಟಕ ೪೩. ಮಧ್ವಮುನಿ ಪ್ರತಾಪಾಷ್ಟಕ ೪೪. ನವಗ್ರಹ ಸ್ತೋತ್ರ ೪೫. ಹಿತೋಪದೇಶ ೪೬. ಕುರುಸ್ತೋತ್ರ ೪೭. ತವ್ಯ ಸ್ತೋತ್ರ ೪೮. ಶ್ರೀಮದ್ ಭಾಗವತಾನುಕ್ರಮಣಿಕಾ ೪೯. ಭಾಗವತ ಸಂಗ್ರಹ ೫೦. ಸಪ್ತರಾತ್ರೋತ್ಸವ ಪ್ರಕಾರ ೫೧. ಶ್ರೀಪಾದ ರಾಜಾಷ್ಟಾಕಂ ೫೨. ಹಿತೋಪದೇಶಕಮ್ ೫೩. ಉಕ್ತಿ ಪ್ರತ್ಯುಕ್ತಿ ಸ್ತೋತ್ರಂ ೫೪. ವಿಭೀಷಣ ಹನುಮತ್ಸಂವಾದ ರೂಪಾ ವಾಯುಸ್ತುತಿ ೫೫. ದುರ್ಗಾಸ್ತವ.

**೬. ಕನ್ನಡ ಕೃತಿಗಳು :** ೧. ವೈಕುಂಠವರ್ಣನೆ ೨. ಲಕ್ಷ್ಮೀ ಶೋಭಾನೆ ೩. ಗುಂಡಕ್ರಿಯೆ ೪. ಸ್ವಪ್ನಪದ ೫. ಭ್ರಮರಗೀತೆ ೬. ನಾರದ ಕೊರವಂಜಿ ೭. ಸ್ವಪ್ನಗದ್ಯ ೮. ಭಾಗವತಸಾರಕೀರ್ತನೆ ೯. ಕೇಶವನಾಮ ೧೦. ಕೀಚಕ ವಧೆ ೧೧. ನೈವೇದ್ಯ ಪ್ರಕರಣ ೧೨. ನಮಸ್ಕಾರ ಸ್ತೋತ್ರ ೧೩. ಸುಳಾದಿಗಳು ೧೪. ಉಗಾಭೋಗಗಳು ೧೫. ಕೀರ್ತನೆಗಳು ೧೬. ಶ್ರೀಕೃಷ್ಣ ಬಾಲಲೀಲೆ. ೧೭. ಗಜೇಂದ್ರ ಮೋಕ್ಷ ೧೮. ಹರಿಸರ್ವೋತ್ತಮ ಸಾರ ೧೯. ತತ್ವಸುವ್ವಾಲಿ ೨೦. ದಶಮಸ್ಕಂಧ ಪಠಣಕ್ಕಾಗಿ ರಚಿಸಿದ ನೆನೆವನನುದಿನ ನೀಲವರ್ಣನಾಗುಣರನ್ನನಾ ೨೧. ವೆಂಕಟೇಶ ಕಲ್ಯಾಣ ೨೨. ಪಂಚಭೇದ ಸ್ತೋತ್ರ ೨೩. ವಿರಾಟ ಮೂರ್ತಿಧ್ಯಾನ.

**೭. ತುಳು ಭಾಷೆಯ ಹಾಡುಗಳು :** ೧. ದಶಾವತಾರ ಪಾಡ್ದನಗಳು

**೮. ಆಖ್ಯಾನ :** ಸ್ವಾಪ್ನವೃಂದಾವನಾಖ್ಯಾನಗಳು

**೨೧. ಶ್ರೀ ವೇದವೇದ್ಯ ತೀರ್ಥರು :** ಶ್ರೀ ವಾದಿರಾಜರ ಕರಕಮಲ ಸಂಜಾತರಾದ ಶ್ರೀ ವೇದವೇದ್ಯರು ಗುರುಗಳಲ್ಲಿ ಅಧ್ಯಯನ ಮಾಡಿ ಅದ್ಭುತ ಪಾಂಡಿತ್ಯ ಪಡೆದರು ಶ್ರೀ ಕೃಷ್ಣ ದೇವರ ಪೂಜೆಯ ಎರಡು ಪರ್ಯಾಯ (೧೫೯೬–೯೭, ೧೬೧೨–೧೩)ಗಳನ್ನು ಮಾಡಿ ಕ್ರಿ.ಶ. ೧೬೧೬ರಲ್ಲಿ ಸೋದೆಯಲ್ಲಿ ವೃಂದಾವನಸ್ಥರಾದರು. ಇವರ ಪುಣ್ಯ ತಿಥಿ ಕಾರ್ತೀಕ ಬಹುಳ ತ್ರಯೋದಶಿ. ಇವರು ಋಜುಗಳಾದ ಗವ್ಯರೆಂದು ಸ್ವಾ. ವೃ ಆಖ್ಯಾನದಿಂದ ತಿಳಿದು ಬರುತ್ತದೆ. ಶ್ರೀ ವಾದಿರಾಜರ ಸಾಕ್ಷಾತ್ ಶಿಷ್ಯರಾದ ಶ್ರೀ ವೇದ ವೇದ್ಯರು ಶ್ರೀರಾಜರ ಋಜುಸ್ವರೂಪ ಬಲ್ಲವರಾದ ಕಾರಣ ರಾಜರ ವೃಂದಾವನ ಪ್ರವೇಶ ದಿನದಿಂದ ಶ್ರೀ ವಾಯುದೇವರೊಂದಿಗೆ ಸಮಪೂಜಾ ಪದ್ಧತಿ ಜಾರಿತಂದರು. ಹಾಗೂ ಋಜು ಮಹಿಮಾ ಬೋಧಕ ಪರಾಕು ಘೋಷಣೆಯನ್ನು ಪ್ರತಿದಿನ ಸಾಯಂಕಾಲ ಪೂಜಾವಸಾನದಲ್ಲಿ ಜಾರಿಗೆ ತಂದವರೂ ಇವರೇ. ಶ್ರೀ ವೇದವೇದ್ಯರು ಶ್ರೀ ವಾದಿರಾಜ ಮಂತ್ರಕ್ಕೆ ಋಷಿಗಳಾಗಿದ್ದಾರೆ.

**೨೨. ಶ್ರೀ ವಿದ್ಯಾನಿಧಿತೀರ್ಥರು :** ಶ್ರೀ ವೇದವೇದ್ಯರಿಂದ ಆಶ್ರಮ ಸ್ವೀಕಾರ ಮಾಡಿದ ಇವರು ಶ್ರೀ ವಾದಿರಾಜರಲ್ಲಿ ವ್ಯಾಸಂಗ ಮಾಡಿ ಪಾಂಡಿತ್ಯ ಪಡೆದರು. ಇವರು ಚಿಕ್ಕಪಟ್ಟದಲ್ಲಿರುವಾಗಲೇ ಶ್ರೀ ಹರಿ ಇಚ್ಚೆಯಂತೆ ಕುಂಭಾಶಿಯಲ್ಲಿ ವೃಂದಾವನಸ್ಥರಾದರು. ಅಷ್ಟರಲ್ಲಿ ಇವರು ಶ್ರೀವೇದನಿಧಿಯೆಂಬುವವರಿಗೆ ಆಶ್ರಮ ನೀಡಿದ್ದರು.

೨೩. **ಶ್ರೀ ವೇದನಿಧಿತೀರ್ಥರು :** ಇವರ ಕಾಲದಲ್ಲಿ ಏಡಮೂಕ ಬ್ರಾಹ್ಮಣನು ವಾದಿರಾಜರಿಂದ ಕೇಳಲ್ಪಟ್ಟ ಆಖ್ಯಾನವನ್ನು ಬೆಳಿಗ್ಗೆ ವೇದನಿಧಿಗಳ ಮುಂದೆ ಉಚ್ಚರಿಸುತ್ತಿದ್ದುದನ್ನು ಶ್ರೀರಾಮಚಂದ್ರಾಚಾರ್ಯರೆಂಬ ತಮ್ಮ ಅಂತೇನಿವಾಸಿಯಿಂದ ಬರೆಸುತ್ತಿದ್ದರು. ಅದುವೇ ಮಂತ್ರತುಲ್ಯವಾದ ಸ್ವಾಪ್ನ ವೃಂದಾವನಾಖ್ಯಾನ ಎಂದು ಪ್ರಸಿದ್ಧವಾದ ಗ್ರಂಥವು. ಈ ಗ್ರಂಥದಲ್ಲಿಯ ಸಾರಭೂತ ಶ್ಲೋಕಗಳನ್ನು ಸಂಗ್ರಹಿಸಿ ಶಿಲಾಲೇಖ ಮಾಡಿದ್ದು ಮತ್ತು ಧ್ವಜಸ್ಥಂಭದ ಮೇಲೆ ಶ್ರೀ ರಾಜರ ಹಂಸಾರೂಢ ಕೃತಿಯನ್ನು ಕೆತ್ತಿಸಿದ್ದು ಇವರ ಎರಡು ಮಹತ್ವದ ಕಾರ್ಯಗಳಾಗಿವೆ. ಇವರ ಎರಡು ಪರ್ಯಾಯಗಳನ್ನು ನೆರವೇರಿಸಿದ್ದಾರೆ. ಕ್ರಿ.ಶ. ೧೬೪೮ರಲ್ಲಿ ವೃಂದಾವನ ಪ್ರವೇಶ ಸೋದೆಯಲ್ಲಿ. ಇವರು ಆಖ್ಯಾನೋಕ್ತ ವ್ಯಕ್ತಿಗಳಾಗಿದ್ದು, ಭಾವಿ ಗರುಡ ಪದಯೋಗ್ಯರೆಂದು ವಿಖ್ಯಾತರಾಗಿದ್ದಾರೆ. ಪಟ್ಟ ೩೨ ವರ್ಷ.

೨೪. **ಶ್ರೀ ವರದರಾಜ ತೀರ್ಥರು (೨) :** ಇವರು ೧೬೬೦-೬೧ರಲ್ಲಿ ಪರ್ಯಾಯ ನೆರವೇರಿಸಿರುತ್ತಾರೆ. ಕ್ರಿ.ಶ. ೧೬೭೩ರಲ್ಲಿ ತುಂಗಾತೀರದ ತೀರ್ಥಹಳ್ಳಿಯಲ್ಲಿ ವೃಂದಾವನ ಪ್ರವೇಶ. ವೇದಾಂತ ಸಾಮ್ರಾಜ್ಯ ಪಟ್ಟ ೨೫ ವರ್ಷ.

೨೫. **ಶ್ರೀ ವಿಶ್ವಾದಿರಾಜೇಂದ್ರ ತೀರ್ಥರು :** ಗುರುಗಳಿಂದ ಆಶ್ರಮ ಪಡೆದ ಇವರು ಸುಧಾದಿಗ್ರಂಥಗಳ ಪಾಠಪ್ರವಚನ ಮಾಡುತ್ತಾ ಹೆಚ್ಚಾಗಿ ಸೋದೆಯಲ್ಲಿ ನೆಲಸಿ ಅಲ್ಲಿಯೇ ವೃಂದಾವಸ್ಥರಾದರು. ಕ್ರಿ.ಶ. ೧೬೮೮ರಲ್ಲಿ ಒಂದು ಪರ್ಯಾಯವನ್ನು ಉಡುಪಿಯಲ್ಲಿ ವೈಭವದಿಂದ ಆಚರಿಸಿರುವರು. ಆ ಸಮಯದಲ್ಲಿ ವಿದ್ವತ್ ಸಭೆ ಏರ್ಪಡಿಸಿ ಅನೇಕ ಪರ ವಾದಿಗಳನ್ನು ಪರಾ ಜಯಗೊಳಿಸಿದ್ದು ಪ್ರಸಿದ್ಧವಾಗಿದೆ. ಪಟ್ಟ ೧೫ ವರ್ಷ.

೨೬. **ಶ್ರೀ ವಾದಿ ವಂದ್ಯತೀರ್ಥರು :** ಶ್ರೀ ಮನ್ನ್ಯಾಯಸುಧಾದಿ ಗ್ರಂಥಗಳನ್ನು ಅನೇಕಾವರ್ತಿಸಲ ಮಂಗಳ ಮಾಡಿದ್ದಾರೆ. ಇವರು ಶ್ರೀ ವಾದಿರಾಜಸ್ತುತಿ; ಶ್ರೀ ವಾದಿರಾಜಾಷ್ಟಕಂ, ಜಯಸ್ತೋತ್ರಂ ಶ್ರೀ ವಾದಿರಾಜಧ್ಯಾನ ರಚಿಸಿದ್ದಾರೆ. ಪರ್ಯಾಯ ೧೬೯೨-೯೩ರಲ್ಲಿ ಒಂದು ಸಲ ಮಾತ್ರ. ೧೮ ವರ್ಷ ಪಟ್ಟವನ್ನಾಳಿ ಸೋದೆಯಲ್ಲಿ ೧೭೦೬ರಲ್ಲಿ ವೃಂದಾವನ ಪ್ರವೇಶ.

೨೭. **ವಿಶ್ವವಂದ್ಯ ತೀರ್ಥರು :** ಇವರಿಗೆ ಸರ್ವಮೂಲಗ್ರಂಥ ಹಾಗೂ ಶ್ರೀ ವಾದಿರಾಜರ ಗ್ರಂಥ ಮುಖೋದ್ಗತವಾಗಿದ್ದವು. ಯುಕ್ತಿ ಮಲ್ಲಿಕಾ ಗ್ರಂಥವನ್ನು ಶ್ರೀ ಗುರುರಾಜರ ಸನ್ನಿಧಿಯಲ್ಲಿ ಅನೇಕಾವರ್ತಿ ಪಾರಾಯಣ ಪ್ರವಚನ ಮಾಡಿದ್ದರು. ಒಂದೇ ಸಲ ಪರ್ಯಾಯ (ಕ್ರಿ.ಶ. ೧೭೦೮-೯) ಪೀಠ ಅಲಂಕರಿಸಿ ಉಡುಪಿಯಲ್ಲಿ ಕ್ರಿ.ಶ. ೧೭೨೨ರಲ್ಲಿ ವೃಂದಾವನ ಪ್ರವೇಶ, ಪಟ್ಟ ೧೬ ವರ್ಷ.

೨೮. **ವಿಬುಧವರ್ಯ ತೀರ್ಥರು :** ಪಂಡಿತೋತ್ತಮರಾದ ಇವರಲ್ಲಿ ಆಗಿನ ಅನೇಕ ಶ್ರೀಗಳವರು ಮತ್ತು ಇತರರಿಗೂ ಪಾಠ ಹೇಳಿರುವರು. ಇವರು ಅನವರತ ಸರ್ವಮೂಲಗ್ರಂಥಗಳ ಪಾರಾಯಣ ಪ್ರವಚನ ಮಾಡುತ್ತಿದ್ದರು. ವಿಷ್ಣು ಸಹಸ್ರನಾಮಕ್ಕೆ ಶ್ಲೋಕರೂಪ ವ್ಯಾಖ್ಯಾನ ಹಾಗೂ ಗದ್ಯರೂಪ ವಿಸ್ತೃತ ವ್ಯಾಖ್ಯಾನ ಬರೆದಿದ್ದಾರೆ. ಸೋದೆಮಠವನ್ನು ಪ್ರಥಮ ಬಾರಿ ಜೀರ್ಣೋದ್ಧಾರ ಮಾಡಿರುವರು. ಪರ್ಯಾಯ ೧೭೨೪-೨೫ ವೇದಾಂತ ಸಾಮ್ರಾಜ್ಯ ಪಟ್ಟ ೧೭ ವರ್ಷ ಆರಾಧನೆ, ಮಾರ್ಗಶೀರ್ಷ ಬಹುಳ ಷಷ್ಠಿ ೧೭೩೯, ಉಡುಪಿಯಲ್ಲಿ ವೃಂದಾವಸ್ಥರಾದರು.

೨೯. **ಶ್ರೀ ವಿಶ್ವನಿಧಿತೀರ್ಥರು :** ಪಂಡಿತವರ್ಯರಾದ ಇವರು ನ್ಯಾಯಸುಧಾಗ್ರಂಥವನ್ನು ಪುಸ್ತಕ ಸಹಾಯವಿಲ್ಲದೆಯೇ ಅನುವಾದ ಮಾಡುತ್ತಿದ್ದರು. ಇವರ ಕಾಲದಲ್ಲಿ ಶ್ರೀಮಠಕ್ಕೆ ಅನೇಕದಾನಗಳು ಲಭಿಸಿದವು. ಪರ್ಯಾಯ ಅವಧಿ ೧೭೪೦-೪೧ ಉಡುಪಿ ಸಮೀಪ ಉಂಡಾರು (ಇನ್ನಂಜೆ)ಯಲ್ಲಿ ಕ್ರಿ.ಶ. ೧೭೫೩ರಲ್ಲಿ ವೃಂದಾವನ ಪ್ರವೇಶ. ಪಟ್ಟ ೧೪ ವರ್ಷ.

೩೦. **ಶ್ರೀ ವಿಶ್ವಾಧೀಶ್ವರ ತೀರ್ಥರು :** "ವಿಪ್ರಪರಮಗುರು" ಎನ್ನುವ ಆಖ್ಯಾನೋಕ್ತ ವ್ಯಕ್ತಿಗಳಾದ ಇವರು ವಿಪ್ರನಿಗೆ (ಶ್ರೀ ವೃಂದಾವನಾಚಾರ್ಯರಿಗೆ) ವಿಶೇಷ ಅನುಗ್ರಹ ಮಾಡಬೇಕೆಂದು ಆಖ್ಯಾನದಲ್ಲಿ ರಾಜರಿಂದ ಹೇಳಲಾಗಿದೆ. ಮಹಾಮೇಧಾವಿಗಳಾದ ಇವರು ವೈಭವದಿಂದ ಎರಡು ಪರ್ಯಾಯ ನಡೆಸಿದರು. ಪರ್ಯಾಯ ಅವಧಿ ಕ್ರಿ.ಶ. ೧೭೫೬-೫೭, ೧೭೭೨-೭೩) ಇವರು ಉಂಡಾರ ಗ್ರಾಮದಲ್ಲಿ ಪುಷ್ಯ ಶುದ್ಧ ತ್ರಯೋದಶಿ, ೧೮೦೩ರಲ್ಲಿ ವೃಂದಾವನಸ್ಥರಾದರು.

೩೧. **ಶ್ರೀ ವಿಶ್ವೇಶ ತೀರ್ಥರು :** ಆಖ್ಯಾನೋಕ್ತ, ಶ್ರೀ ಗುರುರಾಜಾನುಗ್ರಹೀತರಾದ ಇವರ ತೇಜಸ್ಸು ಪಾಂಡಿತ್ಯ, ಸಿದ್ಧಿ ಮೊದಲಾದವುಗಳು ಪ್ರಸಿದ್ಧಿಯಾಗಿತ್ತು. ಕೊಚ್ಚಿ ದೇಶದ ಮಹಾರಾಜರು ಇವರ ಸಿದ್ಧಿ ಪ್ರಭಾವಕ್ಕೆ ಮಾರುಹೋಗಿ ಇವರಿಂದ ಮಾಧ್ವದೀಕ್ಷೆ ಪಡೆದು ಶಿಷ್ಯತ್ವ ವಹಿಸಿ ಮಧ್ವಶಾಸ್ತ್ರ ಓದಿ ಧನ್ಯವಾದರು. ಗುರುಗಳ ಆದೇಶದಂತೆ ಅವರಿರುವಾಗಲೇ ಶಿಷ್ಯಗ್ರಹಣ ಮಾಡಿದರು. ಇವರ ಕಾಲದಲ್ಲಿ ಶ್ರೀ ಕೃಷ್ಣ ಮಠಕ್ಕೆ, ಸೋದೆಮಠಕ್ಕೆ ಹಾಗೂ ಕೆಂಚಗಾರಿನಲ್ಲಿ ನೂರಾರು ಎಕರೆ ಭೂಮಿ ದಾನವಾಗಿ ದೊರಕಿದೆ. ಇವರು ಗುರುಗಳು ಇರುವಾಗಲೇ ೧೭೮೮-೮೯ರಲ್ಲಿ ಪರ್ಯಾಯ ಪೀಠ ಅಲಂಕರಿಸಿದ್ದರು. ಗುರುಗಳಿರುವಾಗಲೇ ಕ್ರಿ.ಶ. ೧೭೯೪ರಲ್ಲಿ ಮಾಘಕೃಷ್ಣ ತ್ರಯೋದಶಿಯೆಂದು ಕೆಂಚಗಾರಿನಲ್ಲಿ ವೃಂದಾವನಸ್ಥರಾದರು.

೩೨. **ಶ್ರೀ ವಿಶ್ವಪ್ರಿಯ ತೀರ್ಥರು (ಶ್ರೀ ವೃಂದಾವನಾಚಾರ್ಯರು) :** ಕ್ರಿ.ಶ. ೧೭೮೪ರಲ್ಲಿ ಶ್ರೀ ವಿಶ್ವೇಶತೀರ್ಥರಿಂದ ಆಶ್ರಮ ಪಡೆದ ಇವರು ಪರಮಗುರುಗಳಾದ ಶ್ರೀ ವಿಶ್ವಾಧೀಶ್ವರಲ್ಲಿ ಅಧ್ಯಯನ ಮಾಡಿದರು. ನಂತರ ಸೋದಾಕ್ಷೇತ್ರಕ್ಕೆ ಬಂದು ಶ್ರೀ ರಾಜರ ಪಂಚವೃಂದಾವನಗಳ ವಿಶೇಷ ಸೇವೆ ಮಾಡಿದರು. ಸರ್ವಮೂಲಾದಿ ಗ್ರಂಥಗಳ ಅವಲೋಕನಾಧ್ಯಯನಾದಿಗಳನ್ನು ಮುಂದುವರೆಸಲು ವೃಂದಾವನದಿಂದ ಹೊರಹೊಮ್ಮುವ ವಾಣಿಯಿಂದಲೇ ನಿವಾರಿತ ಸಂದೇಹರಾಗಿ ಅಪಾರ ಜ್ಞಾನ ಸಂಪತ್ತನ್ನು ಪಡೆದರು. ಆದ್ದರಿಂದಲೇ ವೃಂದಾವನಾಚಾರ್ಯರೆಂದು ಪ್ರಸಿದ್ಧರಾದರು. ಇವರೇ ಶ್ರೀ ರಾಜರ ಕಾಲದಲ್ಲಿ ಏಡಮೂಕ ಬ್ರಾಹ್ಮಣರಾಗಿದ್ದು, ಮಂತ್ರತುಲ್ಯ ಆಖ್ಯಾನ ಗ್ರಂಥವನ್ನು ಉಪದೇಶ ಪಡೆದವರು. ಈಗ ಅದರ ಪ್ರಸಿದ್ಧಿಗಾಗಿಯೇ ಅವತರಿಸಿ ಬಂದಿದ್ದಾರೆ. ಶ್ರೀ ವೇದನಿಧಿತೀರ್ಥರು ಆಖ್ಯಾನ ಲೇಖನದ ಶ್ರೀ ಕಾರರಾದರೆ ಶ್ರೀ ವಿಶ್ವಪ್ರಿಯ ತೀರ್ಥರು ಅದರ ಪ್ರಸಿದ್ಧಿಯ ಹರಿಕಾರರಾಗಿದ್ದಾರೆ. ಶಿಷ್ಯರಿಂದ ಆಖ್ಯಾನಕ್ಕೆ ವ್ಯಾಖ್ಯಾನವನ್ನೂ, ಅಧ್ಯಾಯ, ಪ್ರಕರಣ ಹಾಗೂ ಪ್ರಾಮಾಣ್ಯ ಸಮರ್ಥಕ ಕೃತಿಗಳನ್ನೂ ಬರೆಯಿಸಿ ಅನೇಕ ಸಜ್ಜನರಿಗೆ ಉಪದೇಶಿಸಿ ಅನುಗ್ರಹಿಸಿದ್ದಾರೆ. ಇವರು ಆಖ್ಯಾನದಲ್ಲಿ ಭಾವೀ ಇಂದ್ರಪದವಿ ಅಲಂಕರಿಸುವವರೆಂದು ಉಲ್ಲೇಖಿಸಲಾಗಿದೆ. ಈ ಬಗ್ಗೆ ಅನೇಕ ನಿದರ್ಶನಗಳಿವೆ. ಆ ಕಾಲದಲ್ಲಿ ಶ್ರೀಗಳವರಿಗೆ ಸಮಾಧಿಕರಾದ ಪಂಡಿತರೇ ಇದ್ದಿಲ್ಲವೆಂದು ತಿಳಿದು ಬರುತ್ತದೆ. ಉಡುಪಿಯ ಪಂಡಿತರಷ್ಟರಲ್ಲದೆ, ಘಟ್ಟದ ಮೇಲಿನ ನೂರಾರು ಜನರು ಅವರಲ್ಲಿ ಶಿಷ್ಯತ್ವವಹಿಸಿ ಅಧ್ಯಯನ ಮಾಡಿದ್ದು. ಪರಂಪರಾ ಪ್ರಸಿದ್ಧಿಯಿದೆ. ಶ್ರೀಗಳವರು ಕೊಚ್ಚಿ ಮೈಸೂರುರಾಜರಿಂದ ವಿಶೇಷ

ಸನ್ಮಾನಿತರಾಗಿದ್ದಾರೆ. ಶ್ರೀ ಕೃಷ್ಣದೇವರಿಗೆ ಅನೇಕ ಅಲಂಕಾರಗಳು ನಿರಂತರ ಅನ್ನದಾನಕ್ಕಾಗಿ ಭೂಮಿ ವಗೈರೆ ದಾನಗಳು ಸಮರ್ಪಣೆಯಾಗಿವೆ. ಇವರ ಕಾಲದಲ್ಲಿ ಮಧ್ಯತಾಳ ಮಠದಲ್ಲಿದ್ದ ವ್ಯಾಸಮುಷ್ಟಿಯನ್ನು ತಂದು ಶ್ರೀಕೃಷ್ಣ ಸನ್ನಿಧಿಯಲ್ಲಿಟ್ಟು ಪೂಜಿಸಿದ್ದು ಹಾಗೂ ೧೨ ವರ್ಷ ನೀರಾನ್ನತ್ವವೃತಗಳು ಸ್ವಾಪ್ನವೃಂದಾವನಾಖ್ಯಾನೋಕ್ತ ನಿದರ್ಶನಗಳಾಗಿವೆ. ಇವರು ಶ್ರೀ ಕೃಷ್ಣದೇವರ ನಾಲ್ಕು ಪರ್ಯಾಯಗಳನ್ನು ವೈಭವದಿಂದ ನೆರವೇರಿಸಿದ್ದಾರೆ. (೧೮೦೪-೫, ೧೮೨೦-೨೧, ೧೮೩೬-೩೭, ೧೮೫೨-೫೩) ಶ್ರೀಗಳವರು ಶ್ರೇಷ್ಠ ಪ್ರಮೇಯುಜ್ಞರೂ, ವೈರಾಗ್ಯಶಾಲಿಗಳಾಗಿದ್ದರು. ಪರ್ಯಾಯ ಸಭೆಯಲ್ಲಿ ಕೇವಲ ಕೌಪೀನಧಾರಿಗಳಾಗಿದ್ದರು. ಶ್ರೀಗಳವರು ಆಷಾಢ ಬಹುಳ ಅಮಾವಾಸ್ಯೆ ಕ್ರಿ.ಶ. ೧೮೬೫ರಂದು ಉಡುಪಿಯಲ್ಲಿ ವೃಂದಾವಸ್ಥರಾದರು. ಶ್ರೀಗಳವರ ಚರಿತ್ರೆಯ ವಿಷಯವಾಗಿ ಸಂಸ್ಕೃತದಲ್ಲಿ ಕೊಚ್ಚಿ ರಂಗಪ್ಪಚಾರ್ಯ ಕೃತ ಶ್ರೀ ವಿಶ್ವಪ್ರಿಯ ವಿಲಾಸ ಹಾಗೂ ಸೇತು ಮಾಧವ ಸೂರಿಗಳಿಂದ ಶ್ರೀ ವಿಶ್ವಪ್ರಿಯ ಗುರುಲೀಲಾ ವಿಲಾಸ ರಚಿತವಾಗಿದೆ. ಹಾಗೂ ಕನ್ನಡದಲ್ಲಿ ಶ್ರೀ ವಿಶ್ವಪ್ರಿಯ ಮಹಾತ್ಮ್ಯೆ ಸೇತುಮಾಧವಸೂರಿಗಳಿಂದ ರಚಿತವಾದದ್ದು ಉಪಲಬ್ಧವಿದೆ. ಇದಲ್ಲದೆ ಸ್ತೋತ್ರ ಪದಗಳನ್ನೂ ಕಾಣಬಹುದು.

**೩೩. ಶ್ರೀ ವಿಶ್ವಾಧೀಶ ತೀರ್ಥರು :** ಶ್ರೀ ವೃಂದಾವನಾಚಾರ್ಯರ ಕರಕಮಲ ಸಂಜಾತರಾದ ಇವರು ವಿಶೇಷ ಅಧ್ಯಯನವನ್ನು ಶ್ರೀ ಕೃಷ್ಣಾಪುರ ಮಠಾಧೀಶರಾದ ಶ್ರೀ ವಿದ್ಯಾಧೀಶರಲ್ಲಿ ಮಾಡಿದರು. ಸಂಗ್ರಹ ರಾಮಾಯಣವನ್ನು ನಿಯಮದಿಂದ ಅನೇಕಾವರ್ತಿ ಪಾರಾಯಣ ಮಾಡಿ ಶ್ರೀ ವಾಯುದೇವರ ಅನುಗ್ರಹದಿಂದ ಅಪಾರ ಜ್ಞಾನ ಸಂಪತ್ತನ್ನು ಪಡೆದರು. ಆಗಿನ ಇತರ ಮಠಾಧೀಶರಿಗೆ ವೇದಾಂತಶಾಸ್ತ್ರಗಳ ಪಾಠ ಹೇಳಿ ಉದ್ದಾಮ ಪಂಡಿತರನ್ನಾಗಿ ಮಾಡಿದರು. ವಾದ ಕಲೆಯು ಶ್ರೀಗಳವರಿಗೆ ಕರಗತವಾಗಿತ್ತು. ಚಿಕ್ಕವರಾದರೂ ಶ್ರೀಗಳವರಿಗೆ ಶಾಸ್ತ್ರಗಳಲ್ಲಿ ಅಪಾರ ಪಾಂಡಿತ್ಯವಿತ್ತು. ಕ್ರಿ.ಶ. ೧೮೮೪ರ ಸುಮಾರಿಗೆ ವಾದಿರಾಜರ ಋಜುತ್ವ ವಿರೋಧಿ ಜ್ವಾಲೆಯು ಭುಗಿಲೆದ್ದಾಗ ಋಜುತ್ವ ಸಮರ್ಥಕ ಪ್ರಮಾಣಗಳನ್ನು ಸಂಗ್ರಹಿಸಿ ಸಂಪಾದಿಸಿ ಋಜುತ್ವ ಚಂದ್ರೋದಯನಾಮಕ ಗ್ರಂಥವನ್ನು ಪ್ರಕಾಶಿಸುವುದರೊಂದಿಗೆ ವಿರೋಧಿ ಜ್ವಾಲೆಯನ್ನು ಶಮನ ಮಾಡಿದರು. ಶ್ರೀಗಳವರು ಎರಡು ಪರ್ಯಾಯಗಳನ್ನು ನೆರವೇರಿಸಿದ್ದಾರೆ. ಕ್ರಿ.ಶ. ೧೮೬೮-೬೯ ಹಾಗೂ ೧೮೮೪-೮೫ರಲ್ಲಿ ಶ್ರೀಕೃಷ್ಣ ಮಠದ ಗರ್ಭಗುಡಿಯು ಶಿಥಿಲಗೊಂಡಿದ್ದರಿಂದ ಗುರುಗಳು ನವೀಕರಣ ಮಾಡಿಸಿದರು. ಶ್ರೀಗಳವರ ಅಪಾರ ಪಾಂಡಿತ್ಯಕ್ಕೆ ವಿಕ್ಟೋರಿಯಾ ರಾಣಿಯಿಂದ ಮನ್ನಣೆ ದೊರಕಿತ್ತು. ಇವರ ವೃಂದಾವನ ಪ್ರವೇಶ ಸ್ಮರಣಾರ್ಥ ರಜೆಯನ್ನು ಘೋಷಿಸಲಾಗಿತ್ತೆಂದು ತಿಳಿದುಬರುತ್ತದೆ. ಆಷಾಢ ಬಹುಳ ಅಮಾವಾಸ್ಯೆ ಕ್ರಿ.ಶ. ೧೮೯೯ರಂದು ಉಡುಪಿಯಲ್ಲಿ ವೃಂದಾವನಸ್ಥರಾದರು. ವೇದಾಂತ ಸಾಮ್ರಾಜ್ಯ ಪಟ್ಟ ೩೪ ವರ್ಷ.

**೩೪. ಶ್ರೀ ವಿಶ್ವೇಂದ್ರತೀರ್ಥರು :** ಶ್ರೀ ವಿಶ್ವಾಧೀಶರ ಕರಕಮಲ ಸಂಜಾತರಾದ ಶ್ರೀ ವಿಶ್ವೇಂದ್ರತೀರ್ಥರು ವೇದಾಂತಾದಿ ಶಾಸ್ತ್ರಗಳಲ್ಲಿ ಪ್ರಗಲ್ಭ ಪಾಂಡಿತ್ಯವಿರುವಂತೆ ಸಾಹಿತ್ಯದಲ್ಲೂ ಪರಿಣಿತಿಯಿತ್ತು. "ರಾಜೇಶ್", "ರಾಜನಾಥ" ಅಂಕಿತದಿಂದ ಅನೇಕ ಕನ್ನಡ, ತುಳು ಮತ್ತು ಸಂಸ್ಕೃತ ಕೃತಿಗಳನ್ನು ರಚಿಸಿದ್ದಾರೆ. ೪೭ ಕನ್ನಡ, ಒಂದು ತುಳು ಕೃತಿಯನ್ನು ರಚಿಸಿದ್ದಾರೆ. ಪ್ರತಿವರ್ಷ ಮಧ್ವನವಮಿಯ ಸಮಯದಲ್ಲಿ ಒಂದು ಸಪ್ತಾಹದ ವರೆಗೆ "ಯುಕ್ತಿ ಮಲ್ಲಿಕಾ ಸೌರಭ ಪ್ರಕಾಶಿನಿ" ಎಂಬ ಸಭೆಯನ್ನು ನಡೆಸಿ ದ್ವೈತವೇದಾಂತದ ಮುಖ್ಯ ವಿಷಯಗಳ

ಕುರಿತು ಪಂಡಿತರಿಂದ ಉಪನ್ಯಾಸ ಏರ್ಪಡಿಸಿ ಸೂಕ್ತ ಸಂಭಾವನೆ ಕೊಡುತ್ತಿದ್ದರು. ಇನ್ನಂಜೆಯಲ್ಲಿ ಶ್ರೀ ವಿಷ್ಣುಮೂರ್ತಿ ಹಯವದನ ಸ್ವಾಮಿ ಪ್ರೌಢಶಾಲೆ ಸ್ಥಾಪಿಸುವ ಮೂಲಕ ಆಧುನಿಕ ಶಿಕ್ಷಣಕ್ಕೆ ಗಮನವಿತ್ತ ಪ್ರಥಮ ಪೀಠಾಧೀಶರು. ಶ್ರೀಗಳವರು ಕ್ರಿ.ಶ. ೧೯೦೦-೦೧, ೧೯೧೬-೧೭, ೧೯೩೨-೩೩ ವರ್ಷಗಳಲ್ಲಿ ಮೂರು ಪರ್ಯಾಯ ನಡೆಸಿರುವರು. ೧೯೪೩ರಲ್ಲಿ ಗಣೇಶ ಚೌತಿಯಂದು ಮಾಧವ ಎಂಬ ವಟುವಿಗೆ ಆಶ್ರಮ ನೀಡಿ, ಶ್ರೀ ವಿಶ್ವೋತ್ತಮತೀರ್ಥರೆಂದು ನಾಮಕರಣ ಮಾಡಿ, ೩೫ ದಿನಗಳಲ್ಲಿ ಉದ್ಯಾವರದಲ್ಲಿ ಅಶ್ವೀನ ಶುದ್ಧ ನವಮಿಯಂದು ವೃಂದಾವನಸ್ಥರಾದರು. ಸೋದೆಯಲ್ಲಿ ಇವರ ಮೃತ್ತಿಕಾ ವೃಂದಾವನ ಅನಂತರ ಮಾಡಲಾಯಿತು.

**ಸೋದಾಮಠದಲ್ಲಿ ಪರಂಪರೆಯಿಂದ ಪೂಜಿಸಲ್ಪಡುವ ದೇವತಾ ವಿಗ್ರಹಗಳು.**

೧. ಶ್ರೀ ಮದಾನಂದತೀರ್ಥ ಭಗವತ್ಪಾದರು ಈ ಪರಂಪರೆಯ ಮೂಲ ಪುರುಷರಾದ ಶ್ರೀ ವಿಷ್ಣುತೀರ್ಥರಿಗೆ ಅನುಗ್ರಹಿಸಿಕೊಟ್ಟಿರುವ ಸಂಸ್ಥಾನದ ಮೂಲ ಪ್ರತೀಕವಾದ ಶ್ರೀ ಭೂವರಾಹದೇವರು.

೨. ಶ್ರೀ ಮನ್ಮಧ್ವಾಚಾರ್ಯರಿಗೆ ಬದರಿಕಾಶ್ರಮದಲ್ಲಿ ಶ್ರೀ ವೇದವ್ಯಾಸರು ಅನುಗ್ರಹಿಸಿ ಕೊಟ್ಟ ಸ್ವಯಂ ವ್ಯಕ್ತ ವ್ಯಾಸಮುಷ್ಟಿಯು.

೩. ಶ್ರೀ ವಾದಿರಾಜಗುರುಸಾರ್ವಭೌಮರಿಗೆ ಒಲಿದು ಬಂದ, ಸಂಪೂರ್ಣ ಸನ್ನಿಧಾನವುಳ್ಳ ಸ್ವಯಂವ್ಯಕ್ತ ಶ್ರೀ ಹಯಗ್ರೀವ ಮೂರ್ತಿಯು.

೪. ಶ್ರೀ ವಾದಿರಾಜರು ದ್ವಾರಾವತಿಯ ಗುಹೆಯಿಂದ ತಂದು ಪೂಜಿಸಿದ ಶ್ರೀ ಹಯಗ್ರೀವ ಸಾಲಿಗ್ರಾಮ.

೫. ಶ್ರೀ ವೇದವ್ಯಾಸರ ಆಜ್ಞೆಯಂತೆ, ಭೀಮಕುಂಡದಲ್ಲಿದ್ದ ಶ್ರೀ ಭೀಮಸೇನ ದೇವರಿಂದ ಪೂಜಿತರಾದ ಶ್ರೀ ಲಕ್ಷ್ಮೀ ನರಸಿಂಹದೇವರನ್ನು ಕುಂಡದಿಂದೆತ್ತಿ ತಂದು ಪೂಜಿಸಿದ ಮೂರ್ತಿಯು.

೬. ತಿರುಪತಿಯ ಶ್ರೀನಿವಾಸ ದೇವರು ಅನುಗ್ರಹಿಸಿದ ಶ್ರೀದೇವಿ, ಭೂದೇವಿ ಸಹಿತ ಸುವರ್ಣಮಯ ಶ್ರೀನಿವಾಸಮೂರ್ತಿ.

೭. ಹಂಪೆಯ ವಾಲಿ ಸುಗ್ರೀವ ಗುಹೆಯಿಂದ ತಂದ ವಾಲಿಕರಾರ್ಚಿತ ಶ್ರೀ ವಿಠಲ ಹಾಗೂ ಸುಗ್ರೀವ ಕರಾರ್ಚಿತ ಶ್ರೀರಾಮ ದೇವರು.

೮. ಮೂಡ ಬಿದರೆಯ ಜೈನದೇವಾಲಯದಲ್ಲಿದ್ದ ಜೈನಮೂರ್ತಿಯು ಶ್ರೀ ವಾದಿರಾಜರ ಧ್ಯಾನದಿಂದ ಪಚ್ಚೆ ವಿಠಲನಾಗಿ ರೂಪತಾಳಿದ ಮೂರ್ತಿಯು.

೯. ವಾದಿರಾಜರು ಗೌತಮ ಗುಹೆಯಿಂದ ತಂದು ಪೂಜಿಸಿದ ಶ್ರೀವಿಠಲಮೂರ್ತಿ ಮತ್ತು ವಿಶ್ವಂಬರ ಸಾಲಿಗ್ರಾಮ.

೧೦. ಶ್ರೀ ಮುಷ್ಣಯಾತ್ರೆಯನ್ನು ಮಾಡಿದ ಶ್ರೀ ಗುರುರಾಜರಿಗೆ ಪ್ರಸನ್ನನಾದ ಶ್ರೀ ಮುಷ್ಣ ವರಾಹನು ತಾನಾಗಿ ತನ್ನ ಮಹಾಸನ್ನಿಧಾನವುಳ್ಳ ವಿಗ್ರಹವನ್ನಿತ್ತಿರುವನು. ಇಂತಹ ಚಿಕ್ಕ ಶ್ರೀ ಮುಷ್ಣ ವರಾಹ ಮೂರ್ತಿಯು.

೧೧. ಶ್ರೀ ವಾದಿರಾಜರು ಕುಮಾರ ಪರ್ವತವನ್ನೇರಿ ಶ್ರೀ ವಿಷ್ಣುತೀರ್ಥಾಚಾರ್ಯರ ದರ್ಶನ ಮಾಡಿದ ಸಮಯದಲ್ಲಿ ಶ್ರೀ ವಿಷ್ಣುತೀರ್ಥಾಚಾರ್ಯರು ಶ್ರೀರಾಜರಿಗೆ ಕೊಟ್ಟಿರುವ ಶ್ರೀ ಹಯಗ್ರೀವಮೂರ್ತಿ.

೧೨. ಶ್ರೀ ಮಧ್ವಾಚಾರ್ಯ ಕರಾರ್ಚಿತ ಶ್ರೀ ಕಡಗೋಲ ಕೃಷ್ಣದೇವರ ಮೂರ್ತಿ.

೧೩. ಅಪೂರ್ವವಾದ ದಧಿವಾಮನ ಸಾಲಿಗ್ರಾಮ.

೧೪. ಶ್ರೀ ವಾದಿರಾಜರು ದ್ವಾರಕೆಯಲ್ಲಿ ಸಮುದ್ರದಲ್ಲಿ ಮುಳುಗಿ ತಂದಿರುವ ಬಲಮುರಿಶಂಖ.

೧೫. ಶ್ರೀ ಮಧ್ವಾಚಾರ್ಯರು ತನ್ನ ಸಹೋದರ ವಿಷ್ಣುತೀರ್ಥರಿಗೆ ಕೊಟ್ಟಿದ್ದ ಬಲಮುರಿಶಂಖ.

೧೬. ಶ್ರೀ ಮಧ್ವಾಚಾರ್ಯರು ತನ್ನ ಸಹೋದರರೆಂದೂ, ಶಿಷ್ಯರೆಂದೂ ಭಕ್ತಶ್ರೇಷ್ಠರೆಂದೂ, ಶ್ರೀ ವಿಷ್ಣುತೀರ್ಥಾಚಾರ್ಯರಿಗೆ ಒಲಿದಿತ್ತ ಶ್ರೀಕೃಷ್ಣ ಶ್ರೀ ಎಂಬ ಅಂಕಿತವುಳ್ಳ ಮುದ್ರೆಯುಂಗರ ಮತ್ತು ಅಕ್ಷಯ ಪಾತ್ರೆ.

೧೭. ಶ್ರೀ ರಾಜರು ಗಂಡಕಿನದಿಯಲ್ಲಿ ಸ್ನಾನ ಮಾಡುತ್ತಿರುವಾಗ ಅವರ ಭಕ್ತಿಗೆ ಮೆಚ್ಚಿ, ಒಲಿದು ದೇಹಕ್ಕೆಲ್ಲ ಸಾಲಿಗ್ರಾಮಗಳು ಅಂಟಿಕೊಂಡವು ಅವುಗಳಲ್ಲಿ ೧೨ ಕ್ಷೇತ್ರ ಗುಲಗಂಜಿ ಆಕಾರದ ಶ್ರೀ ಲಕ್ಷ್ಮೀನಾರಾಯಣ ಸಾಲಗ್ರಾಮಗಳ (ಸಂಪುಟ)

೧೮. ಶ್ರೀ ಮಧ್ವಕರಾರ್ಚಿತ ಗರುಡವಾಹನ ಲಕ್ಷ್ಮೀನಾರಾಯಣ ಮೂರ್ತಿ.

೧೯. ಶ್ರೀ ರಾಜರು ಐದನೆಯ ಪರ್ಯಾಯ (ಸೋದೆ)ಯಲ್ಲಿ ಪೂಜಿಸಿ ಅನುಗ್ರಹಿಸಿದ ಶ್ರೀ ಕೃಷ್ಣ ಪ್ರತಿಮಾ.

೨೦. ಲಕ್ಷ್ಮೀ ಪ್ರತಿಮಾ.

೨೧. ಶ್ರೀ ಮುಖ್ಯಪ್ರಾಣ ಪ್ರತಿಮಾ.

೨೨. ಶ್ರೀರಾಜರ ಪ್ರತಿಮೆ.

೨೩. ಶ್ರೀ ರಾಜರ ಸುವರ್ಣ ಪಾದುಕೆಗಳು.

೨೪. ಶ್ರೀ ಭೂತರಾಜರ ಸನ್ನಿಧಾನದ ಪದ್ಮಪೀಠ.

ಇವುಗಳಲ್ಲದೆ ಇನ್ನೂ ಅನೇಕ ಪ್ರತಿಮೆಗಳಿವೆ. ಈ ತರದಿಂದ ಮಹಾತ್ಮರ ಕರಾರ್ಚಿತ ವಿಗ್ರಹಗಳೂ, ಬಲಮುರಿ ಶಂಖ ಮೊದಲಾದ ಉತ್ತಮ ವಸ್ತುಗಳೂ ಶ್ರೀ ಮದ್ವಾದಿರಾಜ ಗುರುಸಾರ್ವಭೌಮರ ಸಂಸ್ಥಾನದಲ್ಲಿ ಪರಂಪರೆಯಿಂದ ಪೂಜಿಸಲ್ಪಟ್ಟು ಮಹಾಸನ್ನಿಧಾನವುಳ್ಳವುಗಳಾಗಿರುವವು; ಶ್ರೀ ಕೃಷ್ಣದೇವರ ಸನ್ನಿಧಾನದಲ್ಲಿ ಶ್ರೀ ಮನ್ಮಧ್ವಾಚಾರ್ಯರು ಸ್ಥಾಪಿಸಿರುವ ಭದ್ರದೀಪಗಳಂತಿರುವ ಎರಡೂ ದೀಪಗಳೂ ಈ ಸಂಸ್ಥಾನದಲ್ಲಿ ಶ್ರೀ ದೇವರ ಸನ್ನಿಧಾನದಲ್ಲಿ ಪ್ರಜ್ವಲಿಸುತ್ತಿರುವುವು.

॥ ಶ್ರೀ ॥

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

ತಪೋ ವಿದ್ಯಾ ವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥

ಕೋಲವ್ಯಾಸ ಹಯಗ್ರೀವ ಪದಕಂಜ ಮಧುವ್ರತಮ್ ।
ಶ್ರೀ ವಿಶ್ವೋತ್ತಮಯೋಗೀಂದ್ರಂ ವಂದೇಹಂ ವಾದಿರಾಟ್ ಪ್ರಿಯಮ್ ॥

## ಶ್ರೀ ವಿಶ್ವೋತ್ತಮ ತೀರ್ಥರು

ಉಡುಪಿಯಿಂದ ಮಂಗಳೂರಿಗೆ ಹೋಗುವ ಹೆದ್ದಾರಿಯಲ್ಲಿ ಆರು ಕಿ.ಮೀ. ದೂರದಲ್ಲಿ ಉದ್ಯಾವರವೆಂಬ ಗ್ರಾಮವಿದೆ. ಉದ್ಯಾವರ (ಉದಯ ಪುರ) ಒಂದು ಕಾಲದಲ್ಲಿ ಸಮೃದ್ಧಿಯಾದ ರಾಜಧಾನಿಯಾಗಿತ್ತು. ನೂರೈವತ್ತು ವರ್ಷಗಳ ಹಿಂದೆ ವೃಂದಾವನಾಚಾರ್ಯರೆಂದೇ ಪ್ರಖ್ಯಾತರಾದ ಸೋದಾಮಠಾಧೀಶರಾದ ಶ್ರೀ ವಿಶ್ವಪ್ರಿಯತೀರ್ಥರು ಇಲ್ಲಿ ಮಠ ಕಟ್ಟಿಸಿದರು. ಮಠಕ್ಕೆ ಹಿಂಬದಿಯಲ್ಲಿ ಹತ್ತಿರವಾಗಿ ಪಾಪನಾಶಿನಿ ನದಿಯು ಹರಿಯುತ್ತಿದೆ. ಸಮೀಪದಲ್ಲಿ ಶ್ರೀ ವೃಂದಾವನಾಚಾರ್ಯರ ಗೃಹಸ್ಥ ಶಿಷ್ಯ ಬಿಡಿ ಸನ್ಯಾಸಿಗಳಾಗಿದ್ದ ಶ್ರೀ ಭೂವರಾಹ ತೀರ್ಥರಿಗೆ ಸಂಬಂಧಿಸಿದ ಮಠವಿದೆ. ಈ ಮಠದಲ್ಲಿ ಶ್ರೀ ವೃಂದಾವನಾಚಾರ್ಯರ ಕರಾರ್ಚಿತ ಶ್ರೀವಾದಿರಾಜರ ಸುವರ್ಣ ಪಂಚವೃಂದಾವನ ಮತ್ತು ಇತರ ಪ್ರತಿಮೆಗಳಿದ್ದು, ಅವು ನಿತ್ಯವೂ ಅಲ್ಲಿ ಪೂಜಿಸಲ್ಪಡುತ್ತವೆ.

ಸುಮಾರು ೭೫ ವರ್ಷಗಳ ಹಿಂದೆ ಈ ಉದ್ಯಾವರದ ಸೋದಾಮಠದಲ್ಲಿ ಅಂದಿನ ಪೀಠಾಧಿಪತಿಗಳಾದ ಶ್ರೀ ವಿಶ್ವೇಂದ್ರ ತೀರ್ಥರ ಪೂರ್ವಾಶ್ರಮ ತಮ್ಮಂದಿರಾದ ಶ್ರೀಕೃಷ್ಣಾಚಾರ್ಯರೆಂಬುವವರು ತಮ್ಮ ಪತ್ನಿ ಕೃಷ್ಣವೇಣಿಯೊಂದಿಗೆ ವಾಸವಾಗಿದ್ದರು. ಈ ದಂಪತಿಗಳು ಪರಮ ಸಾತ್ವಿಕರಾದ ಭಗವದ್ಭಕ್ತರಾಗಿದ್ದರು. ಇವರಿಗೆ ಶ್ರೀ ಮುಖನಾಮ ಸಂವತ್ಸರದ ಪುಷ್ಯ ಕೃಷ್ಣಪಕ್ಷ ತ್ರಯೋದಶಿ ಶುಭತಿಥಿ ಜ್ಯೇಷ್ಠಾ ನಕ್ಷತ್ರದ ಶನಿವಾರ ದಿನ (೧೩-೧-೧೯೩೪)ರಂದು ಗಂಡು ಶಿಶುವಿನ ಜನನವಾಯಿತು. (ಪರಿಶಿಷ್ಟದಲ್ಲಿ ಜನ್ಮಕುಂಡಲಿ ಕೊಡಲಾಗಿದೆ)

ಈ ಶಿಶುವಿನ ಜನನದ ಸಮಯದಲ್ಲಿ ಉದ್ಯಾವರದ ಮಠದಲ್ಲಿ ವಾಸವಾಗಿದ್ದ ಶ್ರೀ ವಿಶ್ವೇಂದ್ರತೀರ್ಥರು ಮಗುವಿನ ಜನನ ಸಮಯದ ಕುಂಡಲಿ ಹಾಕಿದರು. ಅವರು ಜ್ಯೋತಿಷ್ಯ ಬಲ್ಲವರಾಗಿದ್ದರು. ಅವರು ಭವಿಷ್ಯತ್ತಿನ ಘಟನೆಯನ್ನು ಮುಂಚಿತವಾಗಿ ಅರಿಯುವ ಮಹಾ ಮಹಿಮರಾಗಿದ್ದರು. "ಈ ಮಗು ಮುಂದೆ ಸಂಸ್ಥಾನದ ಉತ್ತರಾಧಿಕಾರಿಯಾಗುವವನು" ಎಂದು ತಿಳಿದರಂತೆ. ಆಗ ಎರಡು ಸಿಡಿಮದ್ದುಗಳನ್ನು ಸಿಡಿಸಿ ತಮ್ಮ ಸಂತೋಷ ಪ್ರಕಟಪಡಿಸಿದರಂತೆ. ಈ ಘಟನೆಯನ್ನು ಗೋವಿಂದಣ್ಣ ಹೇಳುತ್ತಿದ್ದರು.

ಮಗುವಿಗೆ 'ಮಾಧವ' ಎಂದು ನಾಮಕರಣ ಮಾಡಿದರು. ನಾಲ್ಕು ವರ್ಷದ ಮಗು ಕಲ್ಲುಗಳನ್ನು ಇಟ್ಟುಕೊಂಡು ಆಟವಾಡುತ್ತಾ "ಪೂಜೆ ಮಾಡುತ್ತಾ ಇದ್ದೇನೆ ಎಲ್ಲರೂ ಬಂದು ತೀರ್ಥತೆಗೆದುಕೊಳ್ಳಿ" ಎಂದು ಕರೆಯುವುದನ್ನು ಕಂಡು ತಂದೆ ತಾಯಿ ಹಾಗೂ ಬಂಧು ಬಳಗದವರು ಆಶ್ಚರ್ಯ ಹೊಂದಿ ಸಂತೋಷಪಡುತ್ತಿದ್ದರು. ಬಾಲಕ ಮಾಧವನ ಬಾಲಲೀಲೆಯನ್ನು ನೋಡಿ ಹಿಗ್ಗುತ್ತಾ ಕಾಲಕಳೆಯುತ್ತಿದ್ದ ಉಡುಪಿಯ ಸೋದಾಮಠದಲ್ಲಿ ಉಪನಯನ ಮಾಡಲು ಮುಂದಾದರು. ಒಂದು ಶುಭ ಮುಹೂರ್ತದಲ್ಲಿ ಉಡುಪಿ ಶ್ರೀಕೃಷ್ಣನ, ಸೋದಾಮಠದ ಪಟ್ಟದದೇವರಾದ ಶ್ರೀ ಭೂವರಾಹ, ಶ್ರೀ ಹಯಗ್ರೀವ, ವೇದವ್ಯಾಸ, ಶ್ರೀ ಮುಖ್ಯಪ್ರಾಣ, ವಾದಿರಾಜ ಹಾಗೂ ಭೂತರಾಜರ ಸನ್ನಿಧಿಯಲ್ಲಿ ಹಾಗೂ ಶ್ರೀ ವಿಶ್ವೇಂದ್ರತೀರ್ಥರ ದಿವ್ಯ ಉಪಸ್ಥಿತಿಯಲ್ಲಿ ತಂದೆಯವರಾದ ಶ್ರೀ ಕೃಷ್ಣಾಚಾರ್ಯರಿಂದ ಗಾಯಿತ್ರಿ ಉಪದೇಶ ಪಡೆದನು. ವಟು ಮಾಧವನ ಸಹಿತ ತಂದೆ ತಾಯಿಗಳು ಶ್ರೀ ವಿಶ್ವೇಂದ್ರತೀರ್ಥರಿಗೆ ಯಥಾನು ಶಕ್ತಿ ಕಾಣಿಕೆ ಸಮರ್ಪಿಸಿ ಪಾದಪೂಜೆ ಮಾಡಿ, ಗುರುಗಳಿಂದ ಮಂತ್ರಾಕ್ಷತೆ ಪಡೆದು ಧನ್ಯಾತಾಭಾವದಿಂದ ತಮ್ಮ ಮನೆಗೆ ಮರಳಿದರು.

ಬಾಲವಟು ಮಾಧವನು ಶ್ರದ್ಧೆಯಿಂದ ಸಕಾಲದಲ್ಲಿ ಸಂಧ್ಯಾವಂದನೆ, ಅಗ್ನಿಕಾರ್ಯಾದಿಗಳನ್ನು ಮಾಡುತ್ತಾ, ಸ್ತೋತ್ರಪಠಣೆ ಮಾಡುತ್ತಾ ಮಾತಾ ಪಿತೃಗಳನ್ನು ಸಂತೋಷ ಪಡಿಸುತ್ತಿದ್ದನು. ಹೀಗೆ ಒಂದು ವರ್ಷಕಾಲ ಕಳೆಯಿತು.

ಶ್ರೀ ಹಯಗ್ರೀವದೇವರು ಸ್ವಪ್ನದಲ್ಲಿ ಶ್ರೀ ವಿಶ್ವೇಂದ್ರತೀರ್ಥರಿಗೆ ಕಾಣಿಸಿಕೊಂಡು ನಿಮ್ಮ ಅವತಾರಕಾಲ ಮುಗಿಯುತ್ತ ಬಂದಿದೆ. ಯೋಗ್ಯವಟುವಿಗೆ ಸಂನ್ಯಾಸನೀಡಿ ಸಂಸ್ಥಾನವನ್ನು ಒಪ್ಪಿಸುವಂತೆ ಸೂಚಿಸಲು ಅವರು ಉತ್ತರಾಧಿಕಾರಿಯ ಹುಡುಕಾಟ ಪ್ರಾರಂಭಿಸಿದರು. ಒಬ್ಬ ವಟುವನ್ನು ಆರಸಿಕೊಂಡು ಅವನಿಗೆ ಆಶ್ರಮ ಕೊಡಲು ಮನಸ್ಸು ಮಾಡಿದರು. ಆಗ ಪರಮಾತ್ಮನು ಪುನಃ ಸ್ವಪ್ನದಲ್ಲಿ ಕಾಣಿಸಿಕೊಂಡು ಆ ವಟುವಿಗೆ ಆಶ್ರಮ ನೀಡದಂತೆಯೂ, ಮಾಧವನಿಗೆ ಆಶ್ರಮ ನೀಡುವಂತೆಯೂ ಸೂಚಿಸಿದನು. ಆಗ ಆನಂದ ತುಂದಿಲರಾದ ಶ್ರೀ ವಿಶ್ವೇಂದ್ರತೀರ್ಥರು ಕೃಷ್ಣಾಚಾರ್ಯ ದಂಪತಿಗಳನ್ನು ಮಠಕ್ಕೆ ಕರೆಸಿಕೊಂಡು ಮಾಧವನಿಗೆ ಆಶ್ರಮ ನೀಡುವ ವಿಷಯ ಪ್ರಸ್ತಾಪಿಸಿದರು. ಆಗ ಮಾಧವನ ತಾಯಿ ಕೃಷ್ಣವೇಣಿಯವರು ಶ್ರೀಗಳವರಿಗೆ ನಮಸ್ಕರಿಸಿ "ಸ್ವಾಮಿ, ನಮ್ಮ ಪ್ರೀತಿಯ ಮಗ ಕೇವಲ ಒಂಬತ್ತು ವರ್ಷದ ಹಸುಳೆ. ಆಶ್ರಮ ಸ್ವೀಕರಿಸಿದರೆ ಕಠಿಣವಾದ ವ್ರತ, ನಿಯಮ, ಉಪವಾಸಾದಿಗಳಿಂದ ದೇಹ ದಂಡಿಸಬೇಕಾಗುತ್ತದೆ. ಇದರಿಂದ ಚಿಕ್ಕ ಬಾಲಕ ಕುಂದಿಹೋಗುತ್ತಾನೆ. ಮಗನ ಈ ಕಷ್ಟ ನೋಡಲಾರೆವು. ಆದುದರಿಂದ ಖಂಡಿತವಾಗಿ ಆಶ್ರಮ ನೀಡಬೇಡಿರಿ ಎಂದು ತಮ್ಮಲ್ಲಿ ನಮ್ಮ ನಮ್ರ ವಿನಂತಿ"ಯೆಂದು ಪ್ರಾರ್ಥಿಸುತ್ತಾ ತಮ್ಮನ್ನು ಕ್ಷಮಿಸಬೇಕೆಂದು ಪುನಃ ಪುನಃ ನಮಸ್ಕರಿಸಿದರು. ಆಗ ಅವರ ಮನವನ್ನರಿತ ಶ್ರೀಗಳವರು "ಹಾಗೇ ಆಗಲಿ, ಎಲ್ಲಾ ಪರಮಾತ್ಮನ ಚಿತ್ತ" ಎಂದು ನುಡಿದು ಸುಮ್ಮನಾದರು.

ಮಹಾಪೂಜಾನಂತರ, ದೇವರ ದರ್ಶನ ಮಾಡಿಸುತ್ತಾ ಶ್ರೀ ಪಾದಂಗಳವರು ಮಾಧವನಿಗೂ ದೇವರದರ್ಶನ ಮಾಡಿಸುವಾಗ ವಿಶೇಷಾನುಗ್ರಹ ದೃಷ್ಟಿಯಿಂದ ನೋಡುತ್ತಿದ್ದರು. ತೀರ್ಥಪ್ರಸಾದದ ನಂತರ ಮೂವರಿಗೂ ಶ್ರೀಗಳವರು ಫಲಮಂತ್ರಾಕ್ಷತೆ ಕರುಣಿಸಿ, "ಹರಿಚಿತ್ತದಂತೆ ಆಗುತ್ತದೆ, ಹೋಗಿ ಬನ್ನಿ, ನಿಮಗೆ ಮಂಗಳವಾಗಲಿ" ಎಂದು ಆಚಾರ್ಯ ದಂಪತಿಗಳನ್ನು ಹಾಗೂ ಮಾಧವನನ್ನು ಬೀಳ್ಕೊಟ್ಟರು. ಸಾತ್ವಿಕ ದಂಪತಿಗಳು ಮನೆ ಸೇರಿದರೂ ಮನವು ಯೋಚನೆಯಲ್ಲಿ ಮಗ್ನವಾಗಿತ್ತು.

ಇದೆಲ್ಲ ನಡೆದು ವಾರ ಕಳೆಯುವಷ್ಟರಲ್ಲಿ, ಮಾಧವನ ತಾಯಿ ಶ್ರೀಮತಿ ಕೃಷ್ಣವೇಣಿಯಮ್ಮನವರು ಸುಂದರವಾದ ಸ್ವಪ್ನಕಂಡರು. ಸ್ವಪ್ನದಲ್ಲಿ ಬಾಲಕ ಮಾಧವ ಶುದ್ಧವಾದ ಆಸನದ ಮೇಲೆ ಕುಳಿತು ಧ್ಯಾನ ಪರವಶವಾಗಿದ್ದಾನೆ. ಅಮಿತ ತೇಜಸ್ಸಿನಿಂದ ಕಂಗೊಳಿಸುತ್ತಿದ್ದಾನೆ. ತಾಯಿಯು ಬಾಲಕನ ತೇಜಸ್ಸನ್ನು ಕಂಡು ಹಿಗ್ಗುತ್ತಾರೆ. ಆಗ ಮಾಧವನ ಹಿಂದಿನಿಂದ ಮಿಂಚಿನಂತೆ ಪ್ರಕಾಶಿಸುತ್ತಿರುವ ಶ್ವೇತಾಶ್ವ ಒಂದು ಬಂದು ಮಾಧವನ ತಲೆಯ ಮೇಲೆ ಮುದದಿಂದ ತನ್ನ ಮುಖವನ್ನಿಟ್ಟು, ಮಾಧವನ ತಾಯಿಯು ಮುಖವನ್ನೇ ದಿಟ್ಟಿಸಿ ನೋಡುತ್ತಾ ನಿಂತಿರುವ ದೃಶ್ಯವನ್ನು ಸ್ವಪ್ನದಲ್ಲಿ ಕಂಡು ಸಂತೋಷಪಡುತ್ತಿರುವಾಗಲೇ ಎಚ್ಚರಗೊಂಡರು. ಆದರೂ ಸ್ವಪ್ನದಲ್ಲಿ ಕಂಡ ದೃಶ್ಯ ನೆನಪಿಸಿಕೊಳ್ಳುತ್ತಾ ಆನಂದ ಪರವಶರಾಗುತ್ತಿದ್ದರು. ಸ್ವಪ್ನದ ಮರ್ಮ ಊಹಿಸಿದ ಶ್ರೀ ಮತಿಕೃಷ್ಣವೇಣಿಯಮ್ಮನವರು, ಪತಿದೇವರಿಗೂ ಹೇಳದೇ ಹಾಗೆ ಸುಮ್ಮನಿದ್ದರು. ಪುನಃ ಅದೇ ಸ್ವಪ್ನ ಎರಡನೆ ಬಾರಿ ಆದಾಗಲೂ, ಪುತ್ರವಾತ್ಸಲ್ಯದಿಂದಾಗಿ ಆ ತಾಯಿ ಯಾರಿಗೂ ಹೇಳದೆ ಮೌನವಹಿಸಿದರು. ಮಾಧವನ ಅವತಾರ ಉದ್ದೇಶ ಯತ್ಯಾಶ್ರಮ ಸ್ವೀಕರಿಸಿ ಹಯವದನನ್ನು ಪೂಜಿಸುವದು. ಇದು ಪರಮಾತ್ಮನ ಸಂಕಲ್ಪ. "ಹರಿಚಿತ್ತವೇ ಸತ್ಯ" ಎನ್ನುವಂತೆ ಸತ್ಯಸಂಕಲ್ಪನಾದ ಪರಮಾತ್ಮ ಮೂರನೇ ಬಾರಿಯೂ ಅದೇ ಸ್ವಪ್ನವನ್ನು ಕೃಷ್ಣವೇಣಿಯಮ್ಮನವರಿಗೆ ತೋರಿಸಿದನು ಹಾಗೂ ಆ ಸ್ವಪ್ನದ ವಿಷಯಗಳನ್ನೆಲ್ಲವನ್ನೂ ಎಲ್ಲರಿಗೂ ಹೇಳುವಂತೆ ಪ್ರೇರೇಪಿಸಿದನು. ಆಗ ಕೃಷ್ಣವೇಣಿಯವರು ತಮ್ಮ ಪತಿಯ ಬಳಿಗೆ ಬಂದು ಗದ್ಗದಿತ ಕಂಠದಿಂದ ತಮ್ಮ ಸ್ವಪ್ನ ವೃತ್ತಾಂತವನ್ನು ವಿವರಿಸಿದರು.

ಆಗ ಆಚಾರ್ಯರು ಆಶ್ಚರ್ಯ ಆನಂದದಿಂದ ರೋಮಾಂಚಿತರಾಗಿ ಹೇಳಿದರು. "ನೋಡಿದೆಯಾ ನೀನು, ಮಗನ ಮೇಲಿನ ಮೋಹದಿಂದ ಗುರುಗಳು ಹೇಳಿದಾಗ ಮಗನಿಗೆ ಸನ್ಯಾಸಾಶ್ರಮಕ್ಕೆ ಒಪ್ಪಲಿಲ್ಲ. ಆದರೆ ಹಯವದನ ದೇವರು ನಿನಗೇ ಸ್ವಪ್ನದ್ವಾರಾ ಒಪ್ಪಿಗೆ ನೀಡುವಂತೆ ಪ್ರೇರೇಪಣೆ ಮಾಡಿರುವನು. ಮಾಧವನು ಅವತಾರ ಉದ್ದೇಶ ಭಾವೀ ಸಮೀರರ ಪಾದಸೇವಗೆ ಎಂಬುದನ್ನು ಹಯವದನ ದೇವರೇ ಸೂಚಿಸಿರುವನು. ಇಂತಹ ಮಗನನ್ನು ನಮಗೆ ಕರುಣಿಸಿ ನಮ್ಮ ವಂಶಪಾವನಗೊಳಿಸಿದನು ಸ್ವಾಮಿ" ಎಂಬುದಾಗಿ ಭಾವೋದ್ರೇಗದಿಂದ ನುಡಿದರು. ಬೆಳಗಿನ ಪ್ರಾತರಾನ್ಹಿಕವನ್ನು ಬೇಗನೆ ಮುಗಿಸಿ ಕೃಷ್ಣಾಚಾರ್ಯರು ಪತ್ನಿ ಪುತ್ರರೊಂದಿಗೆ ಶ್ರೀಗಳನ್ನು ನೋಡಲು ಮಠಕ್ಕೆ ಹೊರಟರು.

ಇವರ ಆಗಮನವನ್ನು ನಿರೀಕ್ಷಿಸಿದವರಂತೆ ಹರ್ಷ ಚಿತ್ತರಾಗಿ ಕುಳಿತಿದ್ದ ಶ್ರೀಗಳವರನ್ನು ನೋಡುತ್ತಲೇ ಶ್ರೀ ಶ್ರೀ ಗಳವರಿಗೆ ಫಲ, ಕಾಣಿಕೆ ಸಮರ್ಪಿಸಿ ಶಿರಸಾಷ್ಟಾಂಗ ನಮಸ್ಕಾರ ಮಾಡಿ ವಿನೀತರಾಗಿ ನಿಂತರು. ಆಗ ಶ್ರೀಗಳು ಮೂವರಿಗೂ ಕುಳಿತುಕೊಳ್ಳುವಂತೆ ಸೂಚಿಸಿದರು. ಕುಶಲ ಪ್ರಶ್ನೆಗಳ ನಂತರ "ಆಚಾರ್ಯ ದಂಪತಿಗಳು ಮಗನ ಸಹಿತ ಬಂದಿರುವಿರಲ್ಲ! ಏನು ವಿಷಯ" ಎಂಬುದಾಗಿ ವಿನೋದವಾಗಿ ಪ್ರಶ್ನಿಸಿದರು. ಆಗ ಆಚಾರ್ಯರು "ತಮಗೆ ತಿಳಿಯದ ವಿಷಯವೇನಲ್ಲ. ನಾವು ಶ್ರೀ ಹಯವದನ ದೇವರ ಪ್ರೇರಣೆಯಿಂದಲೇ ಇಲ್ಲಿಗೆ ಬಂದಿರುವೆವು". ಎಂದು ನುಡಿದು ಮೂರು ಬಾರಿ ತಮ್ಮ ಪತ್ನಿಗಾದ ಸ್ವಪ್ನ ವೃತ್ತಾಂತಗಳನ್ನೆಲ್ಲವನ್ನೂ ಹೇಳಿದರು. ಗುರುಗಳು ಪರಮಾನಂದಭರಿತವಾಗಿ ಹಯವದನ ತಾಯಿಗೆ ಪ್ರೇರೇಪಿಸಿರುವುದು ಸಾಮಾನ್ಯ ಸಂಗತಿಯಲ್ಲ. ನಿಮ್ಮ ಸಾವಿರಾರು ಜನ್ಮದ ಪುಣ್ಯದ ಫಲವೇ ಇದಾಗಿದೆ ಎಂದು ಮಾರ್ಮಿಕವಾಗಿ ನುಡಿದು ವಿಶೇಷ ಸಂಭ್ರಮದಿಂದ ದೇವರ ಪೂಜೆ ಮಾಡಿ ತೀರ್ಥ ಪ್ರಸಾದದ ನಂತರ,

ಆಚಾರ್ಯ ದಂಪತಿಗಳಿಗೂ ಹಾಗೂ ಭಾವಿ ಪೀಠಾಧಿಪತಿಗೂ ಫಲ ಮಂತ್ರಾಕ್ಷತೆ ಅನುಗ್ರಹಿಸಿ, ಶೀಘ್ರವಾಗಿ ಮುಂದಿನ ಕಾರ್ಯಕ್ರಮ ಏರ್ಪಾಡು ಮಾಡುತ್ತೇವೆಯೆಂದು ನುಡಿದು ಬೀಳ್ಕೊಟ್ಟರು.

ಉಡುಪಿಯಿಂದ ಪಾಜಕಕ್ಕೆ ಹೋಗುವ ಮಾರ್ಗದಲ್ಲಿ ಒಂದೂವರೆ ಕಿ.ಮೀ. ಒಳಬದಿಯಲ್ಲಿ ತೆಂಗಿನತೋಟಗಳ ಮಧ್ಯದಲ್ಲಿ, ವರಾಹ ತೀರ್ಥನಾಮಕ ಪುಷ್ಕರಣಿಯಿರುವ ಪಂಜಮಾರು ಎಂಬಲ್ಲಿ ಒಂದೂವರೆ ಶತಮಾನದ ಹಿಂದೆ ಸೋದಾ ಮಠಾಧೀಶರಾಗಿದ್ದ ವೃಂದಾವನಾಚಾರ್ಯರಿಂದ ನಿರ್ಮಾಣಗೊಂಡ ಮಠವಿದೆ. ಇದನ್ನು ಶ್ರೀ ವಿಶ್ವೇಂದ್ರತೀರ್ಥರು ಜೀರ್ಣೋದ್ಧಾರ ಮಾಡಿದ್ದಾರೆ. ಪಾಠಪ್ರವಚನಕ್ಕೂ, ಜಪತಪಾನುಷ್ಠಾನಕ್ಕೂ ಹೇಳಿ ಮಾಡಿಸಿದಂತಿರುವ ಈ ಪ್ರಶಾಂತ ಸ್ಥಳದಲ್ಲಿ ವಟು ಮಾಧವನಿಗೆ ಚತುರ್ಥಾಶ್ರಮ ನೀಡಲು ತೀರ್ಮಾನಿಸಿದ, ಶ್ರೀ ವಿಶ್ವೇಂದ್ರತೀರ್ಥರು ಒಂದು ಶುಭ ಮುಹೂರ್ತ ನೋಡಿ ಮಾಧವನನ್ನು ಕರೆತರಲು ಶ್ರೀ ಗೋವಿಂದಣ್ಣನ ಜೊತೆ ಇನ್ನೊಬ್ಬರನ್ನೂ ಉದ್ಯಾವರಕ್ಕೆ ಕಳುಹಿಸಿದರು. ಇಬ್ಬರೂ ಹೋಗಿ ಶ್ರೀ ಕೃಷ್ಣಾಚಾರ್ಯರನ್ನು ಕುರಿತು "ಶ್ರೀ ಶ್ರೀ ಗಳವರು ಆಶ್ರಮದಿನ ನಿಶ್ಚಯ ಮಾಡಿದ್ದಾರೆ. ಆದುದರಿಂದ ನಮ್ಮ ಜೊತೆ ಮಾಧವನನ್ನು ಕಳುಹಿಸಿ ಕೊಡುವಂತೆ ಅಪ್ಪಣೆ ಮಾಡಿರುವರು" ಎಂದು ತಿಳಿಸಿದರು. ಸ್ವಲ್ಪ ಸಮಯದ ನಂತರ ಮಾಧವನನ್ನು ಕರೆದುಕೊಂಡು ಮಠದವರು ಹೊರಟಾಗ ಜಗಲಿಯ ಮೇಲೆನಿಂತು ಮನೆಯವರೆಲ್ಲಾ ನೋಡುತ್ತಿದ್ದರು. ಆಗ ತಾಯಿಯ ಕಣ್ಣಿನಲ್ಲಿ ನೀರು ಕಾಣಿಸಿತು. ಆದರೆ ಮನೆಯಿಂದ ಹೊರಟ ಪುಟ್ಟ ಬಾಲಕ ಮಾಧವ ಒಮ್ಮೆಯೂ ಮನೆಯ ಕಡೆ ತಿರುಗಿ ನೋಡಲೇ ಇಲ್ಲ.

ನಂತರ ತುರೀಯಾಶ್ರಮಕ್ಕೆ ಆಗಬೇಕಾದ ಸಿದ್ಧತೆಗಳನ್ನೆಲ್ಲಾ ಮಾಡಿಸಿದ ಶ್ರೀ ಪಾದಂಗಳವರು, ಆಚಾರ್ಯ ದಂಪತಿಗಳನ್ನು ಹಾಗೂ ಬಂಧು ಬಾಂಧವರನ್ನು ಕರೆಸಿದರು. ಪುರೋಹಿತರ ಹಾಗೂ ವಿದ್ವಜ್ಜನರ ಆಗಮನವೂ ಆಯಿತು. ಸಂನ್ಯಾಸಾಶ್ರಮಕ್ಕೆ ಪೂರ್ವದಲ್ಲಿ ನಡೆಯಬೇಕಾದ ಪ್ರಾಯಶ್ಚಿತ್ತಾದಿ ಹೋಮಗಳೂ, ಆತ್ಮಶ್ರಾದ್ಧಾದಿ ಕರ್ಮಗಳೂ, ಮಾಧವನಿಂದ ಪೂರೈಸಿದ ಮೇಲೆ ಕ್ರಿ.ಶ. ೧೯೪೩ನೇ ಸ್ವಭಾನು ಸಂವತ್ಸರದ ಭಾದ್ರಪದ ಶುದ್ಧ ಚತುರ್ಥಿ, ಅಂದರೆ ವಿನಾಯಕ ಚತುರ್ಥಿಯಂದು ಶುಭಮುಹೂರ್ತದಲ್ಲಿ ಶ್ರೀ ವಿಶ್ವೇಂದ್ರತೀರ್ಥರು ವಟು ಮಾಧವನಿಗೆ ಸಂನ್ಯಾಸಾಶ್ರಮ ನೀಡಿ, ಶಂಖದಿಂದ ಅಭಿಷೇಕ ಮಾಡಿ "ಶ್ರೀ ವಿಶ್ವೋತ್ತಮತೀರ್ಥ"ರೆಂದು ನಾಮಕರಣ ಮಾಡಿ, ರಹಸ್ಯವಾಗಿ ಪ್ರಣವಾದಿ ಮಂತ್ರೋಪದೇಶ ಮಾಡಿ ಯತಿಧರ್ಮ ತಿಳಿಸಿ ಅವರಿಂದ ಪ್ರತಿಜ್ಞೆ ಮಾಡಿಸಿದರು. ಸಮಾರಂಭಕ್ಕೆ ಬಂದವರೆಲ್ಲರೂ ಆನಂದಭರಿತರಾದರು. ಕಾವಿಧರಿಸಿ, ದಂಡಧಾರಿಯಾದ ತೇಜಸ್ವಿ ನೂತನ ಯತಿಗಳು ವಿನಯದಿಂದ ಗುರುಗಳಿಗೆ ಪ್ರಣಾಮ ಸಲ್ಲಿಸುತ್ತಿರುವುದನ್ನು ನೋಡಿದ ಪೂರ್ವಾಶ್ರಮದ ಮಾತಾಪಿತೃಗಳು ಧನ್ಯತಾ ಭಾವದಿಂದ ರೋಮಾಂಚಿತರಾದರು.

ಸಮಾರಂಭದ ನಂತರ ತೀರ್ಥ ಪ್ರಸಾದ ಸ್ವೀಕರಿಸಿದ ಭಕ್ತರೆಲ್ಲರಿಗೂ ಫಲಮಂತ್ರಾಕ್ಷತೆಯನ್ನೂ, ವಿದ್ವಜ್ಜನರಿಗೆ ದಿವ್ಯ ಸಂಭಾವನೆಯನ್ನು ದಯಪಾಲಿಸಿದರು. ನಂತರ ಬಾಲಯತಿಗಳು "ಮಾತೃದೇವೋಭವ" ಎಂಬ ಶಾಸ್ತ್ರದಂತೆ ತಾಯಿಯವರಿಗೆ ನಮಸ್ಕರಿಸಿದರು. (ಯತಿಗಳು ತಾಯಿಗೆ ಮಾತ್ರ ನಮಸ್ಕಾರ ಮಾಡಬಹುದು. ತಂದೆಯು ಮಗನು ಯತಿಯಾಗಿದ್ದರೆ ಅವನಿಗೆ ನಮಸ್ಕರಿಸಬೇಕು) ಆಗ ಆಚಾರ್ಯ ದಂಪತಿಗಳು ಧನ್ಯತಾಭಾವತಾಳಿ ಮಾತನಾಡದಾದರು.

ಶ್ರೀ ವಿಶ್ವೇಂದ್ರತೀರ್ಥರು ಶಿಷ್ಯ ಸ್ವೀಕಾರ ಮಾಡಿ ೩೫ ದಿನಗಳ ನಂತರ ಅಶ್ವಯುಜ ಶುದ್ಧ ನವಮಿ (ಮಹಾನವಮಿ)ಯಂದು ಹರಿಪಾದ ಸೇರಿದರು. ಉದ್ಯಾವರಮಠದಲ್ಲಿಯೇ ವೃಂದಾವನಸ್ಥರಾದ ಗುರುಗಳ ಆರಾಧನಾ ಕಾರ್ಯಕ್ರಮವನ್ನು ಬಹುಭಕ್ತಿಯುತರಾಗಿ ವೈಭವದಿಂದ ನೆರವೇರಿಸಿದರು. ಮುಂದೆ ಶ್ರೀ ವಿಶ್ವೇಂದ್ರತೀರ್ಥರ ಮೃತ್ತಿಕಾ ವೃಂದಾವನವನ್ನು ಸೋದೆಯಲ್ಲಿ ಸ್ಥಾಪಿಸಲಾಯಿತು.

ಶ್ರೀ ವಿಶ್ವೇಂದ್ರತೀರ್ಥ ಗುರುಗಳು ತಮ್ಮ ಶಿಷ್ಯರಾದ ವಿಶ್ವೋತ್ತಮತೀರ್ಥರಿಗೆ ಮೂರು ವಿಷಯಗಳನ್ನು ತಪ್ಪದೆ ಆಚರಿಸಿಕೊಂಡು ಬರುವಂತೆ ತಿಳಿಸಿದ್ದಾರೆ.

೧. ಪ್ರತಿದಿವಸ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಸ್ನಾನ, ಜಪ, ಪೂಜೆ ಮಾಡುವುದು. ಭಕ್ತಾದಿಗಳಿಗೆ ೮½ ಘಂಟೆಗೆ ತೀರ್ಥ ನೀಡುವುದು ಪರ್ಯಾಯ ಸಮಯದಲ್ಲಿ ೧೧-೩೦ಕ್ಕೆ ತೀರ್ಥ ನೀಡುವುದು.

೨. ಸರ್ವರಲ್ಲಿ ಕಾರುಣ್ಯ ತೋರಿಸುವುದು.

೩. ದೇವರ ಪೆಟ್ಟಿಗೆಯನ್ನು ಜೊತೆಯಲ್ಲಿ ಶಿರೋಭಾಗದಲ್ಲಿಟ್ಟುಕೊಂಡು ಮಲಗುವದು. ರಾತ್ರೆ ವೇಳೆಯಲ್ಲಿ ಹೆಜ್ಜೆ ಸಪ್ಪಳ ಹಾಗೂ ಇನ್ನೂ ಕೆಲವು ಸದ್ದು ಕೇಳಿಬರುತ್ತದೆ. ಅದಕ್ಕೆ ಹೆದರಬಾರದು. ಏಕೆಂದರೆ ದೇವತೆಗಳು ಬಂದು ದೇವರದರ್ಶನ ಪಡೆದು ಪೂಜಿಸುತ್ತಾರೆ.

ಶ್ರೀ ವಿಶ್ವೋತ್ತಮತೀರ್ಥರು ತಮ್ಮ ಜೀವಮಾನ ಪರ್ಯಂತ ಈ ಮೂರು ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಬಂದಿರುತ್ತಾರೆ.

ಕಿರಿವಯಸ್ಸಿನ ಬಾಲಯತಿಗಳಾದ್ದರಿಂದ ಇವರ ಪಾಲನೆ, ಮಠದ ವ್ಯವಹಾರಗಳ ಜವಾಬ್ದಾರಿಯನ್ನು ಇವರ ಪೂರ್ವಾಶ್ರಮದ ಅಣ್ಣ ಶ್ರೀಪತಿ ಆಚಾರ್ಯರು ನಿರ್ವಹಿಸುತ್ತಿದ್ದರು. ಇವರ ಶ್ರೇಷ್ಠ ಯತಿಗಳಾಗಬೇಕೆಂಬ ಸದುದ್ದೇಶದಿಂದ ಹೊರ ಸಂಪರ್ಕಕ್ಕೆ ಹೆಚ್ಚಿನ ಅವಕಾಶಕೊಡದೆ ಇವರನ್ನು ವಯೋವೃದ್ಧರ ಸಂಗಡವಿರುವ ವ್ಯವಸ್ಥೆ ಮಾಡಿದ್ದರು. ಆದುದರಿಂದ ಇವರು ಹೆಚ್ಚು ಸಂಚಾರ ಮಾಡುತ್ತಿರಲಿಲ್ಲ.

**ಪ್ರಾರಂಭಿಕ ವಿದ್ಯಾಭ್ಯಾಸ :** ಶ್ರೀ ವಿಶ್ವೋತ್ತಮತೀರ್ಥರು ತಮ್ಮ ಪ್ರಾರಂಭಿಕ ಶಿಕ್ಷಣ ಉಡುಪಿಯ ಅಂದಿನ ಪ್ರಸಿದ್ಧ ವಿದ್ವಾಂಸರಾಗಿದ್ದ ಶ್ರೀ ಅಡ್ಡೆ ವೇದವ್ಯಾಸಾಚಾರ್ಯ ಹಾಗೂ ಅಲೆವೂರು ಸೀತಾರಾಮಾಚಾರ್ಯದಿಂದ ಪಂಜಿಮಾರು ಮಠದಲ್ಲಿ ಶ್ರದ್ಧಾಭಕ್ತಿಯಿಂದ ಅಧ್ಯಯನ ಮಾಡಿದರು. ಪಾಠಹೇಳುತ್ತಿದ್ದ ಮೇಲ್ಕಂಡ ಪ್ರಸಿದ್ಧ ವಿದ್ವಾಂಸರು ಬಾಲಯತಿಗಳಿಗೆ ಜಪ, ತರ್ಪಣ, ಸಂಸ್ಥಾನ ದೇವರ ಪೂಜೆ, ವೃತ ನಿಯಮ ಹಾಗೂ ಸಮಯ ಪಾಲನೆಯ ಶಿಸ್ತಿಗೆ ಭಂಗಬಾರದಂತೆ ಪಾಠ ಹೇಳಿ ಕೀರ್ತಿ ಭಾಜನರಾದರು. ಶ್ರೀ ವಿಶ್ವೋತ್ತಮತೀರ್ಥರು ಸಂಸ್ಕೃತ ಸಾಹಿತ್ಯ, ವ್ಯಾಕರಣ, ನ್ಯಾಯಶಾಸ್ತ್ರ ದಶಪ್ರಕರಣ ಹಾಗೂ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದರು.

ಸುಧಾ, ಯುಕ್ತಿಮಲ್ಲಿಕಾದಿ ಪ್ರೌಢಗ್ರಂಥಗಳನ್ನು ಅಂದಿನ ಉಡುಪಿಯಲ್ಲಿದ್ದ ಕಾಣಿಯೂರು ಮಠಾಧೀಶರಾಗಿದ್ದ, ಪ್ರಾತಃ ಸ್ಮರಣೀಯ, ಶಾಪಾನುಗ್ರಹಶಕ್ತರಾದ, ಮಹಾ ತಪಸ್ವಿಗಳಾದ ಶ್ರೀ ವಿದ್ಯಾಸಮುದ್ರತೀರ್ಥರಲ್ಲಿ ಮಾಡಿದರು.

**ಶ್ರೀ ವಿದ್ಯಾಸಮುದ್ರತೀರ್ಥರು :** ಅಷ್ಟಮಠಗಳಲ್ಲಿ ಶ್ರೀ ಮನ್ಮಧ್ವಾಚಾರ್ಯರ ಸಾಕ್ಷಾತ್

ಶಿಷ್ಯರಾದ ಶ್ರೀರಾಮತೀರ್ಥರ ಪರಂಪರೆಯ ಕಾಣಿಯೂರು ಮಠದ ೨೮ನೇ ಪೀಠಾಧಿಪತಿಗಳಾದ ಶ್ರೀ ವಿದ್ಯಾಸಮುದ್ರ ತೀರ್ಥ ಶ್ರೀ ಪಾದಂಗಳವರು ಕ್ರಿ.ಶ. ೧೮೮೯ ವಿರೋಧಿ ಸಂವತ್ಸರದ ಚೈತ್ರ ಬಹುಳ ಚವತಿ ಶುಭದಿನದಲ್ಲಿ ಜನ್ಮತಾಳಿದರು. ೧೯೦೨ ನೇ ಇಸ್ವಿ ಶುಭಕೃತು ಸಂ। ರದ ವೈಶಾಖ ಬಹುಳ ದಶಮಿಯಲ್ಲಿ ಸನ್ಯಾಸದೀಕ್ಷೆ ಹೊಂದಿದರು. ಇವರಿಗೆ ಸನ್ಯಾಸತ್ವ ಸಿದ್ಧಿಸಿತ್ತು. ಜನ್ಮತಃ ವಿದ್ಯಾ ಸಂಸ್ಕಾರವಿದ್ದವರು. ಅವಧೂತಚರ್ಯೆಯಲ್ಲಿದ್ದವರು. ಬಾಲ್ಯದಲ್ಲಿ ಬೆಳ್ಳೆ ಪುಟ್ಟಣ್ಣಾಚಾರ್ಯರಿಂದ ಸಾಹಿತ್ಯ, ವ್ಯಾಕರಣ ಮೊದಲಾದ ಗ್ರಂಥಗಳನ್ನು ಓದಿ, ಅದಮಾರು ಮಠದ ಪಂಡಿತೋತ್ತಮರೂ, ಮಹಾ ಉದಾರಿಗಳೂ, ತಪಸ್ವಿಗಳೂ, ಶಾಪಾನುಗ್ರಹಶಕ್ತರೂ ಆದ ಶ್ರೀ ವಿಭುಧಪ್ರಿಯತೀರ್ಥ ಶ್ರೀ ಮಚ್ಚರಣರವರಿಂದ ನ್ಯಾಯಸುಧಾ ಮೊದಲಾದ ಎಲ್ಲಾ ವೇದಾಂತಗ್ರಂಥಗಳನ್ನೂ ಓದಿ ಪಂಡಿತವರ್ಯರೆನಿಸಿಕೊಂಡವರು. ನ್ಯಾಯ, ವ್ಯಾಕರಣ, ಮೀಮಾಂಸಾ, ಧರ್ಮಶಾಸ್ತ್ರ ವೇದಾಂತಗ್ರಂಥಗಳಲ್ಲಿ ಮಹಾಪಂಡಿತರು. ಇವರು ೪ ಪರ್ಯಾಯ ಮಹೋತ್ಸವನ್ನು ನೆರವೇರಿಸಿ 'ಯದುಕುಲ ಚಕ್ರವರ್ತಿ' ಬಿರುದಿಗೆ ಪಾತ್ರರಾಗಿದ್ದರು. ಶ್ರೀ ವಾದಿರಾಜ ಶ್ರೀ ಮಚ್ಚರಣರು ತೀರ್ಥಪ್ರಬಂಧಗಳಲ್ಲಿ ವರ್ಣಿಸಿರುವ ಬದರಿಕಾಶ್ರಮಾದಿ ಸಕಲ ತೀರ್ಥಕ್ಷೇತ್ರಗಳಲ್ಲಿ ಸ್ನಾನ ದರ್ಶನ ಸೇವಾದಿಗಳನ್ನು ಮಾಡಿ ಭಗವದನುಗ್ರಹಕ್ಕೆ ವಿಶೇಷತಃ ಪಾತ್ರರಾದವರು. ಆಗ ಅಲ್ಲಲ್ಲಿ ತತ್ವೋಪದೇಶಾದಿಗಳನ್ನು ಮಾಡುತ್ತಾ ಪಂಡಿತರಿಂದ ಬಹುಮಾನವನ್ನು ಪಡೆದಿದ್ದು ಮಾತ್ರವಲ್ಲದೆ ಕೊಚ್ಚಿರಾಜನಿಂದ ವಿಶೇಷವಾಗಿ ಸನ್ಮಾನವನ್ನು ಹೊಂದಿರುವರು.

ಕೇರಳದ ಏಟಮಾನೂರು ಎಂಬ ಗ್ರಾಮದಲ್ಲಿ ದೊಡ್ಡ ಜಮೀನದಾರನೊಬ್ಬನು ಶ್ರೀಗಳವರ ಮನಸ್ಸಿಗೆ ಖೇದವನ್ನುಂಟು ಮಾಡಿದುದರಿಂದ ಬುದ್ಧಿಭ್ರಮಣಕ್ಕೊಳಗಾದನು. ಹೀಗೆಯೇ ಉಡುಪಿ ಮೊದಲಾದ ಕಡೆಗಳಲ್ಲಿಯೂ ಶ್ರೀಗಳವರ ಆಗ್ರಹಕ್ಕೆ ಪಾತ್ರರಾಗಿ ಮಹಾನರ್ಥವನ್ನು ಹೊಂದಿರುವದು ಅನೇಕ ಉದಾಹರಣೆಗಳಿವೆ.

ಮಹಾರಾಷ್ಟ್ರದ ಕರ್ಹಾಡದಲ್ಲಿ ಕೃಷ್ಣಾ ನದೀಸ್ನಾನಕ್ಕೆ ಹೋದ ಸಂದರ್ಭದಲ್ಲಿ ಒಬ್ಬ ಮಹಿಳೆಯು ಸರ್ಪಕಚ್ಚಿ ಮೃತಳಾಗಿ ಬಿದ್ದಿದ್ದಳು. ಆಕೆಯನ್ನು ಚಿತೆಯಲ್ಲಿಟ್ಟು ದಹನಕ್ಕಾಗಿ ಸಿದ್ಧತೆ ಮಾಡುತ್ತಿರುವ ಪುತ್ರಾದಿಗಳ ಗೋಳನ್ನು ಕೇಳಿ ದಯಾಳುಗಳಾದ ಶ್ರೀ ಪಾದಂಗಳವರು ತಮ್ಮ ತಪಶ್ಶಕ್ತಿಯಿಂದ ಒಂದೂವರೆ ಘಂಟೆ ಸಮಯದಲ್ಲಿ ಆಕೆಗೆ ಪುನಃ ಜೀವತರಿಸಿದರು. ಹೀಗೆಯೇ ಬಹುಮಂದಿ ಶ್ರೀ ಪಾದಂಗಳವರ ಅನುಗ್ರಹದಿಂದ ಉದ್ಧೃತರಾಗಿರುವರು. ಅನೇಕ ದರಿದ್ರರು, ಸಂಪನ್ನರೂ, ಅಜ್ಞಾನಿಗಳು ಜ್ಞಾನಿಗಳೂ ಆಗಿರುವರು. ವಿಶೇಷತಃ ಶಾಪಾನುಗ್ರಹಶಕ್ತರಾಗಿದ್ದರು. ಶ್ರೀ ಪಾದಂಗಳವರ ಜಪ ತರ್ಪಣಗಳ ತೀರ್ಥವನ್ನು ಸ್ವೀಕರಿಸಿ ಅನೇಕರು ಭೂತ, ಪ್ರೇತ, ಪಿಶಾಚಾದಿಗಳ ಬಾಧೆಗಳಿಂದ ನಿವೃತ್ತರಾಗಿರುವರು. ಎಷ್ಟೋ ಮಂದಿ ಶ್ರೀಗಳವರ ಅನುಗ್ರಹ ಪೂರ್ವಕ ಮಂತ್ರಾಕ್ಷತೆಯಿಂದ ತಮ್ಮ ದಾರಿದ್ರ್ಯವನ್ನು ಪರಿಹರಿಸಿಕೊಂಡಿರುವರು. ಇದಲ್ಲದೆ ಅನೇಕರು ಸಂತಾನಪ್ರಾಪ್ತಿಗಾಗಿ ಶ್ರೀಕೃಷ್ಣ ಸ್ಮರಣೆಯ ಅಥವಾ ಸಂತಾನಗೋಪಾಲಕೃಷ್ಣ ಮಂತ್ರದ ಉಪದೇಶವನ್ನು ಹೊಂದಿ ಫಲಮಂತ್ರಾಕ್ಷತೆಗಳನ್ನು ಸ್ವೀಕರಿಸಿ ಸತ್ಪುತ್ರರನ್ನು ಹೊಂದಿರುವರು. ಹೀಗೆ ಭಗವದ್ಭಕ್ತರ ತಾಪತ್ರಯವನ್ನು ನಿವಾರಿಸುವುದರಲ್ಲಿ ಕಾಮಧೇನು ಕಲ್ಪವೃಕ್ಷಗಳಂತಿರುವ ಪರಮ ಪೂಜ್ಯರಾದ ಗುರುಗಳನ್ನು ಸ್ಮರಿಸಿದರೆ ಸಕಲದುರಿತ ಪರಿಹಾರವಾಗಿ ಸಮಸ್ತ ಅಭೀಷ್ಟಗಳೂ ಸಿದ್ಧಿಸುವವು ಎಂಬುದರಲ್ಲಿ ಸಂದೇಹವಿಲ್ಲ.

ಇವರ ಪಟ್ಟದ ದೇವರು ಶ್ರೀ ಲಕ್ಷ್ಮೀನರಸಿಂಹದೇವರು. ಇವರು ಹೆಚ್ಚಾಗಿ ಶ್ರೀ ನರಸಿಂಹಾವತಾರ ಕಾಲ (ಸಾಯಂಕಾಲ) ದಲ್ಲಿಯೇ ದೇವರನ್ನು ಪೂಜಿಸುತ್ತಿದ್ದರು. ಕಾಲಾತೀತವಾಗಿ ಪೂಜಿಸಿದೆವೆಂದು ಪಶ್ಚಾತ್ತಾಪ ಪಡುತ್ತಿರಲು ವಿದ್ಯಾಗುರುಗಳು ಆ ನರಸಿಂಹದೇವರ ಪ್ರಸನ್ನಕಾಲವು ಮಹಾಫಲವುಳ್ಳದ್ದೆಂದು ಇವರನ್ನು ಸಮಾಧಾನ ಪಡಿಸುತ್ತಿದ್ದರು. ಒಮ್ಮೆ ಶ್ರೀಗಳವರು ಸಂಚಾರತ್ವೇನ ಗೋದಾವರಿ ನದಿಯನ್ನು ಸಮೀಪಿಸಿದರು. ಅಲ್ಲಿ ಸ್ನಾನಾದಿಗಳನ್ನು ಮಾಡುತ್ತಿದ್ದರು. ಆಗ ಪರ್ಯಾಯಕಾಲ ಸಮೀಪಿಸಿತು. ಕಾಶೀಯಾತ್ರೆ ಗಂಗಾ ಸ್ನಾನ ಆಗಲಿಲ್ಲ ಎಂದು ಪರಿತಪಿಸುತ್ತಿರಲು ರಾತ್ರೆಕಂಡ ಸ್ವಪ್ನದ ಸೂಚನೆಯಂತೆ, ಮರುದಿನ ಬೆಳಿಗ್ಗೆ ಗೋದಾವರಿ ನದಿಯಲ್ಲಿ ಸ್ನಾನ ಮಾಡಿ ತರ್ಪಣ ಮಾಡುತ್ತಿರುವ ಕಾಲದಲ್ಲಿ ಭಾಗೀರಥಿ ಸಾಲಿಗ್ರಾಮವು ಹಸ್ತಕಮಲದಲ್ಲಿ ಬಂದು ಸೇರಿತು. ಆಗ ಭಾಗೀರಥಿ ಸ್ನಾನಕ್ಕಿಂತಲೂ ಅತಿಶಯ ಸಂತುಷ್ಟರಾಗಿ ಉಡುಪಿಗೆ ಹೊರಟರು.

ಆ ಸಮಯದಲ್ಲಿಯೇ ಪೂನಾ ಪ್ರದೇಶವನ್ನಾಳುತ್ತಿದ್ದ ರಾಜನ ಪತ್ನಿಯು ತನಗೆ ಸ್ವಪ್ನ ಸೂಚನೆಯಂತೆ ತನ್ನಲ್ಲಿದ್ದ ಗೋಮೆಧಕರಡಿಗೆಯನ್ನು ಶ್ರೀ ಪಾದಂಗಳವರಿಗೆ ಬಹುಭಕ್ತಿಯಿಂದ ಸಮರ್ಪಿಸಿದಳು. ಆ ಕರಡಿಗೆಯಲ್ಲಿಯೇ ಇಟ್ಟಿರುವ ಭಾಗೀರಥಿ ಸಾಲಿಗ್ರಾಮವನ್ನು ಈಗಲೂ ಮಹಾಭಕ್ತಿಯಿಂದ ಮಠದಲ್ಲಿ ಪೂಜಿಸುತ್ತಿರುವರು. ದೇವಾಂಶ ಸಂಭೂತರಾದ ಇವರು ವಾದಿರಾಜರ ಅಂತರಂಗದ ಭಕ್ತರು, ಋಜುತ್ವವಾದಿಗಳಾಗಿದ್ದರು.

ಇವರಲ್ಲಿ ಶ್ರೀ ಭಂಡಾರಕೇರಿ ಮಠದ ಶ್ರೀ ವಿದ್ಯಾಮಾನ್ಯತೀರ್ಥರು ಅಷ್ಟಮಹಾಮಂತ್ರಗಳ ಉಪದೇಶ ಪಡೆದಿರುತ್ತಾರೆ. ಶ್ರೀ ಅದಮಾರು ಮಠಾಧೀಶರಾದ ಶ್ರೀ ವಿಭುದೇಶತೀರ್ಥ ಶ್ರೀ ಪಾದಂಗಳವರಿಗೂ ತಮ್ಮ ಶಿಷ್ಯರಾದ ಶ್ರೀ ವಿದ್ಯಾವಾರಿನಿಧಿ ಶ್ರೀ ಪಾದಂಗಳವರಿಗೂ ಹಾಗೂ ಸೋದೆಮಠದ ಶ್ರೀ ವಿಶ್ವೋತ್ತಮತೀರ್ಥರಿಗೂ ಶಾಂತಿಪಾಠಪೂರ್ವಕ ನ್ಯಾಯಸುಧಾಗ್ರಂಥವನ್ನು ಪಾಠಹೇಳಿರುವರು.

**ಪಾಠದ ವೈಶಿಷ್ಟ್ಯ :** ಶ್ರೀ ವಿದ್ಯಾಸಮುದ್ರತೀರ್ಥರು ಏಕಸಂಧಿಗ್ರಾಹಿಗಳು. ಕುಶಾಗ್ರಮತಿಗಳು, ಸಮಕಾಲೀನ ವಿದ್ವಚ್ಚಕ್ರವರ್ತಿಗಳಾದರೂ ಅನುಷ್ಠಾನ ಪರರು "ಶಾಸ್ತ್ರಗ್ರಂಥಪಾಠಗಳು ತತ್ತ್ವೋಪದೇಶ ರೂಪದಲ್ಲಿರಬೇಕು. ಲೌಕಿಕ ವಿದ್ಯೆಯ ಪಾಠಗಳಂತೆ ಪ್ರಚಾರ ಪ್ರಿಯವಾಗಬೇಕಿಲ್ಲ. ಅನುಗ್ರಹ ಪೂರ್ವಕವಾಗಿ ಗುರುಗಳು ಒಮ್ಮೆ ಮಾಡಿದ ಉಪದೇಶವೇ ಶಿಷ್ಯರಿಗೆ ತತ್ತದ್ಯೋಗ್ಯತಾನುಸಾರ ರಹಸ್ಯಾರ್ಥ ಬೋಧಕವಾಗಬೇಕು. ವಿದ್ಯೆಯ ಸಿದ್ಧಿಯನ್ನು ಶಿಷ್ಯರ ವ್ಯಕ್ತಿತ್ವದಲ್ಲಿ ಕಾಣಬೇಕು. ಶ್ರೀ ಮದಾಚಾರ್ಯರು ಹಾಗೂ ದೇವರು ಪ್ರೀತರಾಗುವಂತೆ ಸಂನ್ಯಾಸಧರ್ಮ ಪರಿಪಾಲನೆಯಲ್ಲಿ ಸಾರ್ಥಕಗೊಳ್ಳಬೇಕು" ಇತ್ಯಾದಿ ಉನ್ನತ ಆದರ್ಶಗಳನ್ನು ಹೊಂದಿದವರು.

ಲೋಕೇಷಣ ಆಡಂಬರಗಳಿಂದ ದೂರವಿದ್ದ ಶ್ರೀ ವಿದ್ಯಾಸಮುದ್ರರ ವ್ಯಕ್ತಿತ್ವವು; ಸ್ವಭಾವತ; ಶಾಂತರೂ ದಾಂತರೂ ಏಕಾಂತಪ್ರಿಯರೂ ಆದ ಶ್ರೀ ವಿಶ್ವೋತ್ತಮತೀರ್ಥರಿಗೆ ಸ್ಫೂರ್ತಿನೀಡಿತು. ಅಂತೆಯೇ ಅವರು ವಿದ್ಯಾಗುರುಗಳಿಗೆ ತಕ್ಕ ಶಿಷ್ಯರಾದರು ಜಗತ್ತಿನಿಂದ ದೂರವಿದ್ದು ಜಗನ್ನಾಥನಿಗೆ ಹತ್ತಿರವಾದರು. ಅವರ ವಿದ್ಯೆಯು ಮೌನ, ಪಾರಾಯಣ, ಮನನ, ಅನುಸಂಧಾನ, ಧ್ಯಾನಗಳ ಪಥವನ್ನು ಹಿಡಿಯಿತು. ಅವರು ಸತತ ಶಾಸ್ತ್ರಾವಮರ್ಶನವನ್ನು ತಮ್ಮ ಜೀವನವ್ರತವನ್ನಾಗಿ ಸ್ವೀಕರಿಸಿದರು. ಅವರು ಸೋದೆಯಲ್ಲಿಯೇ ಇರಲಿ, ಉಡುಪಿಗೇ ಬರಲಿ, ಸಂಚಾರದಲ್ಲೇ

ಇರಲಿ, ರಾಜರ ಆರಾಧನೆ – ಸಪ್ತೋತ್ಸವಗಳಂತಹ ಜನನಿಬಿಡ ಕಾರ್ಯಕ್ರಮಗಳೇ ಇರಲಿ, ತಪ್ಪದೇ ಪ್ರತಿದಿನ ತೀರ್ಥ ಪ್ರಾಶನದ ಅನಂತರ ಎರಡು ಗಂಟೆಗಳಕಾಲ ಸೂತ್ರಭಾಷ್ಯಾದಿ ಪಾರಾಯಣ ಮಾಡುತ್ತಿದ್ದರು. ಶ್ರೀಗಳವರು ಮಧ್ಯಾಹ್ನ ೩–೪ ಘಂಟೆಗಳ ಸಮಯವನ್ನು ಗ್ರಂಥಾವಲೋಕನಕ್ಕೆ ಮೀಸಲಿಡುತ್ತಿದ್ದರು.

ಶ್ರೀ ವಿದ್ಯಾಸಮುದ್ರತೀರ್ಥರಲ್ಲಿ ಪ್ರಸ್ಥಾನತ್ರಯಭಾಷ್ಯಗಳು, ವ್ಯಾಸತ್ರಯ, ತತ್ವಪ್ರಕಾಶಿಕಾ, ಯುಕ್ತಿಮಲ್ಲಿಕಾದಿ, ಶ್ರೀ ಮನ್ಯಾಯ ಸುಧಾಂತಶಾಸ್ತ್ರದ ಅಧ್ಯಯನ ನೆರವೇರಿತು.

ಪಾಠ, ಪ್ರವಚನ ವೈಭವ, ಲೇಖನ, ಪ್ರಕಾಶನಗಳೇ ವಿದ್ಯೆಯ ಮಾನದಂಡವೆಂದು ಪರಿಗಣಿಸುವ ಇಂದಿನ ಬಹುಮಂದಿಗೆ ಸೋದೆ ಶ್ರೀಗಳವರ ವಿದ್ವತ್ತಿನ ನೈಜ ಪರಿಚಯವಾಗಲೇ ಇಲ್ಲ. "ಮೂಕಬದಿರರಂತಿಪ್ಪರೋ ನೋಳ್ಪ ಜನಕೆ" ಎಂಬಂತೆ ಗುಪ್ತಸಾಧಕರಾಗಿದ್ದುದು ಅವರ ವೈಶಿಷ್ಟ್ಯವೆಂಬುದನ್ನು ಗುರುತಿಸಬಹುದಾಗಿದೆ.

**ವ್ಯಾಕರಣ ಕೋಶಗ್ರಂಥಗಳ ಕುರಿತು ಅಪಾರ ಆಸಕ್ತಿ :**

ಶ್ರೀ ವಿಶ್ವೋತ್ತಮತೀರ್ಥ ಶ್ರೀಗಳವರಿಗೆ ವೇದಾಂತ – ಮೀಮಾಂಸಾದಿ ಗ್ರಂಥಗಳಲ್ಲಿ ಹೇಗೋ ಹಾಗೆ ವ್ಯಾಕರಣದಲ್ಲಿಯೂ ಅಪಾರ ಪಾಂಡಿತ್ಯವಿತ್ತು. ಅವರು ಉಚ್ಚರಿಸುವ ಶ್ಲೋಕದಲ್ಲಿಯಾಗಲೀ ಅಥವಾ ಪದಗಳಲ್ಲಿಯಾಗಲೀ ಸ್ಪಷ್ಟತೆಯೊಂದಿಗೆ ಉಚ್ಚಾರಣ ಶುದ್ಧತೆಯಿತ್ತು. ತಾನು ಹೇಳುವ ವಿಷಯದ ಬಗ್ಗೆ ಮೊದಲೇ ಸಾಕಷ್ಟು ಯೋಚನೆ, ಅರ್ಥಚಿಂತನೆ ನಡೆದಿದ್ದರೆ ಮಾತ್ರ ಉಚ್ಚಾರಣ ಶುದ್ಧಿಸ್ಪಷ್ಟತೆ ಬರಲು ಸಾಧ್ಯ. ಆ ಕಲೆ ಶ್ರೀಗಳವರಿಗೆ ಕರಗತವಾಗಿತ್ತು. ಶ್ರೀ ಗುರುರಾಜ ಮಹಾಮಂತ್ರದ ಧ್ಯಾನಶ್ಲೋಕದ 'ಗುರುಮಖಿಲಗುಣಜ್ಞಂ' ಎನ್ನುವ ಶ್ಲೋಕದ ಉತ್ತರಾರ್ಧವನ್ನು ಶ್ರೀಗಳವರು ಅತ್ಯಂತ ಸ್ಪಷ್ಟ ಉಚ್ಚಾರಣೆಯೊಂದಿಗೆ, ಶುದ್ಧವಾಗಿ ಉಚ್ಚರಿಸುತ್ತಿರುವುದನ್ನು ಅನೇಕರು ಗಮನಿಸಿದ್ದಾರೆ. ಅರ್ಥ ತಿಳಿದಿದ್ದರೆ ಅದಕ್ಕೆ ಸರಿಯಾದ ಪದ ನಿಷ್ಪತ್ತಿ ಗೊತ್ತಿದ್ದವರು ಮಾತ್ರ ಅನಾಯಾಸವಾಗಿ ಉಚ್ಚರಿಸಬಹುದಾಗಿದೆ. ಶ್ರೀ ಗುರುರಾಜರ ಕೃತಿಗಳಲ್ಲಿ ಬರುವ ಪದಗಳ ಬಗ್ಗೆಯೂ ಶ್ರೀಗಳವರು ಅರ್ಥ ಚಿಂತನೆಯನ್ನು ನಡೆಸಿದ್ದರು. ಶ್ರೀಗಳವರಿಗೆ ವ್ಯಾಕರಣ ಸೂತ್ರಗಳ ಬಗ್ಗೆಯೂ ಅಪಾರವಾದ ಜ್ಞಾನವಿತ್ತು. ಕೊನೆಯವರೆಗೂ ಅವರಿಗೆ ಸೂತ್ರಗಳ ಬಗ್ಗೆ ಸ್ಪಷ್ಟ ಅರಿವಿತ್ತು. ನಿಖರವಾದ ಜ್ಞಾನವೂ ಇತ್ತು. ಸಂಸ್ಕೃತದ ಸ್ವಾರಸ್ಯದ ಬಗ್ಗೆಯೂ ಶ್ರೀಗಳವರು ಬೆಳಕು ಚೆಲ್ಲುತ್ತಿದ್ದರು.

ಕೋಶಗ್ರಂಥಗಳ ಕುರಿತೂ ಶ್ರೀಗಳವರಿಗೆ ಅಪಾರವಾದ ಜ್ಞಾನವಿತ್ತು. ಅನೇಕ ಗ್ರಂಥಗಳ ಹೆಸರೂ ಅವರ ಮನಃ ಪಟಲದಲ್ಲಿ ಅಚ್ಚಳಿಯದೆ ನಿಂತಿದ್ದವು. ಪುಣೆಯ ಗ್ರಂಥಾಲಯದಲ್ಲಿ ಸಂಗ್ರಹಿತವಾದ ಕೋಶಗ್ರಂಥಗಳ ಪಟ್ಟಿಯನ್ನು ಶ್ರೀಗಳವರು ತರಿಸಿಕೊಂಡಿದ್ದರು.

**ಅಪೂರ್ವ ಹಸ್ತಪ್ರತಿಗಳ ಸಂಗ್ರಹ ಅವಲೋಕನ :**

ಶ್ರೀಗಳವರಿಗೆ ಹಸ್ತಪ್ರತಿಗಳನ್ನು ಸಂಗ್ರಹಿಸುವದು ಅತಿ ಪ್ರಿಯ ಹವ್ಯಾಸವಾಗಿತ್ತು. ಶ್ರೀಗಳ ಹಸ್ತಾಕ್ಷರವೂ ಬಹಳ ಸುಂದರವಾಗಿತ್ತು. ಅವರೇ ತುಳು ಲಿಪಿಯ ಹಸ್ತಪ್ರತಿಗಳನ್ನು ಸಂಸ್ಕೃತ ಭಾಷೆಯಲ್ಲಿ ಬರೆಯುತ್ತಿದ್ದರು. ಶ್ರೀ ವೆಂಕಟರಮಣ ಐತಾಳರು ಹಾಗೂ ದಿ॥ ರಾಮರಾಯರು ಶ್ರೀಗಳವರ ಈ ಕೆಲಸದಲ್ಲಿ ಬಹಳಷ್ಟು ಸಹಾಯ ಮಾಡಿದ ಮಹನೀಯರು. ಪಂಜಿಮಾರಿನಲ್ಲಿ

ವಾಸ ಮಾಡಿಕೊಂಡಿರುವಾಗ ಮಧ್ಯಾಹ್ನ ೧ ಘಂಟೆಯಿಂದ ೪-೩೦ರ ವರೆಗೆ ಮಠದವರು ಮಲಗಿದ್ದರೆ ಶ್ರೀಗಳವರು ಒಬ್ಬರೇ ಹಸ್ತಪ್ರತಿಗಳನ್ನು ಅವಲೋಕಿಸುತ್ತಿದ್ದರು. ಅವುಗಳ ಅವಲೋಕನ ಶ್ರೀಗಳವರಿಗೆ ಅತ್ಯಂತ ಇಷ್ಟವಾಗಿತ್ತು. ಕೊನೆಯ ವರೆಗೂ ಶ್ರೀಗಳವರಿಗೆ ಎಲ್ಲಾ ವಿಷಯಗಳಲ್ಲಿ ಕೃಷ್ಟಿಯಿತ್ತು. ಅನೇಕಾನೇಕ ಪ್ರಾಚ್ಯ ವಿಶ್ವವಿದ್ಯಾನಿಲಯಗಳ ಹೆಸರು ಅವರಿಗೆ ಗೊತ್ತಿತ್ತು. ಕಾಶ್ಮೀರದ ಹಜರತ್ ಬಾಲನಲ್ಲಿರುವ ಸೇನಾಪಡೆಗೆ ಸಂಬಂಧಿಸಿದ ಲೈಬ್ರರಿಯ ಬಗ್ಗೆಯೂ ಶ್ರೀಗಳವರು ಮಾಹಿತಿ ಪಡೆದಿದ್ದರು. ಯಾರಾದರೂ ಹಸ್ತಪ್ರತಿಗಳ ಅವಲೋಕನದಲ್ಲಿ ಕೃಷಿ ಮಾಡಿದ ವಿದ್ವಾಂಸರು ಭೇಟಿಯಾದಾಗ ಅವರ ಪ್ರಯತ್ನಕ್ಕೆ ಬಹಳ ಉತ್ತೇಜನ ನೀಡುವುದಷ್ಟೆ ಅಲ್ಲ; ಅವರಿಗೆ ಬೇಕಾದ ಅಪೂರ್ವ ಮಾಹಿತಿಯನ್ನೂ ಒದಗಿಸುತ್ತಿದ್ದರು. ನಂದಿ ನಾಗರಿಲಿಪಿಯಲ್ಲಿ ಲಿಖಿತವಾದ ಹಸ್ತಪ್ರತಿಗಳನ್ನು ಶ್ರೀಗಳವರು ಅನಾಯಾಸವಾಗಿ ಓದಬಲ್ಲವರಾಗಿದ್ದರು. ಶ್ರೀಗಳವರಲ್ಲಿ ಪ್ರಾಚೀನ ಗ್ರಂಥಗಳ ಸಂಗ್ರಹವು ಸಾವಿರಾರು ಇತ್ತು. ಪ್ರಾಚೀನ ಗ್ರಂಥಗಳ ಸಂಗ್ರಹ, ಸಂರಕ್ಷಣೆಯಲ್ಲಿ ತೊಡಗಿದ್ದ ಶ್ರೀಗಳವರು, ಶ್ರೀ ವಿಜಯೀಂದ್ರತೀರ್ಥ ಶ್ರೀ ಪಾದಂಗಳವರು ರಚಿಸಿ ಉಡುಪಿಕೃಷ್ಣ ದೇವರಿಗೆ ಸಮರ್ಪಿಸಿದ ನಾಲ್ಕಾರು ಅನುಪಲಬ್ಧ ಗ್ರಂಥಗಳನ್ನು ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರದ ಶ್ರೀ ರಾಜಾ ಎಸ್, ಗುರುರಾಜಾಚಾರ್ಯರಿಗೆ ನೀಡಿ ಅವುಗಳ ಪ್ರಕಾಶನಕ್ಕೆ ಕಾರಣರಾಗಿದ್ದರು. ಆಚಾರ್ಯ ಸಾಣೂರು ಭೀಮಭಟ್ಟರು ಹಾಗೂ ಅವರ ಪುತ್ರ ಕೃಷ್ಣ ಮೂರ್ತಿಯವರಿಗೆ ಅನೇಕ ಪ್ರಾಚೀನ ಅಪ್ರಕಟಿತ ತಾಳೆಗ್ರಂಥಗಳನ್ನು ಪರಿಶೀಲಿಸಲು, ಸಂಪಾದಿಸಿ ಪ್ರಕಟಿಸಲು ಅವಕಾಶ-ಸೌಲಭ್ಯಗಳನ್ನು ಕಲ್ಪಿಸಿದ್ದಾರೆ. ಸಂಶೋಧಕರಾದ ಶ್ರೀ ಎ.ಆರ್. ಪಂಚಮುಖಿ ಅವರು ತಮ್ಮ ಒಂದು ಬರಹದಲ್ಲಿ ಶ್ರೀಗಳವರನ್ನು ಪ್ರಶಂಸಿಸಿದ್ದಾರೆ. ಹೀಗೆ ಅವರಿಂದ ಉಪಕೃತರಾದವರು ಅನೇಕರು. ಶ್ರೀಗಳವರ ನಿರಂತರ ಸಂಶೋಧನೆಯ ಫಲವಾಗಿ 'ತವ್ಯಸ್ತೋತ್ರ', 'ಪಂಚಭೇದಸ್ತುತಿ', 'ಪದ್ಯ ಪಂಚಕ' ಹಾಗೂ 'ಶ್ರೀ ಮನ್ಮಧ್ವವಿಲಾಸ' ಕೃತಿಗಳು ಬೆಳಕು ಕಾಣಲು ಕಾರಣೀಭೂತರಾಗಿದ್ದಾರೆ. ಸಂಸ್ಥೆ ಮಾಡುವ ಕಾರ್ಯವೊಂದನ್ನು ವ್ಯಕ್ತಿಯಾಗಿ ಮಾಡಿ ಪ್ರಾಚೀನ ಕೃತಿಗಳನ್ನು ಇಂದಿನ ಜಗತ್ತಿಗೆ ನೀಡಿದ ಕೆಲವೇ ಕೆಲವು ಮಹನೀಯರಲ್ಲಿ ಶ್ರೀ ಶ್ರೀ ವಿಶ್ವೋತ್ತಮತೀರ್ಥರು ಅಗ್ರಗಣ್ಯರು.

ಶ್ರೀ ವಿಶ್ವೋತ್ತಮತೀರ್ಥರು ಸೋದೆ ಪಂಜೆಮಾರು ಮಠಗಳ ಒಳಕೋಣೆಗಳಲ್ಲಿ ಒಬ್ಬರೇ ಕುಳಿತು ನೂರಾರು ಅಪೂರ್ವ ಶಾಸ್ತ್ರಗ್ರಂಥಗಳನ್ನು ಅವಲೋಕಿಸುತ್ತಿದ್ದರು. ಬ್ರಹ್ಮಸೂತ್ರ ಭಾಷ್ಯ, ಶ್ರೀ ಮದ್ಭಾಗವತ, ಉಪನಿಷದ್ಭಾಷ್ಯಗಳು, ಶ್ರೀ ಮದ್ಭಗದ್ಗೀತಾ, ಶ್ರೀರಾಜರ ಭಾವಪ್ರಕಾಶಿಕಾ ಸಹಿತ ಮಹಾಭಾರತ ತಾತ್ಪರ್ಯ ನಿರ್ಣಯ, ಯುಕ್ತಿ ಮಲ್ಲಿಕಾ, ಸರಸ ಭಾರತೀ ವಿಲಾಸ, ತೀರ್ಥಪ್ರಬಂಧ, ನ್ಯಾಯರತ್ನಾವಲೀ, ರುಕ್ಮಿಣೀಶ ವಿಜಯ. ಇತರ ಸರ್ವಮೂಲ ಟೀಕಾ ಟಿಪ್ಪಣಿಗಳು, ಲಕ್ಷ್ಮೀ ಸಂಹಿತೆ ಮೊದಲಾದ ವಿಶಿಷ್ಟ ಗ್ರಂಥಗಳನ್ನು ನೂರಾರು ಅಮೂಲ್ಯ ಸ್ತೋತ್ರಗಳು ಹಾಗೂ ಹರಿದಾಸರ ಪದಪದ್ಯ-ಸುಳಾದಿಗಳ ಪಂಕ್ತಿಗಳನ್ನು ಮುಖತಃ ಉಚ್ಚರಿಸುತ್ತಿದ್ದ ಶ್ರೀ ವಿಶ್ವೋತ್ತಮ ಶ್ರೀಗಳವರ ಅದ್ಭುತ ಧಾರಣಾ ಸಂಪನ್ನತೆ ಹಾಗೂ ವಿಶ್ಲೇಷಣಾ ಸಾಮರ್ಥ್ಯಗಳನ್ನು ಅವರ ನಿಕಟವರ್ತಿಗಳಾದ ಯತಿಗಳು ಮತ್ತು ವಿದ್ವಾಂಸರು ಮಾತ್ರ ಗುರುತಿಸಿ ಗೌರವಿಸಿದ್ದಾರೆ. ಸಭೆಗಳಲ್ಲಿ ಯತಿಗಳು, ವಿದ್ವಾಂಸರು ಪ್ರವಚನ ಮಾಡುವ ಸಂದರ್ಭಗಳಲ್ಲಿ ಉಲ್ಲೇಖಿಸಿದ ಎಲ್ಲ ಪ್ರಮಾಣೋಕ್ತಿಗಳನ್ನು ಸೋದೆಶ್ರೀಗಳವರು ಜೊತೆ ಜೊತೆಗೆ ಉಚ್ಚರಿಸುವುದನ್ನು ಎಲ್ಲರೂ ನೋಡಿ-ಕೇಳಿದ್ದಾರೆ.

**ಆಯುರ್ವೇದ ಔಷಧೋಪಚಾರ :** ಶ್ರೀಗಳವರು ಚರಕ ಸುಶ್ರುತ ಸಂಹಿತೆಗಳು, ಅಷ್ಟಾಂಗ ಹೃದಯಾದಿ ಆಯುರ್ವೇದ ಗ್ರಂಥಗಳು ಅವರಿಗೆ ಬಾಯಿಪಾಠವಾಗಿದ್ದವು. ಆ ಕಾರಣವಾಗಿ ಅನೇಕರ ಅಪರಿಹಾರ್ಯ ರೋಗಗಳಿಗೂ ಪರಿಹಾರ ಸೂಚಿಸಿ ಗುಣಪಡಿಸುತ್ತಿದ್ದರು. ವರ್ತಮಾನಪತ್ರಿಕೆಗಳಲ್ಲಿ ಬಂದ ಹೊಸ ಹೊಸ ಔಷಧ ಚಿಕಿತ್ಸೆ ತಿಳಿದು ರೋಗಿಗಳಿಗೆ ಪರಿಹಾರ ಸೂಚಿಸುತ್ತಿದ್ದರು.

**ಹರಿದಾಸರ ಬಗ್ಗೆ ಗೌರವ :** ಹರಿದಾಸರಲ್ಲಿ ವಿಶೇಷವಾಗಿ ಭಕ್ತಿ ಗೌರವವನ್ನು ಶ್ರೀಗಳವರು ಹೊಂದಿದ್ದರು. ಸಾಧಾರಣವಾಗಿ ಗೃಹಸ್ಥರಾದ ಹರಿದಾಸರನ್ನು ಸನ್ಯಾಸಿಗಳು ಗೌರವಿಸುವುದು ಕಡಿಮೆ. ದಾಸ ಚತುಷ್ಟಯರಾದ ಶ್ರೀ ಪುರಂದರದಾಸರು, ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು ಮತ್ತು ಜಗನ್ನಾಥದಾಸರಲ್ಲಿ ವಿಶೇಷ ಭಕ್ತಿ ಹೊಂದಿದ್ದರು. ಅವರು ದಾಸಕ್ಷೇತ್ರಗಳನ್ನು ಸಂದರ್ಶಿಸಿದ್ದರು. ಹರಿದಾಸರಿಗೆ ಪ್ರಿಯವಾದ ಕರ್ನಾಟಕ ಸಂಗೀತದ ರಾಗ ಲಕ್ಷಣಗಳಲ್ಲೂ ಶ್ರೀಗಳು ಅಪಾರಜ್ಞಾನ ಹೊಂದಿದ್ದರು. ಯಾರಾದರೂ ದಾಸರ ಕೃತಿಗಳನ್ನು ಹಾಡುತ್ತಿದ್ದರೆ ಗಮನವಿಟ್ಟು ಕೇಳುತ್ತಾ ರಾಗಗಳನ್ನು ಗುರುತಿಸುತ್ತಿದ್ದರು ಹಾಗೂ ರಸ ಸ್ವಾದಿಸಿ ಆನಂದಿತರಾಗುತ್ತಿದ್ದರು.

ಈಗ ಹತ್ತು ವರ್ಷಗಳ ಹಿಂದೆ, ಶ್ರೀಗಳವರು ಗುರುವಂದನಾ ಕಾರ್ಯಕ್ರಮ ಸಂದರ್ಭದಲ್ಲಿ, ಬೆಂಗಳೂರಿನ ನೆಟ್ಟಕಲ್ಲಪ್ಪವೃತ್ತದ ವಾದಿರಾಜ ಮಂದಿರದಲ್ಲಿ ಶ್ರೀ ವಿಶ್ವೋತ್ತಮತೀರ್ಥರ ಸಮ್ಮುಖದಲ್ಲಿ ಲಕ್ಷ್ಮೀಶೋಭಾನೆ ಕುರಿತು ವಿದ್ವಾಂಸರೊಬ್ಬರ ಉಪನ್ಯಾಸ ನಡೆದಿತ್ತು. ವಿದ್ವತ್ಪೂರ್ಣ ಸಭೆ ನಡೆಯುತ್ತಿರುವಾಗಲೂ, ಸಭಿಕರು ಮಧ್ಯೆ ಮಧ್ಯೆ ಎದ್ದು ಹೋಗುವುದು ಗುಸುಗುಸು ಮಾತನಾಡುವುದು ನಡೆದೇ ಇತ್ತು.

ಲಕ್ಷ್ಮೀಶೋಭಾನೆ ಶ್ರೀ ವಾದಿರಾಜರ ಜಾನಪದ ಧಾಟಿಯ ಹರಿಭಕ್ತಿಸಾರ. ಇದು ಉಳಿದ ಕೃತಿಗಳಂತೆ ಪ್ರಮೇಯಾತ್ಮಕ ಪ್ರಬಂಧವಲ್ಲ ಸುಖಬೋಧ ಕಥೆಯೆಂದೇ ವರ್ಣಿಸಬೇಕಾದ ಕಾವ್ಯ. ಅರ್ಥದ ಹರವು ಮತ್ತು ಭಾವದ ಬೆಡಗನ್ನು ಹೃದ್ಯವಾಗಿ ವರ್ಣಿಸಿದಾಗ ಮಾತ್ರ ವಾದಿರಾಜರ ಭಾವ ಮತ್ತು ನಿರೂಪಣಾ ಶೈಲಿ ತಿಳಿಯುತ್ತದೆ. ಸೂಕ್ಷ್ಮಗ್ರಾಹಿ ಮತಿವಂತರಾದ ಶ್ರೀ ವಿಶ್ವೋತ್ತಮರು ಮಿತಭಾಷಿಗಳು ಶ್ರೋತೃಗಳಿಗೆ ಮೂಲಕಾವ್ಯ ಅರ್ಥ ಆಗದಿರುವುದನ್ನು ಗಮನಿಸಿದರೆಂದು ಕಾಣುತ್ತದೆ. ಪ್ರವಚನ ಇನ್ನೇನು ಮುಗಿಯಲಿದೆ ಎನ್ನುವಾಗ ಮಧ್ಯೆ ಪ್ರವೇಶಿಸಿ ಸುಮಾರು ಒಂದು ಘಂಟೆಕಾಲ ಇಡೀ ಲಕ್ಷ್ಮೀಶೋಭಾನೆಯನ್ನು ನಿರರ್ಗಳವಾಗಿ ಹಾಡಿ, ಪದದ ಅರ್ಥ, ಕಾವ್ಯದ ಮೂಲ ಉದ್ದೇಶ, ಲಯ, ಗತಿ ಛಂದಸ್ಸನ್ನು ವಿವರಿಸಿದರು.

ವ್ಯಾಸ-ದಾಸ ಸಾಹಿತ್ಯದಲ್ಲಿ ಎರಡರಲ್ಲೂ ಶ್ರೀ ವಿಶ್ವೋತ್ತಮರಿಗಿದ್ದ ಪ್ರೌಢಿಮೆಗೆ ಇದೊಂದು ನಿದರ್ಶನ.

ಈಗ ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಆಗ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಪ್ರಮೋದತೀರ್ಥರು ಸೋದೆಯಲ್ಲಿ ಚಾತುರ್ಮಾಸ ಕುಳಿತಿದ್ದರು. ಅವರು ಪ್ರತಿದಿನ ಮಧ್ಯಾಹ್ನ ಶ್ರೀ ವಾದಿರಾಜರ ವೃಂದಾವನದ ಎದುರಿಗೆ ತಮ್ಮ ಶಿಷ್ಯರಿಗೆ ಯುಕ್ತಿಮಲ್ಲಿಕಾ ಗ್ರಂಥದ ಪಾಠಹೇಳುತ್ತಿದ್ದರು. ಆಗ ಶ್ರೀ ವಿಶ್ವೋತ್ತಮತೀರ್ಥರು "ಯುಕ್ತಿಮಲ್ಲಿಕಾ" ಗ್ರಂಥದ ಮೇಲಿನ ಭಕ್ತಿಯಿಂದ, ಹಾಗೂ ಶ್ರೀ ಸತ್ಯಪ್ರಮೋದರ ಮೇಲಿನ ಗೌರವದಿಂದ ಅಲ್ಲಿಗೆ ಬಂದು

ಕುಳಿತುಕೊಳ್ಳುತ್ತಿದ್ದರು. ಶ್ರೀ ಸತ್ಯಪ್ರಮೋದತೀರ್ಥರು ಗ್ರಂಥದಲ್ಲಿಯ ಕ್ಲಿಷ್ಟ ಭಾಗಗಳನ್ನು ಶ್ರೀ ವಿಶ್ವೋತ್ತಮತೀರ್ಥರಿಂದ ಕೇಳಿ ವಿವರಣೆ ಪಡೆಯುತ್ತಿದ್ದರು. ಶ್ರೀ ವಿಶ್ವೋತ್ತಮತೀರ್ಥರಿಗೆ ಯುಕ್ತಿಮಲ್ಲಿಕಾ ಗ್ರಂಥದ ಬಗ್ಗೆ ಇರುವ ತಲಾಸ್ಪರ್ಶಿ ಜ್ಞಾನ ತಿಳಿದು ಸಂತೋಷದಿಂದ ಆಲಿಂಗನ ಮಾಡಿಕೊಂಡರು.

**ವ್ಯಕ್ತಿತ್ವ :** ಅಜಾನುಬಾಹು, ಸೌಷ್ಠವದೇಹ, ಬಂಗಾರದ ಮೈಬಣ್ಣ ದುಂಡಾದ ಸುಕ್ಕಿಲ್ಲದ ಸುಂದರ ಮುಖ, ನೀಳವಾದ ಸಂಪಿಗೆಯಂತಹ ಮೂಗು ಬಿಲ್ಲಿನಂತಹ ಹುಬ್ಬುಗಳು, ಹೊಳೆಯುವ ಕಾಂತಿಯುಕ್ತ ವಿಶಾಲ ಕಣ್ಣುಗಳು, ಹಸನಾದ ಹಾಳೆಯಂತಹ ಕಿವಿಗಳು, ತೊಂಡೆಹಣ್ಣಿನಂತಹ ಕೆಂದುಟಿಯು, ಇಂತಹ ಸ್ವರ್ಣವರ್ಣದ ಸುಂದರಶರೀರವುಳ್ಳ ಇವರು ಶ್ರೀ ವಾದಿರಾಜಗುರುಗಳ ನೆನಪನ್ನು ಮೂಡಿಸುತ್ತಿದುದರಿಂದ ಇವರಲ್ಲಿ ಭಕ್ತರು ನಡೆದಾಡುವ "ಶ್ರೀ ವಾದಿರಾಜ"ರೆಂದೇ ಭಾವನೆ ಹುಟ್ಟಿಸುತ್ತಿದ್ದರು. ಮುಖದಲ್ಲಿ ಸದಾ ಮಂದಹಾಸ ಇವರನ್ನು ದರ್ಶನ ಪಡೆದವರಿಗೆ ಇವರೊಬ್ಬ ಮಹಾಪುರುಷರು ಎಂಬುದು ಮನದಟ್ಟಾಗುತ್ತಿತ್ತು. ನೋಡುವವರ ಚಿತ್ತ ಆಕರ್ಷಿಸುವಂತಹ ವ್ಯಕ್ತಿತ್ವ. ಇವರ ಮನಸ್ಸು ಬಂಗಾರದಂತೆ ನಿಷ್ಕಲ್ಮಷ, ಇನ್ನೊಬ್ಬರ ಮನಕ್ಕೆ ಹಿಂಸೆಯಾಗದ ಮೃದು ಮಧುರ ಹಿತವಾದ ಮಾತುಗಾರಿಕೆ, ಲೋಕವ್ಯವಹಾರಗಳಿಂದ ದೂರ ಉಳಿದು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗುವ ಯತಿ ನಿಷ್ಠೆಯ ಧರ್ಮವುಳ್ಳವರು.

ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಭಗವಾನ್ ಶ್ರೀಕೃಷ್ಣನು ದೈವೀ ಸಂಪತ್ತನ್ನು ವರ್ಣಿಸುತ್ತಾ ಅರ್ಜುನನಿಗೆ ಹೀಗೆ ಹೇಳುತ್ತಾನೆ.

ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗ ವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥೧॥

ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।
ದಯಾ ಭೂತೇಷ್ವ ಲೋಲುತ್ವಂ ಮಾರ್ದವಂ ಹ್ರೀರ ಚಾಪಲಂ ॥೨॥

ತೇಜಃ ಕ್ಷಮಾಧೃತಿಃ ಶೌಚಮದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥೩॥

ಪರರಿಗೆ ತನ್ನಿಂದ, ತನಗೆ ಪರರಿಂದ ಅಂಜಿಕೆ ಇಲ್ಲದಿರುವುದು. ಪ್ರಸನ್ನ ಚಿತ್ತತೆ, ಜ್ಞಾನೋದಯಾನುಷ್ಠಾನದಲ್ಲಿ ನಿಷ್ಠೆ, ದಾನಶೀಲತೆ, ಇಂದ್ರಿಯನಿಗ್ರಹ, ಯಜ್ಞ, ವೇದಧ್ಯಾಯನ. ಬ್ರಹ್ಮಚರ್ಯಾದಿ ಮನೋವಾಕ್ಕಾಯಗಳಲ್ಲಿ ಒಂದೇ ರೀತಿಯಾಗಿರುವುದು ಅಹಿಂಸೆ, ಸತ್ಯ, ಕ್ರೋಧವಿಲ್ಲದಿರುವುದು, ಔದಾರ್ಯ, ಭಗವನ್ನಿಷ್ಠೆ, ಚಾಡಿ ಹೇಳದಿರುವುದು, ಭೂತದಯೆ ವಿಷಯವೈರಾಗ್ಯ ಕಾರ್ಯವಿಲ್ಲದಿರುವುದು, ಅಕಾರ್ಯದಲ್ಲಿ ಲಜ್ಜೆ, ಸ್ಥೈರ್ಯ, ಪರಾಕ್ರಮ, ಕ್ಷಮೆ, ಧೈರ್ಯ, ಶೌಚ, ದ್ರೋಹ ಮಾಡದಿರುವುದು, ಅಹಂಕಾರವಿಲ್ಲದಿರುವುದು.

ಈ ಗುಣಗಳು ದೈವೀ ಸಂಪತ್ತನ್ನು ಹೊಂದಿದವರಿಗೆ ಮಾತ್ರ ಇರುತ್ತವೆ. ಶ್ರೀ ವಿಶ್ವೋತ್ತಮತೀರ್ಥರಲ್ಲಿ ಈ ಎಲ್ಲ ಗುಣಗಳನ್ನು ಕಾಣಬಹುದಾಗಿತ್ತು. ಆದುದರಿಂದ ಅವರು ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ದೇವಾಂಶ ಸಂಭೂತರು ಆಗಿದ್ದರು ಎಂಬುದು ದೃಢಪಡಿಸುತ್ತದೆ.

ಶ್ರೀ ವಿಶ್ವೋತ್ತಮತೀರ್ಥರಿಗೆ ಪ್ರಾರಂಭಿಕ ಪಾಠಹೇಳಿದ ವಿದ್ವಾಂಸರಾದ ಅಲೆವೂರು

ಸೀತಾರಾಮಾಚಾರ್ಯರೇ ಮೊದಲಾದವರು ಶ್ರೀಗಳವರ ವಿದ್ಯಾವಿನಯಾದಿ ಸಂಪತ್ತನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಕೂಡಿ ಜಪತಪೋನುಷ್ಠಾನಗಳನ್ನು ಶ್ರದ್ಧೆಯಿಂದ ಮಾಡುತ್ತಾ ಪಟ್ಟದದೇವರಾದ ಶ್ರೀ ಭೂವರಾಹದೇವರು ಶ್ರೀ ಲಕ್ಷ್ಮೀ ಹಯಗ್ರೀವದೇವರು, ಶ್ರೀ ವಾದಿರಾಜರು, ಶ್ರೀ ಭೂತರಾಜರನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ಯಾವದೇ ರೀತಿಯ ಪ್ರಚಾರಾದಿಗಳನ್ನು ಬಯಸದೆ ಗೋಪ್ಯವಾಗಿ ತಮ್ಮ ಸಾಧನೆಯನ್ನು ಮಾಡಿ ಶ್ರೀ ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗಿರುತ್ತಾರೆ. ವಿಷಯ ಭೋಗಗಳಲ್ಲಿ ಆಸಕ್ತರಾಗದೆ, ಸಮಾಜಕ್ಕೆ ತಮ್ಮನ್ನು ತೋರಗೊಡದೆ ಗೌಪ್ಯ ಅನುಷ್ಠಾನವನ್ನು ಮಾಡಿಕೊಂಡು ಬಂದಿದ್ದ ವ್ಯಕ್ತಿತ್ವ ಇವರದ್ದು. ತಮ್ಮ ಜೀವಿತಾವಧಿಯಲ್ಲಿ ಒಂದು ದಿನವೂ ಒಬ್ಬರ ಮನಸ್ಸನ್ನು ನೋಯಿಸಿದವರಲ್ಲ. ತಮಗೆ ಯಾರಾದರೂ ಮನಸ್ಸು ನೋವುಮಾಡುವ ಮಾತುಗಳನ್ನು ಹೇಳಿದರೆ ಅಥವಾ ತೊಂದರೆಯನ್ನೊಡ್ಡಿದರೆ ಸರ್ವಪ್ರೇರಕನಾದ ಭಗವಂತ ಅವರಿಗೆ ಆ ರೀತಿ ಪ್ರೇರಣೆ ಮಾಡಿರುವನು. ಅದರ ಪರಿಣಾಮ ನಮಗಾಗದು ನಾವು ಹರಿಗುರುಗಳನ್ನು ನಂಬಿಕೊಂಡಿರುವವರು, ಹರಿಗುರುಗಳನ್ನೇ ಶರಣುಹೊಂದಿದರೆ ಆಯಿತು ಎಂಬ ಮನೋಧರ್ಮದ ಪ್ರವೃತ್ತಿವುಳ್ಳವರಾಗಿ ಭಾಗವತಧರ್ಮವನ್ನು ಅನುಸರಿಸುತ್ತಿದ್ದ ಯತಿಶ್ರೇಷ್ಠರು. ತಮಗೆ ಸರ್ವವಿಧವಾದ ಸೌಭಾಗ್ಯಗಳಿದ್ದರೂ ಆಡಂಬರ, ಹೊಗಳಿಕೆ, ವಿಶ್ವವಿಖ್ಯಾತಿ, ಕೀರ್ತಿ, ಆಧುನಿಕ ಜಗತ್ತಿನ ಯಾವ ಸೌಕರ್ಯವನ್ನೂ ಅಪೇಕ್ಷಿಸದೆ ನಿತ್ಯ ಹರಿಗುರುಗಳ ಸೇವೆ, ಶ್ರೀ ವಾದಿರಾಜರ ಕೃತಿಗಳ ಚಿಂತನಮಂಥನದಲ್ಲಿಯೇ ಆಸಕ್ತರಾಗಿ ಪರಮ ಹಂಸ ಪರಿವ್ರಾಜಕರಾದವರಿಗೆ ಆದರ್ಶರಾಗುವ ಚರಿತೆಯ ಧೀಮಂತ ವ್ಯಕ್ತಿತ್ವ ಇವರದ್ದು. ಇವರ ಸರಳ ವ್ಯಕ್ತಿತ್ವ ನಿರ್ಮಲವಾದ ಮನಸ್ಸು, ಪರೋಪಕಾರ, ಬ್ರಾಹ್ಮಣರ ಮೇಲಿನ ಅನುಕಂಪ, ಪ್ರೀತಿ, ದಯೆ ಇವೆಲ್ಲವೂ ಅನಾದೃಶ, ಹರಿದಾಸರು, ಪಂಡಿತರು, ವಿದ್ಯಾಸಂಪನ್ನರೆಂದರೆ ಶ್ರೀ ವಿಶ್ವೋತ್ತಮತೀರ್ಥರಿಗೆ ತುಂಬ ಅಭಿಮಾನ ಅವರಿಗೆ ಗುಪ್ತವಾಗಿಯೇ ಸಂಭಾವನಾದಿಗಳನ್ನು ಕೊಟ್ಟು ಸಂತೋಷಪಡಿಸುತ್ತಿದ್ದರು. ಯಾವದೇ ರೀತಿಯ ಪ್ರಚಾರ ಅವರಿಗೆ ಬೇಡ.

**ಪೂಜಾ ಕೈಂಕರ್ಯ :** ಇವರು ಪೂಜಾ ಕೈಂಕರ್ಯದಲ್ಲಿ ಪಾಲಿಸಿಕೊಂಡಿದ್ದ ಶಿಸ್ತುಬದ್ಧತೆ ಎಲ್ಲರಿಗೂ ಆದರ್ಶಪ್ರಾಯವಾಗಿತ್ತು. ಸೌಖ್ಯವಿರಲಿ, ಅಸೌಖ್ಯವಿರಲಿ, ಯಾರೇ ಬಂದಿರಲಿ, ಬರದೇ ಇರಲಿ, ಚಳಿ-ಮಳೆ-ಗಾಳಿ ಏನೇ ಇರಲಿ ಒಂದು ದಿನವೂ ಪೂಜಾ ಕೈಂಕರ್ಯದಲ್ಲಿ ಲೋಪಮಾಡದೆ ಹರಿಗುರುಗಳ ಪೂಜಾದಿಗಳನ್ನು ಮಾಡಿ ಶ್ರೀವಾದಿರಾಜರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ದೈವೀವ್ಯಕ್ತಿತ್ವದ ತಪೋನಿಷ್ಠರು ಅವರಾಗಿದ್ದರು. ಜಪದ ಬಗ್ಗೆ ಹೇಳುವದಾದರೆ, ಹಿಂದೆ ವೃಂದಾವನಾಚಾರ್ಯರು ಲಕ್ಷ ಸಂಖ್ಯೆಯ ಜಪ ಮಾಡಿದಂತೆ ಇವರೂ ಸಹ ಸೋದೆಯಲ್ಲಿ ಚಾತುರ್ಮಾಸಕಾಲದಲ್ಲಿ ಬೆಳಿಗ್ಗೆ ೩ ಘಂಟೆಗೆ ಎದ್ದು ಪ್ರತಿನಿತ್ಯ ಲಕ್ಷಮಂತ್ರ ಜಪಮಾಡುತ್ತಿದ್ದ ಸಿದ್ಧಪುರುಷರು.

ಪ್ರತಿನಿತ್ಯದಲ್ಲೂ ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ಸ್ನಾನ ಮಾಡಿ ಪ್ರಣವ ಮಂತ್ರ ಜಪಾನುಷ್ಠಾನದಲ್ಲಿ ಮಗ್ನರಾಗಿದ್ದು ಅನಂತರ ಸಂಪ್ರದಾಯಕ್ಕೆ ಅನುಸಾರವಾಗಿ ಶಾಸ್ತ್ರೋಕ್ತರೀತಿಯಲ್ಲಿ ಶ್ರದ್ಧಾಭಕ್ತಿಯುತರಾಗಿ ಪಟ್ಟದ ದೇವರು ಶ್ರೀ ವರಾಹ, ಹಯಗ್ರೀವ ಮತ್ತು ವೇದವ್ಯಾಸ (ವ್ಯಾಸಮುಷ್ಟಿ) ಪೂಜೆಯನ್ನೂ ಅನಂತರ ಪ್ರಾಣದೇವರ ವಾದಿರಾಜರ ಸಮಪೂಜೆಯನ್ನೂ ಮತ್ತು ಭೂತರಾಜರ ಪೂಜೆಯನ್ನೂ ತದೇಕ ಚಿತ್ತರಾಗಿ ಮಾಡುತ್ತಿದ್ದರು.

ಆಕರ್ಷಣೀಯವಾದ ವರ್ಣನಾತೀತವಾದ ಇವರ ಪೂಜಾಕ್ರಮವು ಕಣ್ಮನಗಳಿಗೆ ಆನಂದವನ್ನೀಯುತ್ತಿತ್ತು ಮತ್ತು ಭಕ್ತಿ ಭಾವವನ್ನು ಮೂಡಿಸುತ್ತಿತ್ತು. ಪೂಜಾಕಾರ್ಯ ಮುಗಿದ ಮೇಲೆಯೇ ಇತರೆಡೆಗೆ ಗಮನ ಹರಿಸುತ್ತಿದ್ದರು. (ಪ್ರತಿದಿನ ಪಟ್ಟದ ದೇವರ ಪೂಜೆಯಲ್ಲಿ ವೇದವ್ಯಾಸರಿಗೆ ಪಂಚಾಮೃತ ಅಭಿಷೇಕವಾಗಲೇ ಬೇಕು. ಇದು ಸೋದಾಮಠದ ವೈಶಿಷ್ಟ್ಯ).

ಶ್ರೀಗಳವರು ದೇವರ ಪೂಜೆಗೆ ಹಾಗೂ ನೈವೇದ್ಯಕ್ಕೆ ಮಡ್ಡಿ ತಯಾರಿಸಲು ಬಾವಿಯ ನೀರನ್ನೇ ಬಳಸುತ್ತಿದ್ದರು. ಆದುದರಿಂದ ಇವರು ಬೋರವೆಲ್, ನಲ್ಲಿ ನೀರನ್ನು ಬಳಸುತ್ತಿರಲಿಲ್ಲ. ಭಿಕ್ಷೆಗೆ ಹೋಗಬೇಕಾದರೆ ಬಾವಿ ನೀರಿನ ಸೌಲಭ್ಯವಿರುವ ಕಡೆಗೆ ಮಾತ್ರ ಹೋಗುತ್ತಿದ್ದರು.

ಶ್ರೀ ಹರಿಗುರುಗಳಲ್ಲಿ ಇವರ ಭಕ್ತಿ ಅಚಲವಾದದ್ದು. ಶ್ರೀ ವಾದಿರಾಜರ ಋಜುತ್ವ ವಿಷಯದಲ್ಲಿ ಅಚಲವಾದ ಭಕ್ತಿ ಶ್ರದ್ಧೆಯುಳ್ಳವರಾಗಿ, ಋಜುತ್ವ ಪ್ರಚಾರದಲ್ಲಿ ಕಂಕಣಬದ್ಧರಾಗಿ ತಮ್ಮ ಜೀವನದುದ್ದಕ್ಕೂ ಚಾಚೂ ತಪ್ಪದೆ ಸಮಪೂಜೆಯೇ ಮೊದಲಾದ ಋಜುತ್ವ ಉಪಾಸನೆಗಳನ್ನು ಮಾಡಿ ಶ್ರೀಗುರುರಾಜರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದರು. ತಮ್ಮ ನಿತ್ಯಾನುಷ್ಠಾನಾದಿಗಳಿಂದ ಪೂರ್ಣವಾದ ಮನಃಶಾಂತಿಯನ್ನು ಹೊಂದಿ ತಮ್ಮ ಶಕ್ತ್ಯಾನುಸಾರ ಯತಿಧರ್ಮವನ್ನಾಚರಿಸಿಕೊಂಡು ಪಾಠ ಪ್ರವಚನಾದಿಗಳನ್ನು ಮಾಡುತ್ತಾ, ಶ್ರೀ ವಾದಿರಾಜರ ಋಜುತ್ವಬೋಧಕ ಮಹಿಮೆಗಳ ಸದೃಷ್ಟಾಂತವಾಗಿ ಪ್ರವಚನಗಳ ಮೂಲಕ ಭಕ್ತವೃಂದಕ್ಕೆ ಮನದಟ್ಟು ಮಾಡಿಸಿ ಶ್ರೀ ವಾದಿರಾಜರಲ್ಲಿ ಅಚಲವಾದ ಭಕ್ತಿ ವಿಶ್ವಾಸ ಹುಟ್ಟುವಂತೆ ಮಾಡಿದ ಮಹಾತ್ಮರು.

ಶ್ರೀ ವಿಶ್ವೋತ್ತಮತೀರ್ಥರ ವ್ಯಕ್ತಿತ್ವದ ಪ್ರಭಾವದಿಂದಾಗಿ ಮಠದ ಅಭಿಮಾನಿಗಳಿಗೂ, ಶಿಷ್ಯ ವರ್ಗದವರಿಗೂ, ಶ್ರೀ ವಾದಿರಾಜರ ಬಗ್ಗೆ ಹೆಚ್ಚಿನ ಅರಿವು, ಭಕ್ತಿ, ಶ್ರದ್ಧೆಗಳು ಜಾಗೃತರಾಗಿ, ತಮ್ಮನ್ನು ಉದ್ಧಾರ ಮಾಡುತ್ತಿರುವ ಶ್ರೀ ವಾದಿರಾಜ ಗುರುಗಳ ವೃಂದಾವನದ ಸೇವೆಯನ್ನು ಮಾಡಲು ಪ್ರಾರಂಭವಾಯಿತು. ವಿರಕ್ತ ಶಿಖಾಮಣಿಗಳಾದ ಗುರುಗಳು ತಮ್ಮ ಚಾತುರ್ಮಾಸವ್ರತವನ್ನು ಸೋದಾಕ್ಷೇತ್ರದಲ್ಲಿಯೇ ಆಚರಿಸುತ್ತಿದ್ದರು. (ಪರ್ಯಾಯ ಅವಧಿ ಹೊರತಾಗಿ) ಆದುದರಿಂದ ಸೋದಾ ಕ್ಷೇತ್ರಕ್ಕೆ ಯಾತ್ರೆ ಮಾಡುವ ಭಕ್ತರ ಸಂಖ್ಯೆ ಅಧಿಕವಾಯಿತು. ಶ್ರೀಗಳವರ ಮಹಿಮೆಯನ್ನು ತಿಳಿಯದ ಭಕ್ತರೇ ಇಲ್ಲವೆಂದು ಹೇಳಬಹುದು. ಯಾವ ಭಕ್ತರ ಮನೆಯಲ್ಲಿ ನೋಡಿದರೂ ಅಲ್ಲಿ ಶ್ರೀವಾದಿರಾಜರ ಶ್ರೀ ಭೂತರಾಜರ ಹಾಗೂ ವಿಶ್ವೋತ್ತಮಗುರುಗಳ ಭಾವಚಿತ್ರಗಳು ಕಂಡು ಬರುತ್ತವೆ. ಸೋದಾ ಕ್ಷೇತ್ರವು ಸಣ್ಣ ಹಳ್ಳಿಯಾದರೂ ಇಂದು ದೊಡ್ಡ ಯಾತ್ರಾಕ್ಷೇತ್ರವೇ ಆಗಿ ಬೆಳೆದಿದೆ.

**ವಿನೋದ ಪ್ರಿಯ ವಿಶ್ವೋತ್ತಮರು :** ಶ್ರೀಗಳವರು ವಿಶೇಷ ಸಂದರ್ಭದಲ್ಲಿ ಹಾಸ್ಯ ಚಟಾಕಿಯನ್ನು ಹಾರಿಸುತ್ತಿದ್ದರು. ಈ ಪ್ರವೃತ್ತಿಯಿಂದ ಮಠದ ಸಿಬ್ಬಂದಿಯವರಿಗೂ ಅವರು ಬಹಳ ಆತ್ಮೀಯರಾಗಿದ್ದರು. ಪಂಜಿಮಾರಿನಂತಹ ಯಾರೂ ಬಾರದ, ಏನೂ ಸೌಕರ್ಯವಿಲ್ಲದ, ದೂರವಾಣಿ, ದೂರದರ್ಶನ ದಿನಪತ್ರಿಕೆಯಂತಹ ಸೌಲಭ್ಯಗಳೂ ಇಲ್ಲದ ಪ್ರದೇಶದಲ್ಲಿ ಶ್ರೀಗಳವರೊಂದಿಗೆ ವಾಸ ಮಾಡುತ್ತಿದ್ದರೂ ಸಿಬ್ಬಂದಿಗಳಿಗೆ ಹೊತ್ತು ಕಳೆದದ್ದು ಗೊತ್ತಾಗುತ್ತಿರಲಿಲ್ಲ. ಸಿಬ್ಬಂದಿಗಳನ್ನು ತಮ್ಮ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು.

**ಶ್ರೀಗಳವರು ಶ್ರೇಷ್ಠ ವೈದ್ಯರು :** ಮಠದ ಸಿಬ್ಬಂದಿಗಳಲ್ಲಿ ಯಾರಿಗಾದರೂ ಅಸೌಖ್ಯ

ಕಂಡುಬಂದಲ್ಲಿ ಮೊದಲಿಗೆ ಶ್ರೀಗಳವರೇ ಅವರಿಗೆ ಔಷಧವನ್ನು ನೀಡುತ್ತಿದ್ದರು. ಅವರಿಗೆ ಆಯುರ್ವೇದ, ಆಲೋಪತಿ, ಹೋಮಿಯೋಪತಿ – ಹೀಗೆ ಎಲ್ಲ ರೀತಿಯ ಔಷಧಗಳ ಬಗ್ಗೆ ನಿಖರವಾದ ಪರಿಚಯ ಇದ್ದಿತ್ತು. ಇದರಿಂದಾಗಿ ಶ್ರೀ ಮಠದ ಸಿಬ್ಬಂದಿವರ್ಗದವರಿಗೆ ಬಹಳ ಅನುಕೂಲವೇ ಆಗುತ್ತಿತ್ತು. ಸಿಬ್ಬಂದಿ ವರ್ಗದ ಮೇಲೆ ಅಪಾರವಾದ ಕರುಣೆ ಇದ್ದಿತ್ತು. ಅದನ್ನು ಎಲ್ಲ ಸಿಬ್ಬಂದಿವರ್ಗದವರೂ ಅನುಭವಿಸಿದ್ದರು.

**ಸಮಯ ಪ್ರಜ್ಞೆ :** ಶ್ರೀಗಳ ಸಮಯಪ್ರಜ್ಞೆ ಅದ್ಭುತವಾಗಿತ್ತು. ಅದು ಎಲ್ಲರ ಮೇಲೆ ವಿಶೇಷವಾಗಿ ಪ್ರಭಾವ ಬೀರಿತ್ತು. ಒಮ್ಮೆ ಮಣಿಪಾಲ ಆಸ್ಪತ್ರೆಯ ಐವತ್ತನೆಯ ವರ್ಷದ ಪ್ರಯುಕ್ತ ನಡೆದ ಸಭಾಕಾರ್ಯಕ್ರಮಕ್ಕೆ ಶ್ರೀಗಳವರು ಹೋಗಬೇಕಿತ್ತು. ವ್ಯವಸ್ಥಾಪಕರು ೧೦ ಘಂಟೆಗೆ ಬರುವಂತೆ ಹೇಳಿದ್ದರು. ಶ್ರೀಗಳವರು ಸರಿಯಾಗಿ ೯-೫೮ಕ್ಕೆ ಆ ಸ್ಥಳದಲ್ಲಿದ್ದರು. ಆಗ ಸಂಘಟಿಗರಿಗೆ ಆಶ್ಚರ್ಯವೂ ಸಂತೋಷವೂ ಆಯಿತು. ಈ ಸಮಯ ಪ್ರಜ್ಞೆಯನ್ನು ಕೊನೆಯ ಕಾಲದವರೆಗೂ ಪಾಲಿಸಿಕೊಂಡು ಬಂದಿದ್ದರು. ಅವರು ಪ್ರತಿನಿತ್ಯದ ಕಾರ್ಯವನ್ನು ಸಮಯಕ್ಕೆ ಸರಿಯಾಗಿ ಮಾಡುತ್ತಿದ್ದರು. ಅದರಿಂದ ಮಠದಲ್ಲಿದ್ದವರೆಲ್ಲರಿಗೂ ಸಮಯಕ್ಕೆ ಸರಿಯಾಗಿ ಕೆಲಸವನ್ನು ಮಾಡಿ ಮುಗಿಸುವ ಸ್ವಭಾವ ಬಂದುಬಿಟ್ಟಿತು.

ಶ್ರೀಗಳವರು ಎಲ್ಲೇ ಇರಲಿ ಯಾವುದೇ ಹವಾಮಾನದ ಏರುಪೇರುಗಳಿರಲಿ ಅವರು ಪ್ರಾತಃಕಾಲದಲ್ಲಿ ನಿಯಮಿತ ಸಮಯದಲ್ಲೆದ್ದು ದೈನಂದಿನ ಚಟುವಟಿಕೆಯಲ್ಲಿ ತೊಡಗಿಸಿ ಕೊಳ್ಳುತ್ತಿದ್ದರು. ಪಟ್ಟದದೇವರ ಪೂಜೆ, ವೃಂದಾವನದ ಪೂಜೆ. ಭೂತರಾಜರ ಪೂಜೆಗಳನ್ನು ನಿಗದಿತ ಸಮಯದಲ್ಲಿ ನೆರವೇರಿಸುತ್ತಿದ್ದರು. ಹರಿಗುರುಗಳ ಸೇವೆಯಲ್ಲಿ ಅತ್ಯಂತ ಶಿಸ್ತಿನ ಸನ್ಯಾಸಿಯಾಗಿ ಸೇವೆಸಲ್ಲಿಸುತ್ತಿದ್ದರು. ಯಾವುದೇ ರೀತಿಯ ಒತ್ತಡವಿರಲಿ, ಪರ್ಯಾಯ ಕಾಲದಲ್ಲಿ ಶ್ರೀಕೃಷ್ಣನ ಮಹಾಮಂಗಳಾರತಿಯನ್ನು ಒಂದು ನಿಗದಿತ ಸಮಯಕ್ಕೆ ಮಾಡಿರುವುದು ಅಷ್ಟಮಠದ ಇತಿಹಾಸದಲ್ಲಿ ಉಲ್ಲೇಖಾರ್ಹ ವಿಷಯ.

**ಗ್ರಂಥ ಪ್ರಕಾಶನ :** ಶ್ರೀಗಳವರು ವಾದಿರಾಜ ಸೇವಾಸಂಘದ ಮೂಲಕ ಇಪ್ಪತ್ತೈದಕ್ಕೂ ಹೆಚ್ಚು ಪುಸ್ತಕಗಳ ಪ್ರಕಟಣೆ ಮಾಡಿದ್ದಾರೆ.

ಶ್ರೀ ವಾದಿರಾಜಯತಿ ವಿರಚಿತ ಶ್ರೀ ಹರಿಭಕ್ತಿ ಲತಾ, ಶೃತಿತತ್ವ ಪ್ರಕಾಶಿಕಾ, ಲಕ್ಷಾಲಂಕಾರ, ಸಟೀಕಾ ದಶಾವತಾರಸ್ತುತಿ, ಶ್ರೀ ವಾದಿರಾಜ ಟೀಕಾ ಸಹಿತ ದಶೋಪನಿಷತ್, ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ವಾದಿರಾಜರ ಟೀಕಾ ಭಾವಪ್ರಕಾಶಿಕಾ, ಶ್ರೀ ನಾರಾಯಣ ಪಂಡಿತಾಚಾರ್ಯರಿಂದ ರಚಿತ 'ಶುಭೋದಯ' ವಾದಿರಾಜಗುರುವರ ಕೀರ್ತನಾಮಂಜರೀ, ಶ್ರೀ ವಿಶ್ವೇಂದ್ರತೀರ್ಥ ವಿರಚಿತ ಕೀರ್ತನಾಮಂಜರೀ, ಶ್ರೀ ವಾದಿರಾಜ ಮಂಗಳಾಷ್ಟಕ, ಮೊದಲಾದ ಅನೇಕ ಸಂಸ್ಕೃತ ಕನ್ನಡ ಪುಸ್ತಕಗಳನ್ನು ಪ್ರಕಟಣೆ ಮಾಡಿದ್ದಾರೆ.

ಶ್ರೀ ವಾದಿರಾಜರ ಋಜುತ್ವ ಪ್ರಚಾರದಲ್ಲಿ ತಮ್ಮನ್ನು ಅವಿರತವಾಗಿ ತೊಡಗಿಸಿಕೊಂಡು ಶ್ರೀ ವಾದಿರಾಜರ ಋಜುತ್ವ ಸಮರ್ಥಕ ಪುಸ್ತಕಗಳನ್ನು ವಿದ್ವಾಂಸರಿಂದ ಬರೆಯಿಸಿ ಪ್ರಕಟಣೆ ಮಾಡಿಸಿರುವರು.

**ಪ್ರಥಮ ಪರ್ಯಾಯ (೧೯೪೮-೫೦) :** ಒಂಬತ್ತನೆಯ ವಯಸ್ಸಿನಲ್ಲಿ ಸನ್ಯಾಸಾಶ್ರಮ ಸ್ವೀಕರಿಸಿದ ಶ್ರೀ ವಿಶ್ವೋತ್ತಮತೀರ್ಥರು ತಮ್ಮ ೧೪ನೇಯ ವಯಸ್ಸಿನಲ್ಲಿ ಶ್ರೀ ಸರ್ವಜ್ಞಾಚಾರ್ಯರು

ಪೀಠವನ್ನೇರುವ ಅವಕಾಶ ಪ್ರಾಪ್ತವಾಯಿತು. ಆಗ ಜನಸಂಖ್ಯೆ ಬಹಳ ಕಡಿಮೆಯಿತ್ತು. ಜನರ ಆರ್ಥಿಕ ಸ್ಥಿತಿ ಉತ್ತಮವಾಗಿರಲಿಲ್ಲ. ಸಾರಿಗೆ ಸೌಲಭ್ಯ ಕೂಡ ಹೆಚ್ಚಿಗೆಯಿರಲಿಲ್ಲ. ಮಠಗಳಿಗೆ ಭೂಮಿ, ತೋಟ ಮುಂತಾದವುಗಳಿಂದ ಉತ್ಪನ್ನವಿತ್ತು. ಈಗಿನ ಹಾಗೆ ವೈಭವದಿಂದ ಹಾಗೂ ಸಂಭ್ರಮದ ಪರ್ಯಾಯ ನಡೆಯುತ್ತಿರಲಿಲ್ಲ. ಕೇವಲ ಸಂಪ್ರದಾಯದ ವಿಧಿವಿಧಾನದಿಂದ ನಡೆಯುತ್ತಿತ್ತು.

ಉಡುಪಿಯ ಅಷ್ಟಮಠಾಧೀಶರು ಸರದಿಯಂತೆ ಎರಡು ವರ್ಷಗಳಿಗೊಮ್ಮೆ ಪರ್ಯಾಯ ಗದ್ದುಗೆ ಏರುವದಿನದ ಮುಂಜಾವಿನ ಮೆರವಣಿಗೆ ಹಾಗೂ ಬಡಗು ಮಾಳಿಗೆಯ ರಾಜಾಂಗಣದಲ್ಲಿ ಆ ಬಳಿಕ ನಡೆಯುವ ದರ್ಬಾರು ಸಭೆ ಇವಿಷ್ಟು ಪರ್ಯಾಯೋತ್ಸದ ಬಹಿರಂಗ ಕ್ರಿಯೆಗಳು. ಜೋಡು ಕಟ್ಟೆಯಿಂದ ಹೊರಡುವ ಮೆರವಣಿಗೆಯಲ್ಲಿ ಸಾಗುವ ಆನೆ, ಬಿರುದಾವಳಿ, ವಾದ್ಯ ವಾಲಗದವರ ಶಬ್ಧ, ಯತಿಗಳು ಆಸೀನರಾಗುವ ಸಾಲಂಕೃತ ಮೇನೆಗಳ ಶೋಭೆ, ಆರಳು ಗದ್ದುಗೆಯ ಮೇಲೆ ತುಳುವ ಪೀಠಾಧೀಶರು ನಡೆಸುವ ದರ್ಬಾರು ಸಭೆಯ ಬೆಡಗು ಇವು ಮುಖ್ಯವಾಗಿ ಪರ್ಯಾಯೋತ್ಸವದ ಶೋಭಾಯಮಾನ ಅಂಗಗಳು. ಪರ್ಯಾಯೋತ್ಸವದ ವಿದ್ಯುಕ್ತ ಕ್ರಿಯೆಯಾದರೋ ತೀರಾ ಸರಳವಾದುದು. ಶ್ರೀ ಕೃಷ್ಣನ ಗುಡಿಯ ಉತ್ತರಭಾಗದ ಶ್ರೀ ಮಧ್ವಾಚಾರ್ಯರ ವಿಗ್ರಹದ ಮುಂದೆ ಪರ್ಯಾಯ ಬಿಟ್ಟೇಳುವ ಯತಿಗಳು ಪರ್ಯಾಯ ಪೀಠಾರೂಢರಾಗುವ ಯತಿಗಳಿಗೆ ಶ್ರೀಕೃಷ್ಣ ಪೂಜಾಧಿಕಾರವನ್ನು ಬಿಟ್ಟುಕೊಡುವ ಸಂಕೇತವಾಗಿ ಅಕ್ಷಯ ಪಾತ್ರೆಯನ್ನು ನೀಡಿ ಬಳಿಕ ಶ್ರೀ ಮಧ್ವಾಚಾರ್ಯರ ಆಸನದ ಮೇಲೆ ಕೂಡಿಸುವುದು. ಇದಿಷ್ಟು ಪರ್ಯಾಯದ ಸಂಕ್ಷೇಪ ವರ್ಣನೆ.

ಶ್ರೀ ಕೃಷ್ಣ ಮಠಕ್ಕೆ ಸಂಬಂಧಿಸಿದ ಎಂಟು ಮಠಗಳಿವೆ. ಈ ಎಂಟು ಮಠಗಳು ಒಂದು ನಿರ್ದಿಷ್ಟ ಕ್ರಮದಲ್ಲಿ ಎರಡು ವರ್ಷಗಳ ಆವರ್ತನದಲ್ಲಿ ಶ್ರೀ ಕೃಷ್ಣ ಮಠದ ಆಡಳಿತ ನಡೆಸುತ್ತವೆ. ಪ್ರತಿಯೊಂದು ಮಠಕ್ಕೂ ಪ್ರತ್ಯೇಕ ಅಸ್ತಿತ್ವವಿದ್ದು, ಅವೆಲ್ಲವೂ ಸರ್ವಕಾಲದಲ್ಲೂ ಶ್ರೀ ಕೃಷ್ಣ ಮಠಕ್ಕೆ ಹೊಂದಿಕೊಂಡಿವೆ. ಎರಡು ವರ್ಷಗಳ ಕಾರ್ಯಯೋಜನೆಗಳನ್ನು ಹಾಕಿಕೊಳ್ಳುತ್ತವೆ. ಈ ತೆರನಾದ ಆಡಳಿತ ಸ್ವಾತಂತ್ರ್ಯ ಶ್ರೀ ಕೃಷ್ಣ ಮಠದ ಅಭಿವೃದ್ಧಿ ಕಾರ್ಯಗಳಲ್ಲಿ, ಅಷ್ಟ ಮಠಗಳೊಳಗೆ ಒಂದು ಆರೋಗ್ಯಕರ ಸ್ಪರ್ಧೆಗೆ ಸದಾವಕಾಶ ಒದಗಿಸಿದೆ.

**ಶ್ರೀ ಕೃಷ್ಣನ ಪ್ರಮುಖ ಪೂಜೆಗಳು :** ಶ್ರೀ ಕೃಷ್ಣ ಮಠದಲ್ಲಿ ನಡೆಯುವ ಪ್ರಮುಖ ಪೂಜೆಗಳೆಂದರೆ ೧. ನಿರ್ಮಾಲ್ಯ ವಿಸರ್ಜನೆ ೨. ಉಷಃ ಕಾಲ ಪೂಜೆ ೩. ಗೋ ಪೂಜೆ ೪. ಪಂಚಾಮೃತ ಪೂಜೆ ೫. ಉದ್ವರ್ತನ ಪೂಜೆ ೬. ಕಲಶ ಪೂಜೆ ೭. ತೀರ್ಥ ಪೂಜೆ ೮. ಅಲಂಕಾರ ಪೂಜೆ ೯. ಅವಸರ ಪೂಜೆ ೧೦. ಮಹಾಪೂಜೆ. ಈ ಎಲ್ಲ ಪೂಜೆಗಳು ಬೆಳಿಗ್ಗೆ ೫-೩೦ರಿಂದ ೧೧-೩೦ರವರೆಗೆ ಒಂದರ ಹಿಂದೆ ಒಂದರಂತೆ ನಡೆಯುತ್ತವೆ. ಸಾಯಂಕಾಲ ೪-೩೦ರಿಂದ ೫-೩೦ರ ವರೆಗೆ ಪುರಾಣ ವಚನ, ೫-೩೦ರಿಂದ ೭ರ ವರೆಗೆ ಪ್ರವಚನ ಕಾರ್ಯಕ್ರಮಗಳು ನಡೆಯುತ್ತವೆ. ಆ ಬಳಿಕ ರಾತ್ರಿ ೭ ರಿಂದ ೯ರ ವರೆಗೆ ನಡೆಯುವ ಪೂಜೆಗಳೆಂದರೆ,

೧. ಚಾಮರ ಸೇವೆ ೨. ರಾತ್ರಿ ಪೂಜೆ ೩. ಮುಖ್ಯಪ್ರಾಣನಿಗೆ ರಂಗ ಪೂಜೆ ೪. ರಥೋತ್ಸವ ಕಾಲದಲ್ಲಿ ಕಾಲಾದಿ ಸೇವಾರ್ಥ ರಥೋತ್ಸವ ೫. ತೊಟ್ಟಿಲ ಪೂಜೆ ೬. ಅಷ್ಟಾವಧಾನ ೭. ಕೊಳಲು ಸೇವೆ ೮. ಶಯನೋತ್ಸವ.

ಈ ಹದಿನೆಂಟು ಪೂಜೆಗಳು ಅಭಾದಿತವಾಗಿ ಪರ್ಯಾಯ ಕ್ರಮದಲ್ಲಿ ಆಚಾರ್ಯ ಮಧ್ವರ, ವಾದಿರಾಜರ ಸಂಕಲ್ಪದಂತೆ ಕಳೆದ ೮ ಶತಮಾನಗಳಿಂದ ಉಡುಪಿಯ ಅಷ್ಟಮಠದ ಯತಿಗಳಿಂದ ನಿರಂತರ ನಡೆದುಕೊಂಡು ಬಂದಿದೆ. ಆದರೆ ಮಧ್ಯಾಹ್ನದ ಪ್ರಮುಖ ಪೂಜೆಯಾದ ಮಹಾಪೂಜೆ ಹಾಗೂ ರಾತ್ರಿಯ ಚಾಮರ ಪೂಜೆಯನ್ನು ಪರ್ಯಾಯ ಪೀಠಸ್ಥರಾದ ಸ್ವಾಮಿಗಳೇ ಮಾಡಬೇಕು ಉಳಿದೆಲ್ಲಾ ಪೂಜೆಗಳನ್ನು ಅಷ್ಟಮಠದ ಇತರ ಯತಿಗಳು. ಪರ್ಯಾಯ ಶ್ರೀಗಳಿಗೆ ಸಹಾಯಕರಾಗಿ ಮಾಡಬಹುದು.

**ಶ್ರೀ ಕೃಷ್ಣ ಮಠದ ಪ್ರಮುಖ ಹಬ್ಬಗಳು :** ಮಕರ ಸಂಕ್ರಮಣದ ರಥೋತ್ಸವ, ರಥಸಪ್ತಮಿ, ಮಧ್ವನವಮಿ, ಶ್ರೀ ವಾದಿರಾಜರ ಆರಾಧನೋತ್ಸವ, ಶ್ರೀ ರಾಮ ನವಮಿ, ಹನುಮಜ್ಜಯಂತಿ, ಸೌರಯುಗಾದಿ, ವಸಂತೋತ್ಸವ, ಅಕ್ಷತೃತೀಯಾ, ನರಸಿಂಹ ಜಯಂತಿ, ಭಾಗೀರಥೀ ಜನ್ಮದಿನ, ಮಹಾಭಿಷೇಕ, ಪ್ರಥಮೈಕಾದಶಿ, ಚಾತುರ್ಮಾಸ್ಯ, ಟೀಕಾಚಾರ್ಯ ಪುಣ್ಯದಿನ, ನಾಗರ ಪಂಚಮಿ, ಉಪಾಕರ್ಮ, ಹಯಗ್ರೀವ ಜಯಂತಿ, ರಾಘವೇಂದ್ರರ ಆರಾಧನೆ, ಶ್ರೀ ಕೃಷ್ಣ ಜಯಂತಿ, ಲೀಲೋತ್ಸವ, ಗಣೇಶ ಚತುರ್ಥಿ, ನವರಾತ್ರಿ, ವಿಜಯದಶಮಿ, ಉತ್ಥಾನದ್ವಾದಶಿ, ಕೋಜಾಗರ ವ್ರತ, ದೀಪಾವಳಿ, ಉತ್ಥಾನ ದ್ವಾದಶಿ, ಲಕ್ಷದೀಪೋತ್ಸವ, ಸುಬ್ರಮಣ್ಯ ಷಷ್ಠಿ, ಧನುಪೂಜೆ, ಮುಕ್ಕೋಟಿದ್ವಾದಶೀ ಮುಂತಾದವುಗಳು.

ಪರ್ಯಾಯ ಪೀಠಸ್ಥರಿಗೆ ಪೂಜಾಧಿಕಾರದೊಂದಿಗೆ ಎರಡು ವರ್ಷಗಳ ಕಾಲ ಕೃಷ್ಣ ಮಠದ ನಿರ್ವಹಣೆ ಜವಾಬ್ಧಾರಿ ಕೂಡ ಅವರದಾಗಿರುತ್ತದೆ. ಪ್ರತಿದಿನ ನೂರಾರು ಹಬ್ಬಹರಿದಿನಗಳಲ್ಲಿ ಸಾವಿರಾರು ಜನರಿಗೆ ಅನ್ನದಾನ (ಸುಮಾರು ೫೦ ವರ್ಷಗಳ ಹಿಂದಿನ ವಿಷಯ) ವಿಶೇಷ ದಿನಗಳಲ್ಲಿ ವಿಶೇಷ ಪೂಜಾದಿ ಕಾರ್ಯನಿರ್ವಹಣೆ ಅವರ ಕರ್ತವ್ಯವಾಗಿತ್ತು. ಪರ್ಯಾಯ ನಿರ್ವಹಿಸಲು ಕೆಲವು ಮಠಾಧೀಶರು ಹದಿನಾಲ್ಕು ವರ್ಷಗಳಿಂದ ಹಣ ಸಂಗ್ರಹಿಸುತ್ತಿದ್ದರು. ಪರ್ಯಾಯ ಕಾಲದಲ್ಲಿ ಪೂರ್ತಿ ಖರ್ಚು ಮಾಡಿ ಸಾಲ ಮಾಡಬೇಕಾದ ಪರಿಸ್ಥಿತಿ ಉಂಟಾಗುತ್ತಿತ್ತು.

ಶ್ರೀ ವಿಶ್ವೋತ್ತಮರು ಹದಿನಾಲ್ಕನೆಯ ವಯಸ್ಸಿನಲ್ಲಿ ಶ್ರೀ ಸರ್ವಜ್ಞಾಚಾರ್ಯರ ಪರ್ಯಾಯ ಪೀಠವನ್ನೇರಿ ಬಹಳ ವೈಭವದಿಂದ ಮೊದಲನೆಯ ಪರ್ಯಾಯ ನಿರ್ವಹಿಸಿ, ಚಿಕ್ಕ ವಯಸ್ಸಿನಲ್ಲಿ ಹಿರಿಯ ಜವಾಬ್ಧಾರಿಯನ್ನು ಲೀಲಾಜಾಲವಗಿ ಮಾಡಿದುದು ಭಕ್ತರಿಗೆಲ್ಲಾ ಸಂತೋಷವಾಯಿತು. ಪರ್ಯಾಯ ಪೀಠಸ್ಥರಲ್ಲಿ ಶ್ರೀ ಮಧ್ವಾಚಾರ್ಯರ ವಿಶೇಷ ಸನ್ನಿಧಾನವಿರುತ್ತದೆ. ಎಂಬುದಾಗಿ ಭಾವುಕರ ನಂಬಿಕೆ. ಆದರೆ ಸೋದಾಮಠಾಧೀಶರಲ್ಲಿ ಶ್ರೀ ಮಧ್ವಾಚಾರ್ಯರಲ್ಲದೆ, ಶ್ರೀ ವಾದಿರಾಜರ ವಿಶೇಷ ಸನ್ನಿಧಾನವಿರುತ್ತದೆ ಎಂಬುದಾಗಿ ನಂಬಿಕೆಯಿರುತ್ತದೆ.

ಮಾರ್ಚ್ ೧೩, ೧೯೬೩ ರಂದು ಬೆಳಿಗ್ಗೆ ಶಿರೂರು ಮಠಾಧೀಶರಾದ ಶ್ರೀ ಲಕ್ಷ್ಮೀಂದ್ರ ತೀರ್ಥರು ಪರ್ಯಾಯು ಪೀಠಸ್ಥರಾಗಿರುವಾಗಲೇ ತೀವ್ರ ಹೃದಯಾಘಾತದಿಂದ ವೃಂದಾವನಸ್ಥರಾದರು. ಸೋದೆಮಠ ಶಿರೂರ ಮಠಗಳು ದ್ವಂದ ಮಠಗಳು. ಆದುದರಿಂದ ಸೋದೆಮಠಾಧೀಶರಾದ ವಿಶ್ವೋತ್ತಮತೀರ್ಥರಿಗೆ ಶಿರೂರಮಠದ ಉತ್ತರಾಧಿಕಾರಿ ನೇಮಕ ಹಾಗೂ ನೂತನ ಶ್ರೀಗಳು ಚಾತುರ್ಮಾಸ ಕಳೆಯುವವರೆಗೂ ಶ್ರೀಕೃಷ್ಣ ಪೂಜೆ ಮಾಡುವ ಜವಾಬ್ದಾರಿ ಹೆಗಲಿಗೆ ಬಿತ್ತು. ಆಗ ಶ್ರೀಗಳು ಶ್ರೀ ಲಕ್ಷ್ಮೀಂದ್ರ ತೀರ್ಥರ ಪೂರ್ವಾಶ್ರಮ ತಮ್ಮ

ಶ್ರೀ ವಿಠಲಾಚಾರ್ಯರ ಪುತ್ರ ಶ್ರೀ ರಾಜ ಗೋಪಾಲಾಚಾರ್ಯರಿಗೆ ಯತ್ಯಾಶ್ರಾಮ ನೀಡಿ, 'ಶ್ರೀ ಲಕ್ಷ್ಮೀಮನೋಜ್ಞ ತೀರ್ಥ' ಎಂದು ನಾಮಕರಣ ಮಾಡಿದರು. ಅವರು ಆ ವರ್ಷ ಚಾತುರ್ಮಾಸ ಕಳೆದು ಭಾದ್ರಪದ ಶುದ್ಧ ಪೌರ್ಣಿಮಿಗೆ (ಯತಿಗಳು ಒಂದು ಚಾತುರ್ಮಾಸ ಕಳೆಯದೆ, ಶ್ರೀಕೃಷ್ಣ ಸ್ಪರ್ಶ ಮಾಡುವಂತಿಲ್ಲ; ಇದು ಸಂಪ್ರದಾಯ. ಅಲ್ಲಿಯವರೆಗೆ ಶ್ರೀ ವಿಶ್ವೋತ್ತಮತೀರ್ಥರೆ ಆರು ತಿಂಗಳ ಕಾಲ ಶ್ರೀ ಕೃಷ್ಣನ ಮಹಾಪೂಜೆ ಮಾಡಿದರು. (ಇದು ವಿಶ್ವೋತ್ತಮತೀರ್ಥರಿಗೆ ಒದಗಿದ ಹೆಚ್ಚಿನ ಪರ್ಯಾಯ ಪೀಠ ಅಲಂಕರಿಸುವ ಯೋಗ)

**ಎರಡನೆಯ ಪರ್ಯಾಯ (೧೯೬೪–೬೫) :** ಈ ಪರ್ಯಾಯ ಕಾಲದಲ್ಲಿ ಕೋಟೇಶ್ವರ ಮಾಗಣಿಯ ಮುಖಂಡರಾದ ಶ್ರೀ ತೆಕ್ಕಟ್ಟೆ ರಾಮಚಂದ್ರಹತ್ವಾರ, ಶ್ರೀ ಅನಂತಯ್ಯಖಂಡೀರು ಹಾಗೂ ಹೊದ್ರಾಳಿಯ ಕುಪ್ಪಯ್ಯ ಭಟ್ಟರು ಮಾಗಣಿ ಬಂಧುಗಳಿಂದ ಹಣ ಸಂಗ್ರಹಿಸಿ ಶ್ರೀಗಳವರಿಗೆ ಸಮರ್ಪಿಸಿದರು. ಈ ಪರ್ಯಾಯ ಅವಧಿಯಲ್ಲಿ ಶ್ರೀಗಳು ಶ್ರೀ ಅನಂತಯ್ಯ ಖಂಡೀರರ ಮಗ ಸೀತಾರಾಮ ಖಂಡೀರರಿಗೆ ಪರ್ಯಾಯ ಮಠದ ಕೊಠಾರಿಯಾಗಿ ಕಾರ್ಯ ನಿರ್ವಹಿಸುವ ಅವಕಾಶ ನೀಡಿದ್ದರು.

**ಸೋದೆಯಲ್ಲಿ ಮಠದ ಜೀರ್ಣೋದ್ಧಾರ ಹಾಗೂ ಅಭಿವೃದ್ಧಿ ಕಾರ್ಯಗಳು :** ಶ್ರೀಗಳವರು ಉಡುಪಿ ಬಿಟ್ಟರೆ ಹೆಚ್ಚಾಗಿ ಸೋದೆಯಲ್ಲಿರುತ್ತಿದ್ದರು. ಪರ್ಯಾಯ ಅವಧಿ ಬಿಟ್ಟರೆ ಪ್ರತಿವರ್ಷ ಸೋದೆಯಲ್ಲಿ ಚಾತುರ್ಮಾಸ ಕೂಡುತ್ತಿದ್ದರು. ಶ್ರೀಗಳವರಿಗೆ ಉಡುಪಿ ಕ್ಷೇತ್ರದ ಜೊತೆಗೆ ಸೋದಾಕ್ಷೇತ್ರದ ಸಂಪೂರ್ಣ ಹೊಣೆಗಾರಿಕೆಯಿದೆ. ತ್ರಿವಿಕ್ರಮ ರಥೋತ್ಸವ, ವಾದಿರಾಜರ ಆರಾಧನೆ, ಲಕ್ಷದೀಪೋತ್ಸವ ಮುಂತಾದ ಸಂದರ್ಭದಲ್ಲಿ ಆಗಮಿಸುವ ವಿಶೇಷ ಭಕ್ತ ಸಮೂಹ ಹಾಗೂ ದಿನನಿತ್ಯ ಬರುವ ಭಕ್ತಾದಿಗಳ ಊಟ, ವಸತಿ ವ್ಯವಸ್ಥೆ ಮಾಡುವದು ಮಠದವರ ಹೊಣೆಗಾರಿಕೆಯಾಗಿದೆ.

ಐವತ್ತು ವರ್ಷಗಳ ಹಿಂದೆ ಸೋದೆಗೆ ಹೋಗಲು ಸರಿಯಾದ ವಾಹನ ಸೌಕರ್ಯವಿರಲಿಲ್ಲ. ಶಿರ್ಶಿಯಿಂದ ನಡೆದುಕೊಂಡು, ಇಲ್ಲವೆ ಎತ್ತಿನಗಾಡಿಯಲ್ಲಿ ಸೋದೆಗೆ ಪ್ರಯಾಣಿಸಬೇಕಾಗಿತ್ತು. ಆಗ ದಿನಕ್ಕೆ ಹತ್ತು ಹದಿನೈದು ಜನ ಬಂದರೆ ಹೆಚ್ಚು. ವಾಹನ ಸೌಕರ್ಯ ಸುಧಾರಣೆಯಾಗಲು, ವಾದಿರಾಜರ ಭಕ್ತರ ಸಂಖ್ಯೆ ವೃದ್ಧಿಯಾಗಲು ಹಾಗೂ ಭಕ್ತಾದಿಗಳ ಆರ್ಥಿಕ ಸ್ಥಿತಿ ಉತ್ತಮವಾದ ಕಾರಣ ದಿನದಿಂದ ದಿನಕ್ಕೆ ಯಾತ್ರಿಕರ ಸಂಖ್ಯೆ ಬೆಳೆಯತೊಡಗಿತು. ದಿನನಿತ್ಯವೇ ನೂರಾರು ಜನರು ಬರತೊಡಗಿದರು.

ಶತಮಾನಗಳ ಹಿಂದೆ ಸ್ಥಾಪಿಸಲ್ಪಟ್ಟ ಸೋದಾಕ್ಷೇತ್ರದ ಕಟ್ಟಡಗಳು ಕಾಲಾಘಾತದಿಂದ ಶಿಥಿಲವಾಗಿದ್ದುದರಿಂದ ಅವುಗಳನ್ನು ಜೀರ್ಣೋದ್ಧಾರ ಮಾಡಿಸುವ ಅಗತ್ಯವಿತ್ತು ಹಾಗೂ ಯಾತ್ರಿಕರ ಸಂಖ್ಯೆ ವೃದ್ಧಿಯಾದ ಕಾರಣ ಕಟ್ಟಡಗಳನ್ನು ವಿಸ್ತರಿಸುವ ಮತ್ತು ಸುಧಾರಿಸುವ ಅಗತ್ಯ ಹೆಚ್ಚಾಗಿದ್ದುದರಿಂದ ಶ್ರೀಗಳವರು ತಾವು ಅಧ್ಯಕ್ಷರಾಗಿ ಉಚ್ಚಿಲ ಅನಂತಭಟ್ಟರನ್ನು ಹಾಗೂ ಇನ್ನಿಬ್ಬರು ಸದಸ್ಯರಿಂದ ಕೂಡಿದ ಕಮಿಟಿಯನ್ನು ಎಪ್ಪತ್ತರ ದಶಕದಲ್ಲಿ ರಚಿಸಿ ಅದರ ಮೂಲಕ ರಮಾತ್ರಿವಿಕ್ರಮ ದೇವಸ್ಥಾನದ ಜೀರ್ಣೋದ್ಧಾರ, ಮಠದ ಎದುರಿಗೆ ತಗಡಿನ ಚಪ್ಪರ ನಿರ್ಮಾಣ, ಪೂಜಾಮಂದಿರದ ನವೀಕರಣ, ವೃಂದಾವನವನ್ನು ನಾಲ್ಕು ಕಡೆಯಿಂದಲೂ ದರ್ಶನ ಮಾಡುವ ಹಾಗೆ ಕಟ್ಟಡ ನಿರ್ಮಾಣ, ಭೂತರಾಜರ, ವೇದವ್ಯಾಸರ ಗುಡಿ ನವೀಕರಣ,

ಹಾಗೂ ಬಹು ಅತ್ಯಾವಶ್ಯಕವಾದ ನೀರಿನ ಹಾಗೂ ವಿದ್ಯುತ್ ವ್ಯವಸ್ಥೆಗಳನ್ನು ಭಕ್ತರ ಸಹಕಾರದಿಂದ ಮಾಡಿಸಿದರು.

ಕೋಟೇಶ್ವರ ಮಾಗಣೆ ಭಕ್ತರ ನೆರವಿನಿಂದ ಶ್ರೀ ಚಿತ್ರದುರ್ಗ ರಾಮಚಂದ್ರರಾಯರು, ಶ್ರೀ ಶಾಂತಾರಾಮರಾಯರ ನೇತೃತ್ವದಲ್ಲಿ ಸಮಿತಿ ರಚಿಸಿ ಸೋದಾಮಠದ ಹಿಂಭಾಗದಲ್ಲಿ ಕೆಳಭಾಗದಲ್ಲಿ ಭೋಜನಶಾಲೆ ಮೇಲ್ಭಾಗದಲ್ಲಿ ವಸತಿ ಕೋಣೆಗಳನ್ನು ಕಟ್ಟಿಸಿದರು.

ಈಗ ಐದಾರು ವರ್ಷಗಳ ಹಿಂದೆ ಹಳೆ ಸೋದಾ ಮಠದ ಹಿಂಭಾಗ ಅಳಿದು ಅಲ್ಲಿ ಹೊಸದಾಗಿ ಹಾಲ್ ಹಾಗೂ ವಸತಿಕೋಣೆಗಳನ್ನು ಕಟ್ಟಿಸಿರುತ್ತಾರೆ. ಈಗ ತ್ರಿವಿಕ್ರಮ ದೇವಸ್ಥಾನದ ಹಿಂಭಾಗದಲ್ಲಿ ನೂರಾರು ರೂಮ್‌ಗಳ ವಸತಿ ಸಮುಚ್ಚಯ ನಿರ್ಮಾಣಹಂತದಲ್ಲಿದೆ. (ಇದನ್ನು ಶ್ರೀ ವಿಶ್ವೋತ್ತಮತೀರ್ಥರ ವೃಂದಾವನ ಪ್ರವೇಶ ನಂತರ ನಿರ್ಮಾಣ ಮಾಡಲು ಪ್ರಾರಂಭಿಸಲಾಯಿತು) ಮಠದ ಹೊರಭಾಗದಲ್ಲಿ ನೆಲಕ್ಕೆ ಕಲ್ಲು ಹಾಸುವುದು, ಧವಳ ಗಂಗೆಯ ಸೋಪಾನವನ್ನು ದುರಸ್ತಿ ಮಾಡಿಸಿದರು. ತ್ರಿವಿಕ್ರಮ ದೇವಸ್ಥಾನದ ಸುತ್ತ ರಥೋತ್ಸವ ಸಾಂಗವಾಗಿ ನೆರವೇರಲು ಕಾಂಕ್ರಿಟ್ ರಸ್ತೆ ನಿರ್ಮಾಣ ಮುಂತಾದ ಕಾಮಗಾರಿಗಳನ್ನು ಮಾಡಿಸಿ ಯಾತ್ರಿಕರಿಗೆ ಯಾವ ತೊಂದರೆ ಯಾಗದಂತೆ ಸೌಕರ್ಯ ಕಲ್ಪಿಸಲಾಯಿತು. ಈ ಎಲ್ಲ ಕೆಲಸವಾಗಲು ಕೋಟೇಶ್ವರ ಮಾಗಣೆಯವರದು ಸಿಂಹಪಾಲು ಆರ್ಥಿಕ ಸಹಾಯವಿದೆ.

### ಲಕ್ಷಾಲಂಕಾರ ಪರ್ಯಾಯೋತ್ಸವ –
### ಶ್ರೀ ವಾದಿರಾಜೋತ್ಸವ ಸ್ಮೃತಿ ಸಂಪುಟದಿಂದ ಉದ್ಧೃತ

**ಜಾತ್ರೆಯ ಪೀಠಿಕೆ ಸರಮಾಲೆ**

೧೯೮೦ರ ಜನವರಿ ಉಡುಪಿಯ ಪಾಲಿಗೆ ಒಂದು ದೊಡ್ಡ ಪರ್ವಕಾಲವೆನಿಸಿತು. ಈ ತಿಂಗಳ ಎರಡನೇ ವಾರದ ಆರಂಭದಲ್ಲಿ ತೊಡಗಿದ ಜಾತ್ರೆಯ ಸಂಭ್ರಮ–ಉಲ್ಲಾಸ ಕ್ರಮೇಣ ಹೆಚ್ಚುತ್ತಾ ಬಂದು ತಿಂಗಳ ಕೊನೆಯಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿತು. ವರ್ಷಂ ಪ್ರತಿ ಜನವರಿ ತಿಂಗಳು ಕೃಷ್ಣನ ಉಡುಪಿಯ ಪಾಲಿಗೆ ಜಾತ್ರೆಯ ಮಾಸ. ಪರ್ಯಾಯದ ಜನವರಿಯಂತೂ ವಿಶೇಷ ಸಂಭ್ರಮದ ಕಾಲ. ೧೯೮೦ರ ಜನವರಿ ಈ ಎಲ್ಲ ಸಂಭ್ರಮ–ಸಡಗರವನ್ನು ಮೀರಿಸಿತು.

ಉಡುಪಿಯಲ್ಲಿ ನೆಲೆಸಿದ ಪೊಡವಿಗೊಡೆಯನ ಸನ್ನಿಧಿಯಲ್ಲಿ ನಡೆದ ಸಪ್ತೋತ್ಸವ, ಬಳಿಕ ನಡೆದ ಪರ್ಯಾಯ ಮಹೋತ್ಸವ, ಅದರ ಬೆನ್ನಲ್ಲೇ ಜರಗಿದ ಶ್ರೀ ವಾದಿರಾಜರ ಅವತಾರದ ಪಂಚ ಶತಾಬ್ಧೋತ್ಸವ ಉಡುಪಿಗೆ ಜಾತ್ರೆಯ ಸರಮಾಲೆಯನ್ನೇ ಪೋಣಿಸಿತು.

**ಶ್ರೀ ಸೋದೆ ಶ್ರೀಪಾದರ ತೃತೀಯ ಪರ್ಯಾಯ ಮಹೋತ್ಸವ ಒಂದು ವರದಿ ಶ್ರೀಪಾದರ ಪುರಪ್ರವೇಶ – ಜೋಡುಕಟ್ಟೆಯಲ್ಲಿ ಸ್ವಾಗತ**

ಶ್ರೀಸೋದೆ ವಾದಿರಾಜ ಮಠಾಧೀಶರಾದ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ ತೃತೀಯ ಪರ್ಯಾಯ ಪೀಠಾರೋಹಣ ಮಹೋತ್ಸವದ ಪ್ರಥಮ ಸಮಾರಂಭ ಜನವರಿ ೮ರಂದು ಶ್ರೀಪಾದರ ಪುರಪ್ರವೇಶದಿಂದ ಆರಂಭಗೊಂಡಿತು. ಸಂಪ್ರದಾಯದಂತೆ ದ್ರವ್ಯ ಮತ್ತು ಪುಣ್ಯಾರ್ಜನೆಗಾಗಿ ಪರ್ಯಾಯ ಪೂರ್ವಭಾವಿಯಾಗಿ ತೀರ್ಥಕ್ಷೇತ್ರ ಸಂಚಾರವನ್ನು

ಮುಗಿಸಿ ಉಡುಪಿಯ ದಕ್ಷಿಣ ದಿಕ್ಕಿನಿಂದ ಪಟ್ಟಣ ಪ್ರವೇಶಿಸಿದ ಶ್ರೀ ಸೋದೆ ಶ್ರೀಪಾದರನ್ನು ಪುರಪ್ರಮುಖರು, ಇತರ ನಾಗರಿಕರು, ಶ್ರೀ ಮಠದ ಅಧಿಕಾರಿ ವರ್ಗದವರು, ಊರ-ಪರವೂರ ಶಿಷ್ಯ ವೃಂದದವರು ಜೋಡುಕಟ್ಟೆಯ ಬಳಿ ಸಂಜೆ ಗಂಟೆ ೬ಕ್ಕೆ ಸಂಭ್ರಮದಿಂದ ಸ್ವಾಗತಿಸಿದರು.

**ಬೀದಿಯುದ್ದಕ್ಕೂ ಸಂಭ್ರಮ**

ಪುಷ್ಪಾಲಂಕೃತ – ವಿದ್ಯುದಲಂಕೃತ ವಾಹನದಲ್ಲಿ ಆಸೀನರಾದ ಶ್ರೀಪಾದರ ಮೆರವಣಿಗೆ ಕೋರ್ಟು ರಸ್ತೆ, ಕೊಳದ ಪೇಟೆ, ತೆಂಕಪೇಟೆಯಾಗಿ ರಥಬೀದಿಗೆ ನಿಧಾನವಾಗಿ ಸಾಗಿತು. ಶ್ರೀಪಾದರನ್ನು ಸ್ವಾಗತಿಸಲು ಹಾದಿಯ ಇಕ್ಕೆಲಗಳಲ್ಲಿ ಸಹಸ್ರಾರು ಮಂದಿ ಅಭಿಮಾನಿಗಳು ಸೇರಿದ್ದರು. ಜೋಡುಕಟ್ಟೆಯಿಂದ ರಥಬೀದಿಯವರೆಗಿನ ರಸ್ತೆಗಳನ್ನು ಆಸುಪಾಸಿನ ಮನೆ ಅಂಗಡಿಯವರು ತಳಿರುತೋರಣಗಳಿಂದ ವಿದ್ಯುತ್ ಸರಮಾಲೆಗಳಿಂದ ಅಲಂಕರಿಸಿದ್ದರು. ಶ್ರೀ ಸೋದೆ ಮಠದ ಗುರುಪರಂಪರೆಯ ಯತಿಗಳ ನಾಮಫಲಕಗಳನ್ನು ಹೊತ್ತ ಮಂಟಪಗಳು ದಾರಿಯುದ್ದಕ್ಕೂ ಕಂಗೊಳಿಸುತ್ತಿದ್ದವು.

**ಮೆರವಣಿಗೆಯ ವೈಭವ**

ಪುರಮೆರವಣಿಗೆಯ ಮುಂಭಾಗದಲ್ಲಿ ಉಡುಪಿ ಕೃಷ್ಣನ ಬಿಂಬ. ಶ್ರೀ ಸೋದೆ ಮಠದ ಪಟ್ಟದ ದೇವರಾದ ಶ್ರೀ ಭೂವರಾಹನ ಬಿಂಬ, ಶ್ರೀ ಮಧ್ವಾಚಾರ್ಯರ, ಶ್ರೀ ವಾದಿರಾಜರ ಭಾವಚಿತ್ರಗಳು ವಾಹನಗಳಲ್ಲಿ ಸಾಗುತ್ತಿದ್ದುವು. ವಾದ್ಯವೃಂದದ ಉಲಿತ, ಬಿರುದುಬಾವಲಿಗಳ ಶೃಂಗಾರ, ಬಿರುಸುಬಾಣಗಳ ವರ್ಣರಂಜಿತ ಶೋಭೆಯಿಂದ ಸಾಗುತ್ತಿದ್ದ ಮೆರವಣಿಗೆಯ ಹಾದಿಯುದ್ದಕ್ಕೂ ಶ್ರದ್ಧಾಳುಗಳು ಶ್ರೀ ಪಾದರಿಗೆ ಹಾರ-ಫಲಸಮರ್ಪಣೆ ಮಾಡಿ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಿದ್ದರು.

**ಶ್ರೀಕೃಷ್ಣ ಮಠ–ಶ್ರೀ ಮಠ ಪ್ರವೇಶ**

ಮೆರವಣಿಗೆ ರಥಬೀದಿ ಪ್ರವೇಶಿಸಿದ ಬಳಿಕ ಶ್ರೀಪಾದರು ಶ್ರೀ ಚಂದ್ರಮೌಳೀಶ್ವರ ಮತ್ತು ಶ್ರೀ ಅನಂತಾಸನ ದೇವರ ದರ್ಶನ ಮಾಡಿ ಶ್ರೀ ಕೃಷ್ಣ ಮಠವನ್ನು ಪ್ರವೇಶಿಸಿ ಅಲ್ಲಿ ಮಾಲಿಕೆ ಮಂಗಳಾರತಿ ಮುಗಿಸಿ, ಪರ್ಯಾಯಕ್ಕಾಗಿ ಹೊಸ ರೂಪವನ್ನು ಪಡೆದು ವಿದ್ಯುದಲಂಕೃತವಾಗಿ ಸಜ್ಜುಗೊಂಡು ನಿಂತಿರುವ ತಮ್ಮ ಮಠದ ಹೊರ ದ್ವಾರದಲ್ಲಿ ನವಗ್ರಹದಾನಾದಿಗಳನ್ನು ಮುಗಿಸಿ ಮಠವನ್ನು ಪ್ರವೇಶಿಸಿದರು.

**ನಾಗರಿಕ ಸಮ್ಮಾನ**

ಶ್ರೀ ಮಠ ಪ್ರವೇಶದ ಸಾಂಪ್ರದಾಯಿಕ ವಿಧಿಯನ್ನು ಮುಗಿಸಿದ ಶ್ರೀಪಾದರು ರಥಬೀದಿಯಲ್ಲಿ ತಮ್ಮ ಮಠದ ಎದುರಲ್ಲೇ ನಿರ್ಮಿಸಲಾದ ಶ್ರೀ ಪೂರ್ಣಪ್ರಜ್ಞ ಮಂಟಪಕ್ಕೆ ನಡೆದು ನಾಗರಿಕ ಸಮ್ಮಾನವನ್ನು ಸ್ವೀಕರಿಸಿದರು. ಪ್ರಸಕ್ತ ಪರ್ಯಾಯ ಪೀಠಾಧೀಶರಾದ ಶ್ರೀ ಶಿರೂರು ಮಠದ ಶ್ರೀ ಲಕ್ಷ್ಮೀವರತೀರ್ಥ ಶ್ರೀಪಾದರ ಅಧ್ಯಕ್ಷತೆಯಲ್ಲಿ ನಡೆದ ಈ ಸಮ್ಮಾನ ಸಮಾರಂಭದಲ್ಲಿ ಶ್ರೀ ಸೋದೆ ಶ್ರೀಪಾದರಿಗೆ ಸಂಘ ಸಂಸ್ಥೆಗಳ ವತಿಯಿಂದ ಅಭಿನಂದನ ಪತ್ರಗಳನ್ನು ಸಲ್ಲಿಸಲಾಯಿತು. ಉಭಯ ಶ್ರೀಪಾದರಿಗೆ ನಾಗರಿಕರಿಂದ. ಸಂಸ್ಥೆಗಳ ಪ್ರಮುಖರಿಂದ ಹಾರಾರ್ಪಣೆ ನಡೆಯಿತು.

ಅತ್ಯಂತ ಸಂಭ್ರಮಯುಕ್ತವಾಗಿ ನಡೆದ ಪುರಪ್ರವೇಶದ ಕಾರ್ಯಕ್ರಮ–ಆಕರ್ಷಕ ಪುರಮೆರವಣಿಗೆ ಮತ್ತು ಸಡಗರದ ಸಮ್ಮಾನ ಸಮಾರಂಭದೊಂದಿಗೆ ಪರ್ಯಾಯ ಮಹೋತ್ಸವಕ್ಕೆ ನಾಂದಿ ಹಾಡಿತು.

**ಸಪ್ತೋತ್ಸವದ ಬೀದಿಯ ಸಡಗರ**

ಮಾರನೆಯ ದಿನದಿಂದ–ಜನವರಿ ೯ರಿಂದ ಪ್ರಸಕ್ತ ಪರ್ಯಾಯ ಪೀಠಸ್ಥ ಶ್ರೀ ಶಿರೂರು ಮಠದ ವತಿಯಿಂದ ಶ್ರೀಕೃಷ್ಣನಿಗೆ ಸಪ್ತೋತ್ಸವ; ದಿನಾಂಕ ೧೪ರಂದು ಮಕರ ಸಂಕ್ರಮಣ ಜಾತ್ರೆ; ಅದರ ಮಾರನೆಯ ದಿನ ಚೂರ್ಣೋತ್ಸವ. ಸಪ್ತೋತ್ಸವದ ಎಲ್ಲಾ ಕಾರ್ಯ ಕ್ರಮಗಳು ಸಂಭ್ರಮಯುಕ್ತವಾಗಿ ನಡೆದುವು.

ಸಪ್ತೋತ್ಸವ–ಪರ್ಯಾಯೋತ್ಸವದಲ್ಲಿ ಪಾಲ್ಗೊಳ್ಳಲು ಪರವೂರುಗಳಿಂದ ದಿನಂಪ್ರತಿ ಬರುತ್ತಿದ್ದ ಯಾತ್ರಾರ್ಥಿಗಳಿಗೆ, ಶ್ರೀ ಸೋದೆ ಮಠದ ಶಿಷ್ಯವರ್ಗದವರಿಗೆ ಮತ್ತಿತರ ಭಕ್ತಭಾವುಕರಿಗೆ ವಸತಿಸೌಕರ್ಯದೊಂದಿಗೆ ಭೋಜನ ವ್ಯವಸ್ಥೆಯನ್ನು ಸಮರ್ಪಕವಾಗಿ ಏರ್ಪಡಿಸಲಾಗಿತ್ತು.

ಶ್ರೀ ಸೋದೆ ಶ್ರೀಪಾದರು ತಮ್ಮ ನಿತ್ಯ ಪೂಜಾಹ್ನಿಕಗಳೊಂದಿಗೆ ದಿನಂಪ್ರತಿ ಹತ್ತಾರು ಕಡೆ ಪಾದಪೂಜೆ ಸ್ವೀಕರಿಸಲು ಭಕ್ತಾದಿಗಳು ಬೇಡಿಕೆಯ ಮೇರೆಗೆ ಧಾವಿಸುತ್ತಿದ್ದಂತೆ ಪರವೂರುಗಳಿಂದ ಬರುತ್ತಿದ್ದ ಯಾತ್ರಾರ್ಥಿಗಳಿಗೆ ದರ್ಶನ ನೀಡಲು ಸಮಯ ವ್ಯವಧಾನ ಪಡೆಯುತ್ತಿದ್ದರು.

**ರಥಬೀದಿಯ ಪರಿಸರದಲ್ಲಿ ಹಗಲು ಹೊತ್ತು ರಾತ್ರಿಯ ಉತ್ಸವದಷ್ಟೇ ಸಂಭ್ರಮದ ವಾತಾವರಣ :** ಪರ್ಯಾಯ ಪೀಠಾರೂಢರಾಗುವ ಮತ್ತು ಪರ್ಯಾಯ ಬಿಟ್ಟೇಳುವ ಮಠಗಳಿಂದ ಇತರ ಮಠಗಳಿಗೆ ಒಲಿಪೆ (ಅಕ್ಕಿ ಇತರ ಧವಸ ಧಾನ್ಯಗಳು) ಕಳಿಸಿ ಕೊಡುವ ಮೆರವಣಿಗೆ; ಪರ್ಯಾಯೋತ್ಸವಕ್ಕಾಗಿ ರಾಯಸ ಕಳಿಸಿಕೊಡುವ, ಹೇಳಿಕೆಕೊಡುವ ಸಂಭ್ರಮ; ಬೆಡಗಿನ ಉಡುಪನ್ನು ಧರಿಸಿ ಕಟಿಗೋಲನ್ನು ಹಿಡಿದ ಬಾಲಯೋಧರನ್ನು ಮುಂದುಮಾಡಿ, ಹಿಂದಿನಿಂದ ಹಿಂಡು ಹಿಂಡಾಗಿ ಬೆಂಬತ್ತಿ ಬರುತ್ತಿರುವ ಊರ–ಪರವೂರ ಅಭಿಮಾನಿಗಳಿಂದ ಕೂಡಿಕೊಂಡು ರಾಜ ಠೀವಿಯಲ್ಲಿ ಸಾಗುವ ಪರ್ಯಾಯ ಶ್ರೀಪಾದರ ಸಂಭ್ರಮ; ಪೇಟೆ ಬೀದಿಗಳನ್ನು, ಮನೆ ಮಠ ಅಂಗಡಿಗಳನ್ನು ತುಂಬಿ ನಿಂತಿರುವ ಯಾತ್ರಿಕರ ಗೌಜಿಗದ್ದಲ. ಹೆಜ್ಜೆ ಹೆಜ್ಜೆಗೂ, ಪ್ರತಿ ನಿಮಿಷಕ್ಕೂ ಚಟುವಟಿಕೆಯನ್ನು ತೋರಿಸುವ ಸಪ್ತೋತ್ಸವದ ರಥಬೀದಿ ಶ್ರೀಪಾದರ ಪುರಪ್ರವೇಶ ಮೊದಲ್ಗೊಂಡು ಪರ್ಯಾಯ ಮಹೋತ್ಸವದವರೆಗೆ ರಾಜಬೀದಿಯಾಗಿ ಮಾರ್ಪಟ್ಟಿತು.

**ಹಸಿರುವಾಣಿ ಹೊರೆ ಕಾಣಿಕೆ**

ಜಾತ್ರೆಯ ಸಂಭ್ರಮ–ವೈಭವ–ಉಲ್ಲಾಸ ರಥ ಬೀದಿಗಳಷ್ಟೇ ಸೀಮಿತವಾಗದಂತೆ ಅದನ್ನು ಊರಿಡೀ ವ್ಯಾಪಿಸುವಂತೆ ಮಾಡಿತು ಹಸಿರುವಾಣಿ ಹೊರೆ ಕಾಣಿಕೆ ಸಲ್ಲಿಸುವ ಮೆರವಣಿಗೆ.

**ಸಾಲು ಸಾಲು ಮೆರವಣಿಗೆ**

ಇಂತಹ ಮೆರವಣಿಗೆ ಒಂದಲ್ಲ, ಎರಡಲ್ಲ, ಲೆಕ್ಕವಿಲ್ಲದಷ್ಟು ನಡೆದವು. ದಿನಂಪ್ರತಿ ಸಂಜೆ ಹೊರೆ ಕಾಣಿಕೆ ಸಲ್ಲಿಸುವ ಮೆರವಣಿಗೆ ಊರಿನ ಬೇರೆ ಬೇರೆ ಬೀದಿಗಳನ್ನು ಹಾದು ರಥಬೀದಿಗೆ

ಸಾಗುತ್ತಿತ್ತು. ಶ್ರೀ ಮಠದ ಶಿಷ್ಯವೃಂದದವರು, ಶ್ರೀಕೃಷ್ಣನ ಸೇವಕರು, ಇತರ ಅಭಿಮಾನಿಗಳು ತಾವು ಸಾಮೂಹಿಕವಾಗಿ ಸಂಗ್ರಹಿಸಿದ ಹಸಿರುವಾಣಿ, ಅಕ್ಕಿ ಬೇಳೆ ಮೊದಲಾದ ವಸ್ತುಗಳನ್ನು ಪರ್ಯಾಯ ಮಠಕ್ಕೆ ಕಳಿಸಿಕೊಡುವ ಸಂಪ್ರದಾಯ ಹಿಂದಿನಿಂದಲೂ ಇದೆ. ಇತ್ತೀಚಿನ ವರ್ಷಗಳಲ್ಲಿ ಈ ರೀತಿಯ ಕಾಣಿಕೆ ಸಲ್ಲಿಸುವ ಭಕ್ತಾದಿ ಅಭಿಮಾನಿಗಳ ಸಂಖ್ಯೆ ಹೆಚ್ಚುತ್ತಿದ್ದು ಶ್ರೀ ಸೋದೆ ಶ್ರೀಪಾದರ ಪರ್ಯಾಯಕ್ಕಾಗಿ ಈ ಬಗೆಯಲ್ಲಿ ಸಲ್ಲಿಸಿದವರ ಸಂಖ್ಯೆ ಪ್ರಾಯಶಃ ಹಿಂದಿನ ಎಲ್ಲಾ ಪರ್ಯಾಯಗಳಿಗಿಂತಲೂ ಹೆಚ್ಚಿತ್ತೆಂದರೆ ತಪ್ಪಿಲ್ಲ. ಹೊರೆ ಕಾಣಿಕೆ ಸಲ್ಲಿಸುವ ಮೆರವಣಿಗೆಗಳ ಉದ್ದಕ್ಕೂ ಹಸಿರುವಾಣಿ, ಅಕ್ಕಿ ಬೇಳೆಗಳನ್ನು ತುಂಬಿಕೊಂಡು ಸಾಗುವ ಪದಾತಿಗಳು; ಆನೆ-ತಟ್ಟಿರಾಯ-ವಾದ್ಯವಾಲಗ-ಬಿರುದಾವಳಿಗಳು; ಇದಕ್ಕೂ ಹೆಚ್ಚಿನ ಎಷ್ಟೋ ಅನೇಕ ಆಕರ್ಷಣೆಗಳು ಮೆರವಣಿಗೆಗೆ ಕಳೆಯೇರಿಸಿದವು.

### ಪರ್ಯಾಯ ಬಿಟ್ಟೇಳುವ ಶ್ರೀಪಾದರಿಗೆ ಅಭಿನಂದನ

ತಮ್ಮ ಕಿರುವಯಸ್ಸಿನಲ್ಲೇ ಪ್ರಥಮ ಪರ್ಯಾಯವನ್ನು ಯಶಸ್ವಿಯಾಗಿ ನೆರವೇರಿಸಿ ಶ್ರೀಕೃಷ್ಣ-ಮುಖ್ಯ ಪ್ರಾಣ-ಮಧ್ವರ ಅನುಗ್ರಹಕ್ಕೂ, ಸಾರ್ವಜನಿಕರ ಭಕ್ತಿ ಗೌರವಗಳಿಗೂ ಪಾತ್ರರಾದ ಶ್ರೀ ಶಿರೂರು ಮಠಾಧೀಶರಾದ ಶ್ರೀ ಲಕ್ಷ್ಮೀವರತೀರ್ಥ ಶ್ರೀ ಪಾದರನ್ನು ಜನವರಿ ೧೭ರಂದು ಸಂಜೆ ರಥಬೀದಿಯ ಶ್ರೀ ಪೂರ್ಣಪ್ರಜ್ಞ ಮಂಟಪದಲ್ಲಿ ಸಾರ್ವಜನಿಕ ನೆಲೆಯಲ್ಲಿ ಅಭಿನಂದಿಸಲಾಯಿತು. ಶ್ರೀ ಸೋದೆ ವಾದಿರಾಜ ಮಠಾಧೀಶರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಉಭಯ ಶ್ರೀ ಪಾದರಿಗೆ ಸಂಘ ಸಂಸ್ಥೆಗಳಿಂದ, ನಾಗರಿಕರಿಂದ ಹಾರಾರ್ಪಣೆಯಾಯಿತು. ತಮ್ಮ ಪರ್ಯಾಯವನ್ನು ಸಂಭ್ರಮದಿಂದ ನೆರವೇರಿಸಿದ ಶ್ರೀ ಶಿರೂರು ಶ್ರೀಪಾದರಿಗೆ ನಾಗರಿಕರ ಪರವಾಗಿ ಅಭಿನಂದನ ಪತ್ರವನ್ನು ಸಲ್ಲಿಸಲಾಯಿತು.

### ಬ್ರಹ್ಮೋತ್ಸವದ ಬಳಿಕ ಯಕ್ಷಗಾನ

ಪರ್ಯಾಯ ಬಿಟ್ಟೇಳುವ ಶ್ರೀ ಶಿರೂರು ಶ್ರೀ ಪಾದರಿಂದ ಶ್ರೀಕೃಷ್ಣನಿಗೆ ತಮ್ಮ ಪರ್ಯಾಯಾವಧಿಯ ಕೊನೆಯ ಬ್ರಹ್ಮೋತ್ಸವ ಸೇವೆ ನಡೆದ ಬಳಿಕ ಶ್ರೀ ಸೋದೆ ವಾದಿರಾಜ ಮಠದ ಶಿಷ್ಯವೃಂದದವರಾದ ದೈವಜ್ಞ ಬ್ರಾಹ್ಮಣ ಸಮಾಜದ ಉತ್ಸಾಹೀ ಕಾರ್ಯಕರ್ತರ ನೆರವಿನಿಂದ ಯಕ್ಷಗಾನ ಬಯಲಾಟ ಪ್ರದರ್ಶನ ಮುಂಜಾವಿನವರೆಗೆ ನಡೆಯಿತು. ಮುಂಜಾವಿನಲ್ಲೇ ಪರ್ಯಾಯೋತ್ಸವದ ಸಮಾರಂಭ ನಡೆಯಲಿರುವುದರಿಂದ ಊರ ಪರವೂರ ಸಾವಿರಾರು ಮಂದಿಗೆ ಈ ಸಾಂಸ್ಕೃತಿಕ ಕಾರ್ಯಕ್ರಮವನ್ನು ವೀಕ್ಷಿಸಲು ಅವಕಾಶ ದೊರೆಯಿತು.

### ಪರ್ಯಾಯ ಮೆರವಣಿಗೆ

ಜನವರಿ ೧೮ರಂದು ಉಷಃಕಾಲ ಗಂಟೆ ೪ಕ್ಕೆ ಉಡುಪಿಯ ಜೋಡುಕಟ್ಟೆಯಿಂದ ಹೊರಟ ಪರ್ಯಾಯ ಮೆರವಣಿಗೆಯಲ್ಲಿ ಪರ್ಯಾಯ ಪೀಠಾರೂಢರಾಗಲಿರುವ ಶ್ರೀ ಸೋದೆ ಶ್ರೀಪಾದರನ್ನು ಮುಂದುಮಾಡಿಕೊಂಡು ಇತರ ಶ್ರೀ ಪಾದರುಗಳು ಅಲಂಕೃತ ಮೇನೆಗಳಲ್ಲಿ ಕುಳಿತು ರಥಬೀದಿಗೆ ಸಾಗಿದರು. ಮೆರವಣಿಗೆಯ ಹಾದಿಯನ್ನು ನಾಗರಿಕರು ವಿದ್ಯುದ್ದೀಪಗಳಿಂದ ಅಲಂಕರಿಸಿ ಪರ್ಯಾಯೋತ್ಸವದಲ್ಲಿ ತಾವು ಪೂರ್ತಿ ಭಾಗಿಗಳೆಂದು ತೋರಿಸಿದರು. ವಿದ್ಯುದ್ದೀಪಗಳ ಪ್ರಖರತೆ ಹಗಲು ಬೆಳಕನ್ನು ಮೀರಿಸುವಂತಿತ್ತು. ರಾತ್ರಿಯಿಡೀ ಹಿಂಡು ಗಟ್ಟಿ ಜನರು ಊರ ಬೇರೆ ಬೇರೆ ಹಾದಿ ಬೀದಿಗಳಿಂದ ಜೋಡುಕಟ್ಟೆಯೆಡೆಗೂ

ರಥಬೀದಿಯ ಕಡೆಗೂ ಅಲ್ಲಿಂದ ಮೆರವಣಿಗೆ ವೀಕ್ಷಿಸಲು ಅನುವಾಗುವ ಆಯಕಟ್ಟಿನ ಜಾಗದೆಡೆಗೂ ತವಕದಿಂದ ಧಾವಿಸುತ್ತಿದ್ದರು.

### ಮೆರವಣಿಗೆಯ ಬೆಡಗು

ಮೆರವಣಿಗೆಯ ಮುಂದುಗಡೆ ಆನೆ, ನಾಲ್ಕಾರು ಜತೆ ತಟ್ಟಿರಾಯ, ಬ್ಯಾಂಡು-ವಾಲಗ, ಚಂಡೆ-ಕೊಂಬು ಕಹಳೆ ಊದುವವರು ಸಾಗುತ್ತಿದ್ದಂತೆ ಹಿಂದುಗಡೆ ಟ್ಯಾಬ್ಲೊಗಳ ಸಾಲು ಸಾಲುಗಳು. ಗೋವರ್ಧನ ಗಿರಿಧಾರಿ, ವಾಲಿ-ಸುಗ್ರೀವ ಕದನ, ಸೀತಾಪಹರಣ, ಕೃಷ್ಣ-ಕುಚೇಲ, ಕೃಷ್ಣ-ಕನಕದಾಸ, ರಾಸಲೀಲೆ, ಪ್ರಹ್ಲಾದ ಚರಿತ್ರೆ, ಸೀತಾವನವಾಸ, ಶೇಷಶಾಯಿ ಶ್ರೀಮನ್ನಾರಾಯಣ, ಪಾರ್ಥಸಾರಥಿ ಮೊದಲಾದ ಸುಂದರ ದೃಶ್ಯಗಳನ್ನು ಬಿಂಬಿಸುವ ರೂಪಕದೃಶ್ಯಗಳು (ಟ್ಯಾಬ್ಲೊ) ಅಲಂಕೃತ ವಾಹನಗಳಲ್ಲಿ ವಿದ್ಯುದ್ದೀಪಗಳ ಬೆಳಕಿನಲ್ಲಿ ಸಾಗುತ್ತಿದ್ದುವು.

ಟ್ಯಾಬ್ಲೊಗಳ ಹಿಂದುಗಡೆ ಶ್ರೀಕೃಷ್ಣ, ಶ್ರೀ ಭೂವರಾಹ, ಹನುಮ-ಭೀಮ-ಮಧ್ವ, ಶ್ರೀವಾದಿರಾಜರು, ಶ್ರೀ ವಿಶ್ವೇಂದ್ರತೀರ್ಥರ ಬಿಂಬಗಳು ಶೃಂಗರಿಸಿದ ವಾಹನಗಳಲ್ಲಿ ಸಾಗುತ್ತಿದ್ದುವು. ಇವುಗಳ ಹಿಂದೆ ಮೂರು ನಡೆ ಚಪ್ಪರಗಳಲ್ಲಿರಿಸಿದ ಪಾಲಕಿ, ಮಂಟಪಗಳಲ್ಲಿ ಶ್ರೀ ಮಠದ ಪಟ್ಟದ ದೇವರು, ಶ್ರೀ ವಾದಿರಾಜರು ಮತ್ತು ಶ್ರೀ ಭೂತರಾಜರನ್ನು ಹೊತ್ತು ಮೆರವಣಿಗೆ ಸಾಗುತ್ತಿತ್ತು. ಪುಷ್ಪ-ವಿದ್ಯುತ್ ಅಲಂಕಾರದಿಂದ ಶೋಭಿಸುತ್ತಿದ್ದ ನಡೆಚಪ್ಪರಗಳ ಹಿಂದುಗಡೆ ಪರ್ಯಾಯ ಪೀಠಾರೂಢರಾಗಲಿರುವ ಶ್ರೀ ಸೋದೆ ಶ್ರೀಪಾದರು ಹಾಗೂ ಇತರ ಅಷ್ಟ ಮಠಾಧೀಶರು ಅಲಂಕೃತ ಮೇನೆಗಳಲ್ಲಿ ಆಸೀನರಾಗಿ ಸಾಗುತ್ತಿದ್ದರು. ಹಾದಿಯ ಇಕ್ಕೆಲಗಳಲ್ಲಿ ಸಹಸ್ರಾರು ಜನರು ಈ ದೃಶ್ಯವನ್ನು ಭಯಭಕ್ತಿಯಿಂದ, ಕುತೂಹಲದಿಂದ ವೀಕ್ಷಿಸಿದರು. ತಮ್ಮ ಚಿತ್ತವನ್ನು ಆಕರ್ಷಿಸಿದ ಈ ವೈಭವೋಪೇತ ಮೆರವಣಿಗೆಯ ವೀಕ್ಷಣೆಯಿಂದ ಭಾವುಕರು ಆನಂದ ಹೊಂದಿದರು.

### ಶ್ರೀಕೃಷ್ಣ ಸನ್ನಿಧಿಯಲ್ಲಿ ಪರ್ಯಾಯದ ವಿಧ್ಯುಕ್ತಕ್ರಿಯೆ

ಪರ್ಯಾಯ ಮೆರವಣಿಗೆ ರಥಬೀದಿಗೆ ತಲುಪಿ ಶ್ರೀ ಪಾದಂಗಳವರು ಮೇನೆಗಳಿಂದ ಇಳಿದು ಬೀದಿಯ ಅರ್ಧಸುತ್ತು ಶ್ವೇತವಸ್ತ್ರದ ಮೇಲೆ ಪಾದಚಾರಿಗಳಾಗಿ ಸಾಗಿಕಟ್ಟಾಂಜರದಲ್ಲಿ ಕನಕನಕಿಂಡಿಯ ಮೂಲಕ ಶ್ರೀಕೃಷ್ಣನ ಧೂಳಿದರ್ಶನ ಪಡೆದು, ಅಲ್ಲಿ ನವಗ್ರಹದಾನಾದಿಗಳನ್ನು ಮಾಡಿ, ಶ್ರೀ ಚಂದ್ರಮೌಳೀಶ್ವರ ಮತ್ತು ಶ್ರೀ ಅನಂತಾಸನ ದೇವರ ದರ್ಶನಪಡೆದು ಶ್ರೀ ಕೃಷ್ಣ ಮಠದ ಮುಖ್ಯದ್ವಾರದಲ್ಲಿ ಪರ್ಯಾಯ ಬಿಟ್ಟೇಳುವ ಶ್ರೀ ಶಿರೂರು ಶ್ರೀಪಾದರಿಂದ ಹಸ್ತಲಾಘವ ಪಡೆದು ಮಧ್ವಸರೋವರಕ್ಕೆ ಹೋಗಿ ಜಲಪ್ರೋಕ್ಷಣೆ ಮಾಡಿ ಶ್ರೀಕೃಷ್ಣನ ಗುಡಿ ಹೊಕ್ಕಿ, ಅಲ್ಲಿ ದೇವರಿಗೆ ಮಂಗಳಾರತಿ ನಡೆಸಿ, ಶ್ರೀ ಮಧ್ವಾಚಾರ್ಯರ ವಿಗ್ರಹದ ಮುಂದುಗಡೆ ಪೂಜಾಧಿಕಾರ ಹಸ್ತಾಂತರದ ಸಂಕೇತವಾಗಿ ಶ್ರೀ ಶಿರೂರು ಶ್ರೀಪಾದರಿಂದ ಅಕ್ಷಯಪಾತ್ರೆಯನ್ನು ಸ್ವೀಕರಿಸಿ, ಶ್ರೀ ಮಧ್ವಸಿಂಹಾಸನವನ್ನೇರಿ ಪರ್ಯಾಯ ಸಂಪ್ರದಾಯದ ವಿಧ್ಯುಕ್ತ ಕ್ರಿಯೆಯನ್ನು ನೆರವೇರಿಸಿದರು.

ಅಲ್ಲಿಂದ ಶ್ರೀ ಸೋದೆ ಶ್ರೀಪಾದರು ಇತರ ಶ್ರೀ ಪಾದರೊಂದಿಗೆ ಬಡುಗುಮಾಳಿಗೆಗೆ ಆಗಮಿಸಿ ಅರಳು ಗದ್ದುಗೆಯ ಮೇಲೆ ಎಲ್ಲಾ ಶ್ರೀಪಾದರೊಂದಿಗೆ ಆಸೀನರಾಗಿ ಗಂಧಾದ್ಯುಪಚಾರವನ್ನು ಮುಗಿಸಿ ರಾಜಾಂಗಣಕ್ಕೆ ನಡೆದು ಅಲ್ಲಿ ಹಾಸಿದ ಅರಳು ಗದ್ದುಗೆಯ

ಮೇಲೆ ಇತರ ಶ್ರೀಪಾದರೊಂದಿಗೆ ಆಸೀನರಾಗಿ ಪರ್ಯಾಯ ದರ್ಬಾರು ಸಭೆಯನ್ನು ವೈಭವದಿಂದ ನಡೆಸಿದರು.

**ಪರ್ಯಾಯ ದರ್ಬಾರು ಸಭೆ**

ಎಂಟು ಸಹಸ್ರ ಮಂದಿ ಕುಳಿತುಕೊಳ್ಳಲು ಅನುವಾಗುವಂತೆ ರಾಜಾಂಗಣದಲ್ಲಿ ಚಪ್ಪರವನ್ನು ನಿರ್ಮಿಸಿದ್ದು 'ಶ್ರೀ ವಾದಿರಾಜ ಮಂಟಪ' ನಾಮಾಂಕಿತ ಈ ನಿವೇಶನವನ್ನು ಚಿತ್ತಾಕರ್ಷಕವಾಗಿ ಅಲಂಕರಿಸಲಾಗಿತ್ತು. ವಿದ್ವಾಂಸರು, ಶ್ರೀ ಮಠದ ಶಿಷ್ಯವೃಂದದವರು, ಸ್ವಾಗತ ಸಮಿತಿಯ ಸದಸ್ಯರು, ಸರಕಾರೀ ಅಧಿಕಾರಿಗಳು ಮತ್ತಿತರ ಪ್ರಮುಖರು, ಇತರ ಭಕ್ತಾಭಿಮಾನಿಗಳು ಪ್ರತ್ಯೇಕವಾಗಿ ಆಸೀನರಾಗಲು ವ್ಯವಸ್ಥೆ ಮಾಡಲಾಗಿತ್ತು. ಶ್ರೀಕೃಷ್ಣ ಧರ್ಮಛತ್ರದ ಮುಂದುಗಡೆ ನಿರ್ಮಿಸಲಾದ ಪುಷ್ಪಾಲಂಕೃತ ವೇದಿಕೆಯ ಮೇಲೆ ಹಾಸಿದ ಅರಳು ಗದ್ದುಗೆಯ ಹಿಂದುಗಡೆ ಶ್ರೀಕೃಷ್ಣ, ಶ್ರೀಮಧ್ವ, ಶ್ರೀವಾದಿರಾಜರ ಬಿಂಬಗಳು ಅಲಂಕರಿಸಿದ್ದುವು. ಅರಳುಗದ್ದುಗೆಯಲ್ಲಿ ಪರ್ಯಾಯ ಪೀಠಾರೂಢರಾದ ಶ್ರೀ ಸೋದೆ ಶ್ರೀಪಾದರೊಂದಿಗೆ ಶ್ರೀ ಕಾಣಿಯೂರು, ಶ್ರೀ ಕೃಷ್ಣಾಪುರ ಮತ್ತು ಶ್ರೀ ಶಿರೂರು ಮಠಾಧೀಶರು ಆಸೀನರಾಗಿದ್ದರು.

**ಸಾಂಸ್ಕೃತಿಕ ಮೌಲ್ಯದ ಸಭಾ ಕಲಾಪ**

ವೇದಘೋಷದೊಂದಿಗೆ ಆರಂಭವಾದ ದರ್ಬಾರು ಸಭೆಯಲ್ಲಿ ಪಂಡಿತರನ್ನೂ ಸಮಾಜ ಪ್ರಮುಖರನ್ನೂ ಪ್ರಶಸ್ತಿಪತ್ರ ಸಹಿತ ಪರ್ಯಾಯ ಪೀಠದಿಂದ ಸಮ್ಮಾನಿಸಲಾಯಿತು. ಉಪಸ್ಥಿತರಿದ್ದ ಶ್ರೀಪಾದರುಗಳಿಂದ ಅನುಗ್ರಹ ಭಾಷಣ, ಆಸ್ಥಾನ ವಿದ್ವಾಂಸರ ಯಾದಿ ಪ್ರಕಟಣೆ ಶ್ರೀಕೃಷ್ಣ ಮಠದ ಅಧಿಕಾರಿ ವರ್ಗದ ಘೋಷಣೆಯೊಂದಿಗೆ ಪರ್ಯಾಯ ಪೀಠಾರೂಢರಾದ ಶ್ರೀಪಾದರಿಗೆ ಭಕ್ತಭಾವುಕರಿಂದ ಪಟ್ಟಕಾಣಿಕೆ ಸಲ್ಲಿಸಲಾಯಿತು. ದರ್ಬಾರು ಸಭೆಯ ಮೇಲಿನ ಕಾರ್ಯಕಲಾಪಗಳ ನಡುವೆ ಭಗವದ್ಗೀತಾ ಪಠಣ, ಕೊಳಲುವಾದನ, ದ್ವಾದಶ ಸ್ತೋತ್ರ ಪಠಣ, ಶ್ರೀವಾದಿರಾಜ ಕೀರ್ತನ, ಶ್ರೀವಾದಿರಾಜಕೃತ ತುಳಸೀ ಸಂಕೀರ್ತನ, ಸಿಂಹನೃತ್ಯ, ಯಕ್ಷಗಾನ ಒಡ್ಡೋಲಗ ಮೊದಲಾದ ಸಾಂಸ್ಕೃತಿಕ ಮೌಲ್ಯವುಳ್ಳ ಕಾರ್ಯಕ್ರಮಗಳು ಚುಟುಕಾಗಿ, ರಸವತ್ತಾಗಿ ಜರಗಿದುವು.

ಮಧ್ಯಾಹ್ನ ಶ್ರೀಕೃಷ್ಣನಿಗೆ ಮಹಾಪೂಜೆ, ಮಹಾಸಂತರ್ಪಣೆ ನಡೆದು ರಾತ್ರಿ ಪೂಜೆಯ ಬಳಿಕ ಬ್ರಹ್ಮೋತ್ಸವ ವಿಜೃಂಭಣೆಯಿಂದ ನಡೆದು ಪರ್ಯಾಯ ಪೀಠಾರೋಹಣ ಮಹೋತ್ಸವವು ಕೊನೆಗೊಂಡಿತು.

ಪರ್ಯಾಯ ದರ್ಬಾರು ಸಭೆಯಲ್ಲಿ ಪರ್ಯಾಯ ಪೀಠದಿಂದ ಸನ್ಮಾನಿತರಾದ ಪಂಡಿತರು ಮತ್ತು ಸಮಾಜ ಪ್ರಮುಖರು.

| ಪಂಡಿತರು | ಪ್ರಶಸ್ತಿ |
| --- | --- |
| ೧ ಮಂತ್ರಾಲಯದ ಶ್ರೀ ರಾಜಾ ಎಸ್. ಗಿರಿಯಾಚಾರ್ | ಪಂಡಿತ ಕೇಸರಿ |
| ೨ ಅಗ್ನಿಹೋತ್ರಿ ಶ್ರೀ ಅಲೆವೂರು ಸೀತಾರಾಮಾಚಾರ್ಯ | ಪಂಡಿತರತ್ನ |
| ೩ ಮೈಸೂರು ಶ್ರೀ ಎಚ್ ಸುಬ್ಬರಾವ್ | ವಾದಿರಾಜ ಸೇವಾಧುರಂಧರ |

| ಸಮಾಜ ಪ್ರಮುಖರು | ಪ್ರಶಸ್ತಿ |
|---|---|
| ೧ ಶ್ರೀ ಕಡಂದಲೆ ಕೃಷ್ಣಭಟ್ಟ, ಮದರಾಸು | ಕೃಷ್ಣ ಸೇವಾ ದುರಂಧರ |
| ೨ ಶ್ರೀ ತೆಕ್ಕಟ್ಟೆ ರಾಮಚಂದ್ರ, ಹತ್ವಾರ | ಗುರುಸೇವಾ ತತ್ಪರ |
| ೩ ಶ್ರೀ ರಾಮೇಶ್ವರ ನಾರಾಯಣ ತಳೆಬೈಲ್‌ಕರ, ಬೆಳಗಾವಿ | ಹಯಗ್ರೀವ ಸೇವಾಗ್ರಣಿ |
| ೪ ಶ್ರೀಮಟ್ಟಿ ಅನಂತಯ್ಯ, ಕುಂದಾಪುರ | ಸಮಾಜ ಸೇವಾ ಧುರೀಣ |
| ೫ ಶ್ರೀ ಉಚ್ಚಿಲ ಅನಂತಕೃಷ್ಣ ಭಟ್ಟ, ಹುಬ್ಬಳ್ಳಿ | ವಾದಿರಾಜ ಸೇವಾ ಧುರೀಣ |
| ೬ ಶ್ರೀರಂಗಪ್ಪ ಪಾಂಡುರಂಗ ಕಾಮತ, ಹುಬ್ಬಳ್ಳಿ | ಸಮಾಜ ರತ್ನ |

**ಪರ್ಯಾಯ ದರ್ಬಾರು ಸಭೆಯ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಪಾಲ್ಗೊಂಡವರು :**

ಕುಮಾರಿ ಚೇತನಾ, ಸಂಸ್ಕೃತ ಪಾಠಶಾಲೆಯ ವಿದ್ಯಾರ್ಥಿಗಳು, ಕುಮಾರಿ ವೀಣಾಪೇಜತ್ತಾಯ ಶ್ರೀ ರಮೇಶ, ಶ್ರೀ ಸುಬ್ಬಣ್ಣ ಹತ್ವಾರ, ಬೆಂಗಳೂರು, ಶ್ರೀ ಲಕ್ಷ್ಮೀನಾರಾಯಣ ತಂತ್ರಿ ಮತ್ತು ಬಳಗದವರು, ಕುಮಾರಿ ಲಲಿತಾಬಲ್ಲಾಳ, ಕುಮಾರಿ ಸತ್ಯವತಿ, ತುಮಕೂರು, ಕೆ.ಪಿ. ಹಾಸ್ಯಗಾರ ಕರ್ಕಿ, ನಿಟ್ಟೂರು ಹಾಯರ್ ಪ್ರೈಮರಿ ಶಾಲೆಯ ಮಕ್ಕಳು.

**ಪರ್ಯಾಯ ಮಠಕ್ಕೆ ಹೊರೆ ಕಾಣಿಕೆ ಸಲ್ಲಿಸಿದವರು :**

೧. ಶ್ರೀ ಎಂ. ದೇವರಾಜ್, ಉಡುಪಿ ೨. ಅಮ್ಮುಂಜೆ ನಾಗೇಶನಾಯಕರ ಅಧ್ಯಕ್ಷತೆಯ ಪರ್ಯಾಯ ಹೊರೆ ಕಾಣಿಕೆ ಸಮಿತಿ ೩. ವಿಜಯ ಬ್ಯಾಂಕಿನ ಸಿಬ್ಬಂದಿವರ್ಗ ಮತ್ತು ಹಿತೈಷಿಗಳು ೪. ಕೋಟೇಶ್ವರ ಮಾಗಣಿಯ ಶಿಷ್ಯ ವೃಂದದವರು ೫. ಅಖಿಲ ದೈವಜ್ಞ ಬ್ರಾಹ್ಮಣ ಸಮಾಜದವರು.

## ಶ್ರೀ ಸೋದೆ ವಾದಿರಾಜ ಮಠಾಧೀಶ
## ಶ್ರೀ ಮದ್ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ
## ತೃತೀಯ ಪರ್ಯಾಯ ಪೀಠಾರೋಹಣ ಭಾಷಣದ ಸಾರಸಂಗ್ರಹ

ಕುಂಡಲ ಮಂಡಿತಗಂಡಂ ಕಂಬುಗ್ರೀವಂ ಮನೋರಮೋರಸ್ಕಮ್ ।
ದಂಡಂ ದಾಮಚ ದಧತಂ ಪಾಂಡವಸಖಮರ್ಚ್ಯಮರ್ಚಯಾಮಿ ಸದಾ ॥
ವ್ಯಾಸಾಯ ಭವನಾಶಾಯ ಶ್ರೀಶಾಯಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯಚ ನಮೋ ನಮಃ ॥
ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾಕಲೌವಾದಿರಾಜಶ್ರೀಪಾದೋಭೀಷ್ಟದಃ ಸತಾಂ ॥

ಇಲ್ಲಿ ಸನ್ನಿಹಿತರಾದ ಸನ್ಮಾನ್ಯ ಶ್ರೀಪಾದಂಗಳವರೇ, ಅಶೇಷ ಧರ್ಮಾಭಿಮಾನಿಗಳೇ, ಶ್ರೀಕೃಷ್ಣ ಪೂಜಾ ಪರ್ಯಾಯ ಸೇವಾದೀಕ್ಷೆಯನ್ನು ಮೂರನೆಯ ಬಾರಿ ಕೈಗೊಳ್ಳುತ್ತಿರುವ ನಾವು ಈ ಸಂದರ್ಭದಲ್ಲಿ ಇಲ್ಲಿ ಕಿಕ್ಕಿರಿದು ನೆರೆದಿರುವ ಊರ ಪರವೂರಿನ ಅಸಂಖ್ಯ ಅಭಿಮಾನಿಗಳಿಗೆ ಉಡುಪಿಯ ಅಧಿದೈವ ಶ್ರೀಕೃಷ್ಣನ ಶ್ರೀಮದಾನಂದತೀರ್ಥರ ಹಾಗೂ ಶ್ರೀ ಗುರುರಾಜರ ವಿಶೇಷಾನುಗ್ರಹವನ್ನು ಹೃತ್ಪೂರ್ವಕ ಹಾರೈಸಿ ಸಾಂಪ್ರದಾಯಿಕವಾದರೂ ಸಕಾಲಿಕವಾದ ಒಂದೆರಡು ಮಾತುಗಳನ್ನು ನಿಮ್ಮ ಮುಂದೆ ಹೇಳಬಯಸುತ್ತೇವೆ.

ಪರ್ಯಾಯವು ನಮ್ಮ ದಕ್ಷಿಣಭಾರತದ ಉಡುಪಿಯಲ್ಲಿ ಪ್ರತಿ ಎರಡು ವರ್ಷಗಳಿಗೊಮ್ಮೆ ನಡೆಯುವುದಾದರೂ ಅಷ್ಟಮಠಾಧೀಶರಿಗೆ ಹದಿನಾಲ್ಕು ವರ್ಷಗಳಿಗೊಮ್ಮೆ ಕ್ರಮಪ್ರಾಪ್ತವಾಗುವ ಶ್ರೀಕೃಷ್ಣ ಪೂಜೆಯ ಸದವಕಾಶದ ಸರದಿ. ಈ ಹಬ್ಬ ಕೇವಲ ಸ್ಥಾನೀಯ ಹಬ್ಬವಾಗಿ ಉಳಿಯದೆ ಅಖಿಲಭಾರತ ಖ್ಯಾತಿಯ ಮಟ್ಟವನ್ನೂ ತಲುಪಿದೆ. ವೈಭವ ವಿಜೃಂಭಣೆಗಳಿಂದ ಕೂಡಿದ ಈ ಸಮಾರಂಭದಲ್ಲಿ ಪಾಲ್ಗೊಳ್ಳಲು ದೇಶದ ನಾನಾ ಭಾಗಗಳಿಂದ ಧರ್ಮಾಭಿಮಾನಿಗಳಾದ ಭಕ್ತರು ಬಹು ಸಂಖ್ಯೆಯಿಂದ ಆಗಮಿಸಿರುತ್ತಾರೆ. ಶ್ರೀಕೃಷ್ಣನ ಹಾಗೂ ಆತನ ವೈವಿಧ್ಯಮಯ ಮಹೋತ್ಸವಾದಿಗಳ ಸಂದರ್ಶನದ, ಶ್ರೀಮದಾಚಾರ್ಯರ ಸೇವೆಯ, ಶ್ರೀಮನ್ಮಧ್ವಸರೋವರ ಸ್ನಾನದ, ಕೊನೆಗೆ ಪರ್ಯಾಯ ಮಹೋತ್ಸವ ಕಾರ್ಯಕ್ರಮದ ಸಂಭ್ರಮಗಳಲ್ಲಿ ತನುಮನಧನಗಳಿಂದ ಪಾಲ್ಗೊಂಡು ಹರಿಸೇವೆ ಇವಿಷ್ಟು ಇಲ್ಲಿಗೆ ಬಂದಿರುವ ಅಸಂಖ್ಯಾತ ಯಾತ್ರಿಕರ ಮುಖ್ಯ ಉದ್ದೇಶಗಳು. ಈ ಮುಖ್ಯ ಉದ್ದೇಶದಿಂದಲೇ ಕೇವಲ ಭಗವಂತನನ್ನು ಅನನ್ಯವಾಗಿ ನಂಬಿಬಂದಿರುವ ಯಾತ್ರಿಕರಿಗೆ ಇಲ್ಲಿ ಸೂಕ್ತವಾದ ವಸತಿ ಸೌಕರ್ಯವಾಗಲೀ ಇತರ ಬೇರೆ ವ್ಯವಸ್ಥೆಗಳಾಗಲೀ ದೊರೆಯದಿರುವುದು ನಮ್ಮ ಮನಸ್ಸಿಗೆ ನೋವುಂಟುಮಾಡಿದೆ. ಖರ್ಚು, ವೆಚ್ಚ, ದೇಹ ಶ್ರಮ, ಅನಾರೋಗ್ಯ ಮುಂತಾದ ಯಾವ ಕಷ್ಟಗಳನ್ನೂ ಲಕ್ಷಿಸದೆ ಇಂತಹ ನಿರ್ವ್ಯಾಜ ಭಕ್ತಿಯ ಶ್ರದ್ಧಾಳುಗಳ ಯೋಗಕ್ಷೇಮಗಳನ್ನು ಭಕ್ತಾಭಿಮಾನಿಯಾದ ಭಗವಂತನೇ ಗೀತೆಯಲ್ಲಿ "ಅನನ್ಯಾಶ್ಚಿಂತಯಂತೋಮಾಂಯೇಜನಾಃ ಪರ್ಯುಪಾಸತೇ ।

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" ॥ ಎಂದು ಹೇಳಿರುವಂತೆ ತಾನೇ ಸ್ವತಃ ವಹಿಸಿಕೊಂಡು ಕಾಪಾಡುತ್ತಿರುವುದಾಗಿ ನಾವು ದೃಢವಾಗಿ ನಂಬಿರುತ್ತೇವೆ.

ನಮ್ಮ ಪರ್ಯಾಯದ ಸಲುವಾಗಿ ಊರ ನಾಗರಿಕರು ಮತ್ತು ಅಭಿಮಾನಿಗಳು, ಶಿಷ್ಯರು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಸ್ವಪ್ರೇರಣೆಯಿಂದ ತಳೆದಿರುವ ಉತ್ಸಾಹ, ಮಾಡುತ್ತಿರುವ ಸೇವೆಗಳನ್ನಂತೂ ಈಗಲೂ ನಾವು ಪ್ರತ್ಯಕ್ಷ ಕಾಣುತ್ತಿದ್ದೇವೆ. ಹಸಿರು ವಾಣಿ ಹೊರೆ, ಸ್ವಾಗತ ಸಮಿತಿ, ಉತ್ಸವ ಸಮಿತಿಗಳು ಮುಂತಾದ ಸರ್ವಕಾರ್ಯ ನಿರ್ವಹಣೆಯ ಹೊಣೆಹೊತ್ತು ನಾನಾ ಮುಖಗಳಿಂದ ಅಹರ್ನಿಶಿ ದುಡಿಯುತ್ತಿರುವ ಉಡುಪಿಯ ನಾಗರಿಕರ ಆ ಆದರ್ಶ ಸೇವಾ ಮನೋಭಾವವನ್ನೂ ನಾವು ಸಾಕಷ್ಟು ಗುರುತಿಸಿಕೊಂಡಿದ್ದೇವೆ. ನಿಷ್ಕಾಮ ಸೇವೆ-ಸಹಕಾರಗಳ ಈ ಸದ್ಭಾವನೆಯು ಸೇವಾ ಮನೋಭಾವದಲ್ಲೊಂದು ನೂತನ ದಾಖಲೆಯನ್ನೇ ನಿರ್ಮಿಸಿದೆ. ಈ ಮಹಾ ಸಮಾರಂಭದ ಪರಿಪೂರ್ಣಯಶಸ್ಸಿಗೆ ಕಾರಣರಾದ ನಿಮ್ಮೆಲ್ಲರಿಗೂ ಭಗವತ್ಪ್ರಸಾದ ರೂಪವಾದ ಪರಮ ಶ್ರೇಯಸ್ಸುಂಟಾಗುವಂತೆ ಮೊದಲಾಗಿ ನಾವು ಶ್ರೀಕೃಷ್ಣಪರಮಾತ್ಮನಲ್ಲಿ ಹೃತ್ಪೂರ್ವಕ ಪ್ರಾರ್ಥಿಸುತ್ತೇವೆ.

ಶ್ರೀ ವಾದಿರಾಜಗುರುವರೇಣ್ಯರಷ್ಟು ದೀರ್ಘಕಾಲ ಪೀಠಾಧಿಪತ್ಯದಲ್ಲಿದ್ದುಕೊಂಡು ವೇದಾಂತ ಸಾಮ್ರಾಜ್ಯವನ್ನಾಳಿದವರು ಪ್ರಾಯಶಃ ಭರತಖಂಡ ಯಾವ ಧರ್ಮಪೀಠಗಳಲ್ಲೂ ಇರಲಿಕ್ಕಿಲ್ಲ. ಹದಿನಾಲ್ಕು ವರ್ಷಗಳಿಗೊಮ್ಮೆ ಬರುವ ಪರ್ಯಾಯವನ್ನೇ ಉಡುಪಿಯಲ್ಲಿ ಅವರು ನಾಲ್ಕು ಸಲ ನಡೆಸಿದರು. ಉಡುಪಿಯಲ್ಲಿ ಮಹಾವೈಭವದ ಸುವ್ಯವಸ್ಥಿತ ಪರ್ಯಾಯ ಪದ್ಧತಿಯನ್ನು ಮೊದಲು ಆಚರಣೆಗೆ ತಂದವರೇ ಶ್ರೀ ಗುರುರಾಜರು. ಅವರು ಹಾಕಿಕೊಟ್ಟ ಪೂಜಾ-ಪರ್ಯಾಯ ಪದ್ಧತಿಗಳು ಅದೇ ತೂಕ, ಅದೇ ಅಳತೆಯಿಂದ ಇಂದಿಗೂ ನಡೆದುಬರುತ್ತಿವೆ. ವೈಭವೋಪೇತವಾದ ಈ ಪರ್ಯಾಯ ಪದ್ಧತಿಯನ್ನು ಸಹಸಾ ಬದಲಾಯಿಸುವ ಧೈರ್ಯ ಯಾರಿಗೂ ಇಲ್ಲ. ಭರತಖಂಡದ ಯಾವ ಕ್ಷೇತ್ರಗಳಲ್ಲೂ ಉಡುಪಿಯಂತೆ ವ್ಯವಸ್ಥಿತವಾದ ಪೂಜಾ ಪದ್ಧತಿ ಇಲ್ಲ. ಪ್ರಭೂತವಾದ ಅನ್ನದಾನವಿಲ್ಲ. ಇಲ್ಲಿಯ ಉತ್ಸವಾದಿಗಳ ಅಂದಚೆಂದಗಳನ್ನು ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ರಾಜರ ಕಾಲದಲ್ಲೇ ಎಂಟು ಮಠದ ಯತಿಗಳಿಗೂ ಪ್ರತ್ಯೇಕ ಸಂಸ್ಥಾನಗಳಾದವು. ಒಂದೊಂದು ಮಠಕ್ಕೂ ಸಾಕಷ್ಟು ಭೂಸ್ಥಿತಿಗಳೇರ್ಪಟ್ಟವು. ಇತರ ಮಠೀಯರ ದೃಷ್ಟಿಯಲ್ಲಿ ಉಡುಪಿ ಮಠಗಳ ಸ್ಥಾನವು ವಾದಿರಾಜರ ಕಾಲದಲ್ಲಿ ಉನ್ನತ ಮಟ್ಟಕ್ಕೇರಲು ಸಾಧ್ಯವಾಯಿತು. ಪರ್ಯಾಯ ವ್ಯವಸ್ಥೆಯಲ್ಲಾಗಲೀ ಮಠಗಳ ಅಭಿವೃದ್ಧಿಯ ವಿಚಾರದಲ್ಲಾಗಲೀ ಅತ್ಯದ್ಭುತ ಕ್ರಾಂತಿಯನ್ನು ಮಾಡಿ ಉಡುಪಿಯ ಮಹತ್ವವನ್ನು ಹೆಚ್ಚಿಸಿದ ಶ್ರೀಗುರುರಾಜರನ್ನು ನಾವೆಲ್ಲ ಅಜ್ಞಾನ ವಿಪರೀತ ಜ್ಞಾನಗಳಿಂದ ದೂರರಾಗಿ ನಿರ್ಮತ್ಸರದಿಂದ ಕೃತಜ್ಞತಾಪೂರ್ವಕ ಸ್ಮರಿಸಿಕೊಳ್ಳಬೇಕಾದುದು ನಮ್ಮ ಮುಖ್ಯ ಕರ್ತವ್ಯವಾಗಿದೆ.

ಶ್ರೀಕೃಷ್ಣನ ಪರ್ಯಾಯ ಪೂಜೆಯನ್ನು ಮಾಡುವ ಸುಯೋಗ ನಮಗೆ ಇದೀಗ ಮೂರನೆಯ ಬಾರಿ ಪ್ರಾಪ್ತವಾಗಿದೆ. ಹಿಂದೆ ಎರಡು ಬಾರಿ ಈ ಸುಯೋಗ ನಮಗೆ ದೊರಕಿದ್ದಾಗ ಲೋಕದ ಪರಿಸ್ಥಿತಿ ಈಗಿನಂತಿರದೆ, ಮಠಕ್ಕೆ ಹೇರಳ ಸ್ಥಿರಾಸ್ತಿಗಳ ಸಂಪತ್ತುಗಳಿದ್ದವು. ಈ ಪರ್ಯಾಯ ಕಾಲದಲ್ಲಾದರೋ ಸಂಸ್ಥಾನದ ಸಮಸ್ತ ಆಸ್ತಿಯ ಸಂಪತ್ತುಗಳನ್ನು ಕಳಕೊಂಡು ನಾವು ನಿರಾವಲಂಬಿಗಳಾಗಿದ್ದೇವೆ. ಧರ್ಮಪ್ರಜ್ಞೆ, ಮತಪ್ರಚಾರ, ಪೂಜಾವಿನಿಯೋಗಗಳು, ಪರ್ಯಾಯದಂತಹ ಅಧಿಕ ವೆಚ್ಚ ತರುವ ಸಮಾರಂಭಗಳು ಇವುಗಳನ್ನು ಮುಂದೆ

ನಿರ್ವಹಿಸುವುದು ನಮ್ಮಿಂದ ಸಾಧ್ಯವಾಗದ ಸಂಗತಿಗಳೆಂದೂ ನಾವು ಭಾವಿಸಿದ್ದೆವು. ವಸ್ತ್ರಾಪಹರಣ ಕಾಲದಲ್ಲಿ ಎರಡೂ ಕೈಗಳನ್ನೆತ್ತಿ ಶ್ರೀಕೃಷ್ಣನನ್ನು ಪ್ರಾರ್ಥಿಸುವ ದ್ರೌಪದಿಯ ಪರಿಸ್ಥಿತಿಯು ನಮ್ಮ ಮಠಾಧಿಪತಿಗಳಿಗುಂಟಾಯಿತು. ಆದರೆ ಭಕ್ತವತ್ಸಲನಾದ ಭಗವಂತನು ನಿರಾಧಾರಿಗಳಾದ ನಮಗೆ ಎಲ್ಲ ದಿಕ್ಕುಗಳಿಂದಲೂ ಭಕ್ತರ ಸರ್ವಸಹಕಾರಗಳನ್ನು ದೊರಕಿಸಿಕೊಡುವ ಮೂಲಕ ಅಕ್ಷಯ–ಸಹಾಯದ ಮಹಾಪೂರವನ್ನೇ ನಮ್ಮತ್ತ ಹರಿಸಿ ನಮ್ಮನ್ನನುಗ್ರಹಿಸಿರುತ್ತಾನೆ. ಆದುದರಿಂದಲೇ ಪರ್ಯಾಯ ಮಹೋತ್ಸವದಂಥ ಸಮಾರಂಭಗಳು ಹಿಂದಿನ ಕಾಲಕ್ಕಿಂತಲೂ ಗಾತ್ರ–ಪಾತ್ರಗಳಲ್ಲಿ ಹಿರಿದಾಗಿ ಮತ್ತೂ ವಿಜೃಂಭಣೆಯಿಂದ ನಡೆಯುತ್ತಿವೆ. ಮುಖ್ಯವಾಗಿ ಇದಕ್ಕೆ ಭಗವದನುಗ್ರಹವೇ ಕಾರಣ.

ಶಿಷ್ಯರು ಮಠಗಳಿಗೊಂದು ಅವಿನಾಶಿಯಾದ, ಯಾವ ಕಾಯಿದೆಗಳಿಗೂ ಒಳಪಡದ, ಶಾಶ್ವತವಾದ, ಮುಖ್ಯ ಸ್ಥಿರಸಂಪತ್ತು, ಆ ಸಂಪತ್ತಿನ ಮುಂದೆ ಹಿಂದೆ ಮಠಗಳಿಗಿದ್ದ ಸ್ಥಿರಾಸ್ತಿಯ ಸಂಪತ್ತುಗಳು ಕೇವಲ ಕ್ಷುಲ್ಲಕವೆಂದು ಸದ್ಯದ ಅನುಭವದಿಂದ ನಾವು ತಿಳಿಯುವಂತಾಗಿದೆ. ಈ ದೂರದೃಷ್ಟಿಯಿಂದಲೇ ಶ್ರೀಗುರುರಾಜರು ತಮ್ಮ ಸಂಸ್ಥಾನಕ್ಕೆ ಸ್ಥಿರಾಸ್ತಿಗಳೊಡನೆ ಅಪಾರ ಶಿಷ್ಯ ಸಂಪತ್ತನ್ನೂ ಗಳಿಸಿಟ್ಟಿದ್ದರು. ಒಂದು ನಿಷ್ಫಲವಾದಾಗ ಮತ್ತೊಂದರ ಉಪಯೋಗ ದೊರೆಯಲೆಂಬುದೇ ಇದರ ಮುಖ್ಯ ಉದ್ದೇಶ. ಸಂಸ್ಥಾನದ ಆದಾಯವು ಬರಿದಾಗುತ್ತಿರುವುದನ್ನೂ ಗುರುಪೀಠದ ಗೌರವಕ್ಕೆ ಚ್ಯುತಿ ಬರುತ್ತಿರುವುದನ್ನೂ ನಮಗಿಂತ ಮೊದಲೇ ತಿಳಿದಿದ್ದ ನಮ್ಮ ಅಭಿಮಾನಿಗಳು, ಶಿಷ್ಯರು, ಧಾರ್ಮಿಕ ವಿನಿಯೋಗಗಳಿಗೆ ವ್ಯತ್ಯಯ ಬಾರದಂತೆ ಸಕಾಲದಲ್ಲಿ ತಮ್ಮ ತಮ್ಮ ಪಾಲಿನ ಸಹಕಾರವನ್ನು ಸ್ವಪ್ರೇರಣೆಯಿಂದ ನಮಗೆ ನೀಡುತ್ತ ಬಂದಿದ್ದಾರೆ. ಅವರ ತ್ಯಾಗಕ್ಕೆ ಭಕ್ತಿಗೆ ಸರಿಯಾಗಿ ದೊರೆಯುವ ಫಲವೆಂದರೆ–ಮುಂದೆ ನಾವು ಸತತವಾಗಿ ೨ ವರ್ಷ ಪೂಜಿಸುವ ಭಗವಂತನ ಪರ್ಯಾಯ ಪೂಜೆಯಲ್ಲೊಂದು ಬಹುದೊಡ್ಡ ಪಾಲು. ನಮ್ಮ ಅಭಿಮಾನಿಗಳ, ಶಿಷ್ಯರ, ತ್ಯಾಗ ಭಕ್ತಿಗಳು ಭಗವದರ್ಪಣವಾಗುವಂತೆ ಅದಕ್ಕೆ ತಕ್ಕ ಫಲವೂ ಆತನಿಂದ ಬಂದೇತೀರಬೇಕು. ನಾವು ಎರಡು ಕೈಗಳಿಂದ ನೀಡಿದರೆ ದೇವರು ಸಾವಿರ ಕೈಗಳಿಂದ ಕೊಡಬಲ್ಲ. ಇಲ್ಲಿ ಅತಿ ಮುಖ್ಯವಾದ ಒಂದು ವಿಚಾರವನ್ನು ನಾವು ಅವಶ್ಯ ಹೇಳಬೇಕಾಗಿದೆ. ನಾವು ಪರ್ಯಾಯಪೂರ್ವಭಾವಿಯಾಗಿ ಸಂಚಾರ ಕಾರ್ಯಕ್ರಮವನ್ನು ಕೈಗೊಂಡಾಗ, ಊರಿನಲ್ಲಿ ಪರಊರಿನಲ್ಲಿ ನಮ್ಮ ಸಂಸ್ಥಾನದ ಅಭಿಮಾನಿಗಳು ಶಿಷ್ಯರು, ಭಕ್ತರು, ಸಂಘಸಂಸ್ಥೆಗಳು ವಿಪುಲ ಸಂಖ್ಯೆಯಿಂದ ಕೂಡಿ ವೈಭವದಿಂದ ನಮ್ಮನ್ನು ಸ್ವಾಗತಿಸಿ, ಸಹಕಾರ ನೀಡಿ, ಅಭೂತಪೂರ್ವವಾದ ಗೌರವವನ್ನು ನಮಗೆ ನೀಡಿ ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಿರುತ್ತಾರೆ. ವಿಸ್ಮಯವನ್ನುಂಟುಮಾಡುವಷ್ಟು ಪ್ರಮಾಣದ ಹೇರಳ ಹಸಿರುವಾಣಿ ಹೊರೆಗಳನ್ನು ಇತರ ಅಮೂಲ್ಯ ವಸ್ತುಗಳನ್ನೂ ಕಾಣಿಕೆಗಳಾಗಿ ಅರ್ಪಿಸಿರುತ್ತಾರೆ. ಪರ್ಯಾಯ ಸಮಾರಂಭದಲ್ಲಿ ಊರ–ಪರಊರ ಸಮರ್ಥರೂ ಶ್ರೀಮಂತರೂ ಮತಭೇದವಿಲ್ಲದೆ ಸ್ವಯಂ ಸೇವಕರಾಗಿ ಸದ್ದಿಲ್ಲದೆ ನಾನಾಮುಖಗಳಿಂದ, ನಿಷ್ಕಾಮನೆಯಿಂದ ದುಡಿಯುತ್ತಿದ್ದಾರೆ. ನಮ್ಮ ಈ ಪರ್ಯಾಯ ಸಮಾರಂಭವನ್ನು ತಮ್ಮದೇ ಆದ ವೈಯಕ್ತಿಕ ಕಾರ್ಯವೆಂಬಷ್ಟು ಆಸಕ್ತಿಯಿಂದ ಶ್ರಮಿಸುತ್ತಿದ್ದಾರೆ. ಎಲ್ಲೆಲ್ಲೂ ಅಭಿಮಾನಿಗಳ ಗುಂಪು. ಸಹಕಾರಗಳ ಸುರಿಮಳೆ ಸರ್ವತ್ರಸನ್ಮಾನ. ಇವು–ಶ್ರೀಗುರುರಾಜರ ಪೀಠದಲ್ಲಿ ನಾವಿರತಕ್ಕವರು, ಎಂಬ ಒಂದೇ ಕಾರಣದಿಂದ ಜನ ನಮಗೆ ನೀಡಿದ ಗೌರವ. ಈ ಅಸಾಧಾರಣವಾದ ಜನರ ಗೌರವಕ್ಕೆ ಶ್ರೀ ಗುರುರಾಜರೇ ಮುಖ್ಯಪಾತ್ರರು. ಹೂವಿನಿಂದ ನಾರಿಗೆ ಬೆಲೆ ಎಂಬಂತೆ ಪುಣ್ಯ ಶ್ಲೋಕರಾದ ಗುರುವರೇಣ್ಯರ

ನಾಮದ ಬಲವೇ ನಮ್ಮ ಬಲ. ದೃಢವಾದ ನಮ್ಮ ಈ ಅನಿಸಿಕೆಯಲ್ಲಿ ಸ್ವಲ್ಪವೂ ಅತಿಶಯೋಕ್ತಿ ಇಲ್ಲ.

ನಮ್ಮ ಮುಂದಿನ ಎರಡು ವರ್ಷಗಳ ಪರ್ಯಾಯವು ಸಾಮಾನ್ಯವಾಗಿ ಇತರ ಎಲ್ಲ ಪರ್ಯಾಯಗಳಂತೆ ಪೂಜಾವಿನಿಯೋಗಾದಿ ವಿಚಾರಗಳಲ್ಲಿ ಹೆಚ್ಚಿನ ಬದಲಾವಣೆಗಳಿಲ್ಲದೆ ಒಂದೇ ಸಮನಾಗಿದ್ದರೂ ಕೆಲವೊಂದು ವೈಶಿಷ್ಟ್ಯಗಳಿಂದ ಕೂಡಿರುತ್ತದೆ. ಶ್ರದ್ಧಾಳುಗಳಾದ ಭಕ್ತರಿಗೆ ಬಾಲಗೋಪಾಲನಾದ ಶ್ರೀ ಯಾದವಕೃಷ್ಣನ ದರ್ಶನದ ಜೊತೆಗೆ ವಾಸಿಷ್ಠ ಕೃಷ್ಣನ (ವೇದವ್ಯಾಸ ದೇವರ) ಪುಣ್ಯ ದರ್ಶನ, ಸೇವೆಗಳೂ ಲಭಿಸುವುದು ಒಂದು ವಿಶೇಷ ಘಟನೆಯಾಗಿರುತ್ತದೆ. ಸದಾ ಸನ್ನಿಹಿತರಾಗಿರುವ ಶ್ರೀಮದಾನಂದ ತೀರ್ಥರ ಪವಿತ್ರ ಸನ್ನಿಧಾನದ ಜತೆಯಲ್ಲೇ ಶ್ರೀಗುರುರಾಜರೂ ಭಕ್ತರ ಅನುಗ್ರಹೋನ್ಮುಖರಾಗಿ ವಿರಾಜಮಾನರಾಗಿರುತ್ತಾರೆ. ಬದರೀ ಕ್ಷೇತ್ರಕ್ಕಿಂತಲೂ ಮಿಗಿಲಾಗಿ ಭಕ್ತರಿಗೆ ಏಕತ್ರ ಸಂಗತವಾದ ಈ ಪುಣ್ಯಘಟನೆಗಳು ನಮ್ಮ ಪರ್ಯಾಯದ ಪರ್ವಕಾಲದಲ್ಲಿ ಭಕ್ತರಿಗೆ ಲಭಿಸಲಿವೆ. ಸದಾ ಗುರುರಾಜರನ್ನು ಸೇವಿಸುತ್ತಾ ಜತೆಯಲ್ಲಿರುವ ಶ್ರೀ ಭೂತರಾಜರಂತೂ ನಾಲ್ಕೂ ನಿಟ್ಟಿನಲ್ಲಿ ಜಾಗೃತರಾಗಿದ್ದು ಸಂಸ್ಥಾನದ ವತಿಯಿಂದ ಶ್ರೀ ಹರಿಗೆ ನಡೆಯುವ ಪರ್ಯಾಯ ಪೂಜೆಯ ಸಕಲ ಮೇಲ್ವಿಚಾರಣೆಯನ್ನು ನೋಡುತ್ತಿದ್ದು ಶ್ರೀಹರಿ–ಗುರುಗಳನ್ನೂ ಸೇವಿಸುತ್ತಿರುವುದರೊಂದಿಗೆ ಸದಾ ಭಕ್ತರನ್ನನುಗ್ರಹಿಸುತ್ತಿರುತ್ತಾರೆ. ಇವಿಷ್ಟು ನಾವು ಹೇಳಿಕೊಳ್ಳಬಹುದಾದ ನಮ್ಮ ಪರ್ಯಾಯದ ಮುಖ್ಯ ವೈಶಿಷ್ಟ್ಯಗಳು.

ಇಂದಿನಿಂದಲೇ ನಮ್ಮಿಂದ ಪರ್ಯಾಯ ಪೂಜೆಗೊಳ್ಳಲಿರುವ ನಮ್ಮ ಹಾಗೂ ಉಡುಪಿಯ ಅಧಿದೈವ ಶ್ರೀಕೃಷ್ಣ ಪರಮಾತ್ಮನ ಕುರಿತು ಒಂದು ಅನಿಸಿಕೆಯನ್ನು ಇಲ್ಲಿ ಹೇಳಬಯಸುತ್ತೇವೆ. ಭಾರತದಲ್ಲಿ ಅನೇಕ ಕೃಷ್ಣ ಕ್ಷೇತ್ರಗಳಿದ್ದರೂ ನಮ್ಮ ಉಡುಪಿಯಲ್ಲಿ ಭಗವಂತನು ಬಾಲಗೋಪಾಲರೂಪದಲ್ಲಿ ನೆಲೆಸಿರುತ್ತಾನೆ. ಅನಂತ ಜನ್ಮಗಳಲ್ಲಿ ಯಜ್ಞ ಯಾಗಾದಿಗಳ ಸುಕೃತವನ್ನು ಸಂಗ್ರಹಿಸಿ ಬಹು ಪ್ರಯಾಸದಿಂದ ಭಗವಂತನನ್ನೊಲಿಸಿಕೊಳ್ಳಬೇಕಾದ ನಮಗೆ ಉಡುಪಿಯಲ್ಲಿ ಶ್ರೀ ಹರಿಯನ್ನೊಲಿಸಿಕೊಳ್ಳುವುದು ಬಹಳ ಸುಲಭದ ಕೆಲಸ. ಎಷ್ಟು ಸಣ್ಣ ಸೊತ್ತನ್ನಾದರೂ, ಮೊತ್ತವನ್ನಾದರೂ ಕೊಟ್ಟು, ಯಾವುದಾದರೂ ಆಸೆಯನ್ನು ತೋರಿಸಿ ನಾವು ಸಣ್ಣ ಮಕ್ಕಳನ್ನು ಬಹುಬೇಗ ವಶೀಕರಿಸಿಕೊಳ್ಳಬಹುದು. ಅಂತೆಯೇ ನಮ್ಮ ಉಡುಪಿಯ ಬಾಲಕೃಷ್ಣನನ್ನು ಭಕ್ತರು ಪ್ರೀತಿಯಿಂದ ಪತ್ರವನ್ನೋ ಪುಷ್ಪವನ್ನೋ ಏನನ್ನಾದರೂ ಕೊಟ್ಟು ಸುಲಭವಾಗಿ ಒಲಿಸಿಕೊಳ್ಳಬಹುದು. ಶ್ರೀಗುರುರಾಜರು ಈ ಭಾವವನ್ನೇ ತಮ್ಮ ರುಕ್ಮಿಣೀಶ ವಿಜಯದಲ್ಲಿ –

**ಶಿಶುಂ ವಶೀಕರ್ತುಮಥೋ ನ ಭಾರ ಇತೀವ ಬುದ್ಧ್ಯಾತುತುಷಸ್ಮವೃದ್ಧಾಃ ।**
**ಉಪೇಕ್ಷಯಿಷ್ಯಂತಿ ನ ಚೇತ್ಕೃತಾರ್ಥಾ ಇತಿಸ್ವಯಂ ಪ್ರಾಜ್ವಲದಗ್ನಿರೇಷಾಮ್ ॥**

– ಎಂದು ಮಾರ್ಮಿಕವಾಗಿ ವರ್ಣಿಸಿರುತ್ತಾರೆ. ಇಂದು ನಾವಾದರೂ ಅವರ ಮಾತಿನಂತೆ ಶ್ರೀಕೃಷ್ಣ ಪರಮಾತ್ಮನನ್ನು ಭಜಿಸಿ ಪೂಜಿಸಿದರೆ ನಿಶ್ಚಯವಾಗಿ ಆ ಭಕ್ತಪರಾಧೀನನಾದ ಭಗವಂತನನ್ನೊಲಿಸಿಕೊಳ್ಳಬಹುದು. ಶ್ರೀಗುರುರಾಜರ ಅಭಿಪ್ರಾಯವನ್ನೇ ಅವರ–ತತ್ತ್ವದ ನೆಲೆಯಲ್ಲೇ ನಂಬಿ ನಾವೂ ನೀವೂ ಶ್ರೀಕೃಷ್ಣನನ್ನು ಯಥೇಚ್ಛವಾಗಿ ಪೂಜಿಸೋಣ ಆರಾಧಿಸೋಣ.

ಮುಖ್ಯವಾಗಿ ಉಡುಪಿಯ ಶ್ರೀ ಕೃಷ್ಣದೇವರ ಸನ್ನಿಧಿಯಲ್ಲಿ ಎಲ್ಲ ಕಾರ್ಯಕಲಾಪಗಳೂ ಶ್ರೀ ಪ್ರಾಣದೇವರ ಸಂಕಲ್ಪದಂತೆ ನಡೆಯುತ್ತಿದೆಯೆಂಬುವುದು ಬಲ್ಲವರೆಲ್ಲರೂ ತಿಳಿದ ವಿಚಾರ. ಸಕಲ ಕಾರ್ಯಭಾರಗಳನ್ನೂ, ಪೂಜಾ ಉತ್ಸವಾದಿಗಳನ್ನೂ, ಅನ್ನದಾನಾದಿಗಳನ್ನೂ ಶ್ರೀಪ್ರಾಣದೇವರೇ ಸ್ವತಃ ನಡೆಸುವವರು. 'ಹನುಮನ ಮತವೇ ಹರಿಯಮತ' ಎಂಬ ಹರಿದಾಸರ ವಾಣಿಯ ಸತ್ಯವನ್ನು ಇಲ್ಲಿ ನಾವು ಪ್ರತ್ಯಕ್ಷ ಕಾಣಬಹುದು. ನಮ್ಮ ಪರ್ಯಾಯ ಪೂಜೆಯು ಸಾಂಗವಾಗಿ, ಯಶಸ್ವಿಯಾಗಿ ಶ್ರೀಹರಿಗೆ ಸಮರ್ಪಿತವಾಗುವಂತೆ ಶ್ರೀ ಪ್ರಾಣದೇವರ ಪರಿರಕ್ಷಣೆ ನಮಗಿರಲೆಂದು ಈ ಸಂದರ್ಭದಲ್ಲಿ ನಾವು ಹೃತ್ಪೂರ್ವಕ ಪ್ರಾರ್ಥಿಸುತ್ತೇವೆ.

ನಮ್ಮ ದ್ವಂದ್ವ ಮಠಾಧೀಶರಾದ ಶ್ರೀ ಶೀರೂರು ಶ್ರೀಪಾದರು ತಮ್ಮ ಎರಡು ವರ್ಷಗಳ ಪರ್ಯಾಯವನ್ನು ಈ ಸಣ್ಣ ವಯಸ್ಸಿನಲ್ಲೇ ಸಲೀಲವಾಗಿ, ಯಶಸ್ವಿಯಾಗಿ ಮುಗಿಸಿ ಈಗ ಸುಖವಾಗಿ ಉಸಿರಾಡುತ್ತಿರುವುದನ್ನು ಕಂಡರೆ ಪರ್ಯಾಯದ ಭಾರವು ನಮ್ಮ ಪಾಲಿಗೂ ಹೆಚ್ಚು ಕ್ಲೇಶದಾಯಕವಾಗಲಾರದೆಂದು ನಮಗನಿಸುತ್ತದೆ. ಅವರು ನಮ್ಮ ಪರ್ಯಾಯದಲ್ಲೂ ತಮ್ಮದೇ ಪರ್ಯಾಯವೆಂಬಷ್ಟು ಗೌರವದಿಂದ ನಮಗೆ ಸರ್ವ ಸಹಕಾರಗಳನ್ನೀಯುವ ಭರವಸೆಯನ್ನಿತ್ತಿರುತ್ತಾರೆ. ಅವರು ಶ್ರೀಹರಿ-ಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರರಾಗಿ ಮುಂದೆ ಇದಕ್ಕಿಂತಲೂ ವೈಭವದ ಅನೇಕ ಪರ್ಯಾಯಗಳನ್ನಾಚರಿಸುವಂತಾಗಲೆಂದು ನಾವು ಹಾರೈಸುತ್ತೇವೆ.

ಇಲ್ಲಿ ಸನ್ನಿಹಿತರಾಗಿರುವ ಇತರ ಮಠಾಧಿಪತಿಗಳೂ ನಮ್ಮ ಪರ್ಯಾಯ ಕಾಲದಲ್ಲಿ ಹಿಂದೆ ನಮಗಿತ್ತಿರುವ ಅಸಾಧಾರಣವಾದ ಪ್ರೀತಿ ವಿಶ್ವಾಸಗಳ ಸಹಕಾರವನ್ನೇ ಮುಂದುವರಿಸಿ ಸಹಕರಿಸುವ ವಿಶ್ವಾಸ ನಮಗಿದೆ. ಈ ಪರಸ್ಪರ ಸಹಕಾರಗಳ ಸಾಲದ ವಿನಿಮಯವಿಲ್ಲದೆ ಸಂಸ್ಥಾನಗಳು ಪರ್ಯಾಯದ ಗುರುತರ ಭಾರವನ್ನು ನಿರ್ವಹಿಸುವುದು ಕಷ್ಟಸಾಧ್ಯ.

ನಮ್ಮ ಪರ್ಯಾಯವನ್ನು ಹಾಗೂ ಇಲ್ಲಿ ನಡೆಯಬೇಕಾದ ವೈಭವದ ಉತ್ಸವ ವಿನಿಯೋಗಾದಿಗಳನ್ನು ಲೋಪವಿಲ್ಲದೆ ವಿಜೃಂಭಣೆಯಿಂದ ನಡೆಯಬೇಕೆಂಬ ಉದ್ದೇಶದಿಂದ ಶ್ರೀ ಗುರುರಾಜರ ಸಂಸ್ಥಾನದ ಅಭಿಮಾನೀ ಶಿಷ್ಯರಾದ ಕೋಟೇಶ್ವರ ಮಾಗಣೆಯವರು, ದೈವಜ್ಞ ಬ್ರಾಹ್ಮಣರು, ಮಟ್ಟುಗ್ರಾಮದವರು ಹಾಗೂ ಇತರ ಎಲ್ಲ ಮತೀಯರು ತನುಮನ ಧನಗಳಿಂದ ವಿಶೇಷವಾಗಿ ಸರ್ವ ವಿಧದ ಸಹಕಾರಗಳನ್ನು ನಮಗಿತ್ತು ಪುಣ್ಯಭಾಗಿಗಳಾಗಿದ್ದಾರೆ. ಶ್ರೀಗುರುರಾಜರು ಅವರಿಗೆ ಮಾಡಬೇಕಾದ ಪರಮಾನುಗ್ರಹವನ್ನು ಮೊದಲೇ ಮಾಡಿದ್ದರೂ ನಾವು ಈ ಪರ್ವ ಪ್ರಸಂಗದಲ್ಲಿ ಶ್ರೀಹರಿ-ಗುರುಗಳಲ್ಲಿ ಅವರೆಲ್ಲರ ಶ್ರೇಯಶ್ಚಿಂತನವನ್ನು ಮಾಡುತ್ತೇವೆ.

ಕೊನೆಯದಾಗಿ ಶ್ರೀಗುರುರಾಜರ ಸಂಸ್ಥಾನದ ಪಾಲಿನ ಈ ನಮ್ಮ ಪರ್ಯಾಯವು ಯಶಸ್ವಿಯಾಗುವುದಕ್ಕೆ ಸಹಕರಿಸುವ ನಮ್ಮ ಅಶೇಷ ಅಭಿಮಾನಿಗಳಿಗೂ ಶಿಷ್ಯರಿಗೂ ಊರು ಪರವೂರುಗಳಿಂದಾಗಮಿಸಿದ ಸಮಸ್ತ ಭಕ್ತರಿಗೂ ಶ್ರೀಕೃಷ್ಣ-ಶ್ರೀಭೂವರಾಹ-ಹಯಗ್ರೀವ-ವೇದವ್ಯಾಸ ದೇವರು ಮತ್ತು ಗುರುಸಾರ್ವಭೌಮರು ಸಕಲ ಶ್ರೇಯೋಭಿವೃದ್ಧಿಯೊಂದಿಗೆ ಸಕಲ ಸನ್ಮಂಗಳವನ್ನುಂಟುಮಾಡಲೆಂದು ನಾವು ಶ್ರೀ ಹರಿಗುರುಗಳಲ್ಲಿ ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

॥ ಲೋಕಾಃ ಸಮಸ್ತಾಃ ಸುಖಿನೋಭವಂತು ॥

# ಶ್ರೀ ವಾದಿರಾಜರ ಅವತಾರದ ಪಂಚ ಶತಾಬ್ಧಿ ಉತ್ಸವ

ಶ್ರೀಸೋದೆ ಶ್ರೀಪಾದರ ಪರ್ಯಾಯ ಪೀಠಾರೋಹಣ ಸಮಾರಂಭದ ಮಾರನೆಯ ದಿನ–ಜನವರಿ ೧೯ರಿಂದ ಶ್ರೀಸೋದೆ ಮಠದ ಗುರುಪರಂಪರೆಯನ್ನು ಬೆಳಗಿದ ಗುರುಸಾರ್ವಭೌಮ ಶ್ರೀ ವಾದಿರಾಜತೀರ್ಥರ ಅವತಾರದ ಪಂಚಶತಾಬ್ಧಿ ಉತ್ಸವದ ಕಾರ್ಯಕ್ರಮಗಳು ಆರಂಭಗೊಂಡವು.

**ಶ್ರೀ ವಾದಿರಾಜೋತ್ಸವಕ್ಕಾಗಿ ಹಮ್ಮಿಕೊಂಡ ಮುಖ್ಯ ಕಾರ್ಯಕ್ರಮಗಳು ಇವು :**

೧. ಸ್ಪರ್ಧೆಯ ರೂಪದಲ್ಲಿ ಹರಿಕಥಾ ಮೇಳ ೨. ದಾಸಕೀರ್ತನ ಸ್ಪರ್ಧೆ ೩. ಶ್ರೀ ವಾದಿರಾಜರ ವಿಗ್ರಹ ಯಾತ್ರೆ ೪. ಶ್ರೀ ವಾದಿರಾಜರ ಮಹಿಮಾಫಲ ಯಾತ್ರೆ ೫. ಶ್ರೀ ವಾದಿರಾಜೋತ್ಸವದ ಉದ್ಘಾಟನ ಸಮಾರಂಭ ೬. ವಿದ್ವತ್‌ಗೋಷ್ಠಿ ೭. ವಿಚಾರಗೋಷ್ಠಿಗಳು ೮. ಸಾಂಸ್ಕೃತಿಕ ಪ್ರದರ್ಶನ

ಮೇಲಿನ ಎಲ್ಲಾ ಕಾರ್ಯಕ್ರಮಗಳು ಈ ಕೆಳಗೆ ವಿವರಿಸಿದಂತೆ ಯಶಸ್ವಿಯಾಗಿ ಅರ್ಥಪೂರ್ಣವಾಗಿ ನೆರವೇರಿದವು.

**ಹರಿಕಥಾ ಮೇಳ**

ದಾಸಪಂಥದ ಅಧ್ವರ್ಯುಗಳಲ್ಲೊಬ್ಬರಾದ ಶ್ರೀ ವಾದಿರಾಜ ಗುರುವರೇಣ್ಯರ ನೆನಪಿಗಾಗಿ ಅವರ ಪಂಚಶತಾಬ್ಧಿ ಉತ್ಸವದ ಅಂಗವಾಗಿ ಜನವರಿ ೧೯ರಿಂದ ೨೮ರ ವರೆಗೆ ಹತ್ತು ದಿನಗಳ ಕಾಲ ಶ್ರೀ ಕೃಷ್ಣ ಮಠದ ವಸಂತ ಮಹಲಿನಲ್ಲಿ ಸ್ಪರ್ಧೆಯ ರೂಪದಲ್ಲಿ ಹರಿಕಥಾ ಮೇಳ ನಡೆಯಿತು. ಕರ್ಣಾಟಕದ ಸಾಮಾನ್ಯ ಎಲ್ಲಾ ಭಾಗಗಳಿಂದ ಸುಮಾರು ೭೦ ಮಂದಿ ಹರಿಕೀರ್ತನಕಾರರು ಈ ಮೇಳದಲ್ಲಿ ಭಾಗವಹಿಸಿ ತಮ್ಮ ಹರಿಕಥಾ ಸೇವೆಯನ್ನು ನೀಡಿದರು. ಪ್ರತಿ ಮಧ್ಯಾಹ್ನ ಗಂಟೆ ೩ಕ್ಕೆ ಆರಂಭವಾಗುತ್ತಿದ್ದ ಈ ಸ್ಪರ್ಧೆಯಲ್ಲಿ ದಿನಂಪ್ರತಿ ೫ರಿಂದ ೭ ಮಂದಿ ಹರಿಕೀರ್ತನಕಾರರು ಭಾಗವಹಿಸುತ್ತಿದ್ದು ಪ್ರತಿ ಹರಿದಾಸರು ಒಂದೊಂದು ಗಂಟೆಯ ಅವಧಿಯಲ್ಲಿ ಶ್ರೀಕೃಷ್ಣ ಚರಿತ್ರೆಗೆ ಸಂಬಂಧಿಸಿದ ಕಥಾನಕವನ್ನು ಆಯ್ದು ಹರಿಕಥೆಯನ್ನು ನಡೆಸಿ ಹತ್ತು ದಿನಗಳ ಕಾಲ ಸಭಾಂಗಣದಲ್ಲಿ ನೆರೆಯುತ್ತಿದ್ದ ಶ್ರೋತೃಗಳ ಮನಸ್ಸನ್ನು ಸಂತೋಷಗೊಳಿಸಿದರು.

**ದಾಸಕೀರ್ತನ ಸ್ಪರ್ಧೆ**

ಮಹಾ ವಾಗ್ಗೇಯಕಾರರೂ, ಶಾಸ್ತ್ರೀಯ ಸಂಗೀತ ಪ್ರವರ್ತಕರಲ್ಲೊಬ್ಬರೂ ಆಗಿದ್ದ ಶ್ರೀ ವಾದಿರಾಜ ತೀರ್ಥರ ನೆನಪಿಗಾಗಿ ದಾಸರ ಕೀರ್ತನೆಗಳನ್ನು ಹಾಡುವ ಸ್ಪರ್ಧೆಯು ಜನವರಿ ೨೬, ೨೭ ಮತ್ತು ೨೮ ರಂದು ರಾಜಾಂಗಣದ 'ಶ್ರೀ ವಾದಿರಾಜ ಮಂಟಪ'ದಲ್ಲಿ ನಡೆಯಿತು. ನಾಡಿನ ಅನೇಕ ಭಾಗಗಳಿಂದ, ಮುಖ್ಯವಾಗಿ ಜಿಲ್ಲೆಯ ಬೇರೆ ಬೇರೆ ಭಾಗಗಳಿಂದ ಎಲ್ಲಾ ವಯೋಮಾನಕ್ಕೆ ಸೇರಿದ ೨೫೦ಕ್ಕೂ ಮಿಕ್ಕಿದ ಕಿಶೋರ–ಕಿಶೋರಿಯರು, ಸ್ತ್ರೀ–ಪುರುಷರು, ಹವ್ಯಾಸಿಗಳು–ವೃತ್ತಿಪರರು ಮುಂಜಾನೆಯಿಂದ ಮುಸ್ಸಂಜೆಯವರೆಗೆ ನಡೆಯುತ್ತಿದ್ದ ಸ್ಪರ್ಧೆಯಲ್ಲಿ

ಭಾಗವಹಿಸಿ ಮೂರು ದಿನಗಳ ಕಾಲ ನೆರೆದ ಶ್ರೋತೃಗಳನ್ನು ತಮ್ಮ ಹಾಡುಗಾರಿಕೆಯಿಂದ ರಂಜಿಸಿದರು. ಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲಾ ಉತ್ಸಾಹಿಗಳ ಗುಣಮಟ್ಟ ನಿರೀಕ್ಷೆಯನ್ನು ಮೀರಿತ್ತು.

**ಶ್ರೀ ವಾದಿರಾಜರ ಪಂಚ ಶತಾಬ್ದಿಯ ಶುಭದಿನ**

ಜನವರಿ ೨೯, ೧೯೮೦, ಸಿದ್ಧಾರ್ಥಿ ನಾಮ ಸಂವತ್ಸರದ ಮಾಘ ಶುದ್ಧ ದ್ವಾದಶಿ. ೫೦೦ ವರ್ಷಗಳ ಹಿಂದೆ ಇದೇ ದಿನ ಉಡುಪಿಯ ಉತ್ತರಕ್ಕಿರುವ ಹೂವಿನ ಕೆರೆ ಎಂಬ ಚಿಕ್ಕಗ್ರಾಮವೊಂದರ ಗದ್ದೆಯ ಅಂಚಿನಲ್ಲಿ, ಭೂಮಿ–ಆಕಾಶಗಳ ಆಸರೆಯಲ್ಲಿ ಭೂವರಾಹ ನಾಮಾಂಕಿತ ಶ್ರೀ ವಾದಿರಾಜರು ಅವತಾರವೆತ್ತಿದರು. ಶ್ರೀ ಸೋದೆ ಮಠದ (ಆಗ ಕುಂಭಾಸಿ ಮಠ) ಗುರುಪರಂಪರೆಗೆ ಸೇರಿದ ಶ್ರೀ ವಾಗೀಶತೀರ್ಥರಿಂದ ಅನುಗ್ರಹೀತರಾದ ಇವರು ಮುಂದೆ ಶ್ರೀಕೃಷ್ಣ ಪೂಜಾ ಕೈಂಕರ್ಯಕ್ಕಾಗಿ ಧರ್ಮ ಪ್ರಸಾರಕ್ಕಾಗಿ, ಲೋಕ ಕಲ್ಯಾಣಕ್ಕಾಗಿ ಶ್ರೀವಾಗೀಶತೀರ್ಥರ ಶಿಷ್ಯರಾಗಿ ಶ್ರೀ ಸೋದೆ ಮಠದ ಗುರು ಪರಂಪರೆಗೆ ಸೇರಿ ಉಡುಪಿಯನ್ನು ತಮ್ಮ ಕರ್ಮಭೂಮಿಯನ್ನಾಗಿ ಮಾಡಿದರು.

ಶ್ರೀ ವಾದಿರಾಜರು ಅವತಾರ ಪಂಚ ಶತಾಬ್ದಿಯ ಶುಭದಿನ ಮುಂಜಾನೆ ಶ್ರೀಕೃಷ್ಣನಿಗೆ ಮಹಾಪೂಜೆ, ಶ್ರೀ ವಾದಿರಾಜರ ವಿಗ್ರಹಕ್ಕೆ ಪರ್ಯಾಯ ಶ್ರೀಗಳವರಿಂದ ಕನಕಾಭಿಷೇಕ, ರಜತಾಭಿಷೇಕ ನಡೆದು ಮಹಾಸಂತರ್ಪಣೆ ಜರಗಿತು.

**ಹೂವಿನ ಕೆರೆಯಲ್ಲಿ**

ಶ್ರೀಕೃಷ್ಣ ಪೂಜಾ ಪ್ರಸಾದವನ್ನು ಹಿಡಿದು ವೈದಿಕರು, ಲೌಕಿಕರು, ಉಡುಪಿಯಿಂದ ಹೂವಿನಕೆರೆಗೆ ಸಾಗಿ, ಈ ಸಂದರ್ಭಕ್ಕಾಗಿಯೇ ನೂತನವಾಗಿ ನಿರ್ಮಿಸಿ ಎರಡು ದಿನಗಳ ಹಿಂದೆ ಗೌರಿಗದ್ದೆಯ ಶ್ರೀ ವಾದಿರಾಜರ ಗುಡಿಯಲ್ಲಿ ಇಟ್ಟಿದ್ದ ಶ್ರೀರಾಜರ ವಿಗ್ರಹಕ್ಕೆ ಸಮರ್ಪಿಸಲಾಯಿತು. ಶ್ರೀರಾಜರ ವಿಗ್ರಹಕ್ಕೆ ಅಭಿಷೇಕ, ಆರತಿ ನಡೆದು ಪ್ರಸಾದ ವಿತರಣೆಯಾಯಿತು. ಗೌರಿಗದ್ದೆಯಲ್ಲಿರುವ ಶ್ರೀ ವಾದಿರಾಜರ ಗುಡಿಯಿಂದ ಎತ್ತಿ ಹರಿವಾಣದಲ್ಲಿರಿಸಿ ಹೊತ್ತುಕೊಂಡು ಶ್ರೀರಾಜರ ಹೆತ್ತವರ ಮನೆಯ ದೇವರ ಗುಡಿಯಲ್ಲಿರಿಸಿ ಪೂಜಾದಿಗಳನ್ನು ನೆರವೇರಿಸಿ ಅಲ್ಲಿಂದ ಹೊರಗಿರಿಸಿದ ವಾಹನದಲ್ಲಿರಿಸಲು ಕೊಂಡೊಯ್ಯಲಾಯಿತು. ಹೂವಿನಕೆರೆಯಿಂದ ಹೊರಟ ವಿಗ್ರಹಯಾತ್ರೆ ವಾದ್ಯವಾದನ ಗಳಿಂದೊಡಗೂಡಿ ವಕ್ವಾಡಿ ಹಾದಿಯಾಗಿ ಗೋಪಾಡಿಯೆಡೆಗೆ ಸಾಗಿತು.

**ಯಾತ್ರೆಯ ಆರಂಭ**

ಹೂವಿನಕೆರೆಯಿಂದ ಗೋಪಾಡಿಯ ವರೆಗಿನ ಶ್ರೀ ವಾದಿರಾಜರ ವಿಗ್ರಹಯಾತ್ರೆ ಸಾಗುತ್ತಿದ್ದಂತೆ ಹಾದಿಯಲ್ಲಿರುವ ಗ್ರಾಮಸ್ಥರು ವಿಗ್ರಹಕ್ಕೆ ಹಣ್ಣು ಕ್ಕಾಯಿ ಆರತಿಯನ್ನು ಸಲ್ಲಿಸಿ, ಗೌರಿಗದ್ದೆಯ ಮೃತ್ತಿಕೆಯನ್ನು ಪ್ರಸಾದರೂಪದಲ್ಲಿ ಸ್ವೀಕರಿಸಿ ಧನ್ಯತಾಭಾವವನ್ನು ಪಡೆಯುತ್ತಿದ್ದರು. ಶ್ರೀ ರಾಜರ ವಿಗ್ರಹಯಾತ್ರೆ ಹೆಜ್ಜೆ ಹೆಜ್ಜೆಗೆ ತಂಗುತ್ತಾ, ಹಾದಿಯಲ್ಲಿ ಗುಂಪು ಗುಂಪಾಗಿ ಭಯಭಕ್ತಿಯಿಂದ ನಿಂತಿದ್ದ ಜನರಿಂದ ಹಣ್ಣು ಕ್ಕಾಯಿ ಆರತಿ ಸ್ವೀಕರಿಸುತ್ತಾ ಮುಂದೆ ಸಾಗಿ ಗೋಪಾಡಿಯ ಬಳಿ ರಾಷ್ಟ್ರೀಯ ಹೆದ್ದಾರಿಯಲ್ಲಿ ನಿರ್ಮಿಸಲಾದ ಚಪ್ಪರದಡಿ ಕೊಂಚಕಾಲ

ತಂಗಿತು. ಅಲ್ಲಿ ಶ್ರೀ ರಾಜರ ವಿಗ್ರಹವನ್ನು ಪುಷ್ಪಾಲಂಕೃತ ಹಂಸವಾಹನದಲ್ಲಿ ತಂದಿರಿಸಲಾಯಿತು.. ಕೋಟೇಶ್ವರ ಮಾಗಣೆಗೆ ಸೇರಿದ ಹತ್ತು ಸಮಸ್ತರು-ಊರ ಪರವೂರ ನೂರಾರು ಮಂದಿ ಮಾಗಣೆಯ ಶಿಷ್ಯವೃಂದದವರು ಅಲ್ಲಿ ಸೇರಿದ್ದು ಶ್ರೀರಾಜರ ವಿಗ್ರಹಕ್ಕೆ ನೈವೇದ್ಯ ಮತ್ತು ಆರತಿ ನೀಡಿದರು.

**ಹೆದ್ದಾರಿಯಲ್ಲಿ ಯಾತ್ರೆ**

ಗೋಪಾಡಿಯ ಬಳಿಯ ರಾಷ್ಟ್ರೀಯ ಹೆದ್ದಾರಿಯಿಂದ ಹೊರಟ ಶ್ರೀ ವಾದಿರಾಜ ವಿಗ್ರಹಯಾತ್ರೆ ಕ್ರಮವಾಗಿ ಕುಂಭಾಸಿ, ತೆಕ್ಕಟ್ಟೆ, ಕೋಟ, ಸಾಲಿಗ್ರಾಮಪೇಟೆ, ಚೇಂಪಿ, ಸಾಸ್ತಾನ, ಐರೋಡಿ, ಉಪ್ಪಿನಕೋಟೆ ಹಾದಿಯಾಗಿ ಬ್ರಹ್ಮಾವರ ಪೇಟೆ ತಲುಪಿತು.

ಶ್ರೀರಾಜರ ವಿಗ್ರಹವಿರಿಸಿದ ಹಂಸವಾಹನದ ಮುಂದುಗಡೆ ಬೇರೆ ಬೇರೆ ಹತ್ತಾರು ವಾಹನಗಳಲ್ಲಿ ಬಿರುದಾವಳಿಗಳು, ವಾದ್ಯವಾಲಗದವರು, ಬ್ಯಾಂಡಿನವರು, ಭಜನೆ ಹಾಡುವವರು, ವೇದಮಂತ್ರ ಪಠಿಸುವವರು ಸಾಗುತ್ತಿದ್ದರು. ಶ್ರೀ ಭೂವರಾಹ ದೇವರ ದೊಡ್ಡ ಗಾತ್ರದ ಬಿಂಬ ಮೆರವಣಿಗೆಯಲ್ಲಿ ಸಾಗುತ್ತಿತ್ತು. ಹಾದಿಯಲ್ಲಿರುವ ಪ್ರತಿ ಗ್ರಾಮದಲ್ಲಿ ಎರಡು ಮೂರು ಕಡೆ ತಂಗಿ, ಗುಂಪು ಗುಂಪಾಗಿ ಸೇರಿದ್ದ ಗ್ರಾಮಸ್ಥರಿಂದ ಪೇಟೆಯವರಿಂದ ಹಣ್ಣು ಕಾಯಿ ನೈವೇದ್ಯ, ಆರತಿ ಸ್ವೀಕರಿಸಿ ಶ್ರೀರಾಜರ ವಿಗ್ರಹ ಮುಂದೆ ಸಾಗುತ್ತಿತ್ತು. ಹಾದಿಯಲ್ಲಿರುವ ಎಲ್ಲಾ ಶಾಲೆಗಳ ನೂರಾರು ವಿದ್ಯಾರ್ಥಿ-ಅಧ್ಯಾಪಕರು ಸಾಲಾಗಿ ನಿಂತು ಶ್ರೀರಾಜರ ವಿಗ್ರಹವನ್ನು ವೀಕ್ಷಿಸುತ್ತಿದ್ದರು.

**ಸಮಾಗಮ**

ಬ್ರಹ್ಮಾವರ ಪೇಟೆಯಿಂದ ಶ್ರೀರಾಜರ ವಿಗ್ರಹ ಯಾತ್ರೆ ಮುಂದೆ ಉಪ್ಪೂರು, ಕೊಳಲಗಿರಿ ರಸ್ತೆ, ಕಲ್ಯಾಣಪುರ-ಸಂತೆಕಟ್ಟೆ, ಗೋಪಾಲಪುರ ಮೂಲಕ ಅಂಬಾಗಿಲು, ಉಡುಪಿಯ ಹೊರ ಮೈಯ ರಾಷ್ಟ್ರೀಯ ಹೆದ್ದಾರಿಯ ಮೂಲಕ ಸಾಗಿ ಅಂಬಲಪಾಡಿಯ ಬಳಿ ಉಡುಪಿಯನ್ನು ಹೊಕ್ಕಿತು. ಬ್ರಹ್ಮಗಿರಿಯಾಗಿ ಸಾಗಿದ ವಿಗ್ರಹಯಾತ್ರೆ ಜೀವವಿಮಾ ಪ್ರತಿಷ್ಠಾನ ಕಚೇರಿ ರಸ್ತೆಯಾಗಿ ಅಜ್ಜರಕಾಡಿನ ಬಳಿ ಜೋಡುಕಟ್ಟೆಯಲ್ಲಿ ಸಂಜೆ ಗಂಟೆ ೬ಕ್ಕೆ, ಉಡುಪಿಯ ದಕ್ಷಿಣ ದಿಕ್ಕಿನ ಚತುಷ್ಮತೀ ತೀರದ ಮಟ್ಟು ಗ್ರಾಮದಿಂದ ಹೊರಟ ಶ್ರೀ ವಾದಿರಾಜ ಮಹಿಮಾಫಲ ಸಮರ್ಪಣ ಯಾತ್ರೆಯನ್ನು ಸಂಧಿಸಿತು.

**ಮಹಿಮಾಫಲ ಸಮರ್ಪಣ ಯಾತ್ರೆ**

ಶ್ರೀವಾದಿರಾಜರು ಐದು ಶತಮಾನಗಳಷ್ಟು ಹಿಂದೆ ಉಡುಪಿಯ ದಕ್ಷಿಣ ದಿಕ್ಕಿನ ಕಟಪಾಡಿ ಬಳಿಯ ಹೊಳೆ ತೀರದ ಮಟ್ಟುಗ್ರಾಮದ ಬಡಕುಟುಂಬಗಳಿಗೆ ಮಹಿಮಾ ಸದೃಶವಾದ ಬೀಜಗಳನ್ನಿತ್ತು ಸ್ವಾದ್ಯವಾದ ಗುಳ್ಳಗಳನ್ನು ಬೆಳೆಸಿ ಅವರಿಗೆ ಜೀವನೋಪಾಯ ಕಲ್ಪಿಸಲು ಮಾಡಿದ ಮಹೋಪಕಾರಕ್ಕಾಗಿ ಇಂದು ಶ್ರೀರಾಜರ ೫೦೦ನೇ ವರ್ಷದ ದಿನ ವಿಪ್ರರಾದಿಯಾಗಿ ಆ ಗ್ರಾಮದ ಎಲ್ಲಾ ವರ್ಗದ ಜನರು ವಾದಿರಾಜ ಗುಳ್ಳಗಳು ತುಂಬಿದ ಬುಟ್ಟಿಗಳನ್ನು ತಲೆಹೊರೆಯಾಗಿಯೂ, ಶ್ರೀವಾದಿರಾಜರ ನೆನಪುಗಳನ್ನು ಕೃತಜ್ಞತೆ ತುಂಬಿದ ಹೃದಯದಲ್ಲೂ ಹೊತ್ತು ಶ್ರೀ ಗುರುರಾಜರ ಕರ್ಮಭೂಮಿಯಾದ ಉಡುಪಿಯ ಗಡಿಯಾದ ಜೋಡುಕಟ್ಟೆಗೆ ತಂದು, ಶ್ರೀರಾಜರ ವಿಗ್ರಹಯಾತ್ರೆ ಸಮೀಪಿಸುತ್ತಿದ್ದಂತೆ, ತಲೆಯ ಮೇಲೆ ಹೊತ್ತು ತಂದ

ಮಹಿಮಾಫಲ ತುಂಬಿದ ಬುಟ್ಟಿಗಳನ್ನು ಶ್ರೀ ವಾದಿರಾಜರಿಗೆ ಅರ್ಪಿಸುವ ಸಂಕೇತವಾಗಿ ನೆಲದಲ್ಲಿರಿಸಿ ಅವರ ವಿಗ್ರಹಕ್ಕೆ ಸಾಷ್ಟಾಂಗ ಪ್ರಣಾಮಮಾಡಿ ಸಮಸ್ತ ಮಟ್ಟು ಗ್ರಾಮಸ್ಥರ ಪರವಾಗಿ ಭಕ್ತಿಪೂರ್ವಕವಾಗಿ ಆಭಾರವನ್ನು ವ್ಯಕ್ತಪಡಿಸಿದರು.

**ಅವತಾರ ಭೂಮಿ ಮತ್ತು ಮಹಿಮಾ ಭೂಮಿಯಿಂದ ಕರ್ಮ ಭೂಮಿಯೆಡೆಗೆ**

ಉಡುಪಿಯ ಅಜ್ಜರಕಾಡು–ಕಿನ್ನಿ ಮೂಲ್ಕಿ ರಸ್ತೆ ಸಂಧಿಸುವಲ್ಲಿರುವ ಜೋಡುಕಟ್ಟೆ ಶ್ರೀಕೃಷ್ಣ ಮಠದ ಪಾಲಿಗೆ ಒಂದು ಮಹತ್ವದ ಸ್ಥಳವೆನಿಸಿದೆ. ಪರ್ಯಾಯ ಸಂಪ್ರದಾಯವನ್ನು ಪರಿಷ್ಕರಿಸಿದ ಶ್ರೀ ವಾದಿರಾಜರು ಜೋಡುಕಟ್ಟೆಯನ್ನು ಶ್ರೀಕೃಷ್ಣ ಮಠ–ಅಷ್ಟಮಠಗಳ ಮಟ್ಟಿಗೆ ಉಡುಪಿಯ ಗಡಿಯನ್ನಾಗಿ ಮಾಡಿದರು. ಉಡುಪಿಯ ಉತ್ತರ ದಿಕ್ಕಿನ ಶ್ರೀ ವಾದಿರಾಜರ ಅವತಾರ ಭೂಮಿಯಾದ ಹೂವಿನ ಕೆರೆಯಿಂದ ಹೊರಟ ಅವರ ವಿಗ್ರಹಯಾತ್ರೆ ಮತ್ತು ದಕ್ಷಿಣ ದಿಕ್ಕಿನ ಶ್ರೀ ವಾದಿರಾಜರ ಮಹಿಮಾ ಭೂಮಿಯಾದ ಮಟ್ಟು ಗ್ರಾಮದಿಂದ ಹೊರಟ ಫಲಸಮರ್ಪಣ ಯಾತ್ರೆ ಶ್ರೀ ವಾದಿರಾಜರ ಕರ್ಮ ಭೂಮಿಯಾದ ಉಡುಪಿಯ ಸಾಂಪ್ರದಾಯಿಕ ಗಡಿಯೆನಿಸಿದ ಜೋಡುಕಟ್ಟೆಯಲ್ಲಿ ಸಂಧಿಸಿದ ಶುಭ ಗಳಿಗೆಯಲ್ಲಿ ಉಡುಪಿಯು ಆಕಾಶದಲ್ಲಿ ಗೋಚರಿಸಿದ ಪುಷ್ಪಕ ವಿಮಾನದಿಂದ (ಹೆಲಿಕಾಪ್ಟರ್) ಭೂಮಿಯ ಮೇಲೆ ಪುಷ್ಪವೃಷ್ಟಿಯಾಯಿತು.

ಶ್ರೀ ವಾದಿರಾಜರು ತಮ್ಮ ಅವತಾರ ಸಮಾಪ್ತಿಯ ವೇಳೆ ಪುಷ್ಪಕ ವಿಮಾನದಲ್ಲಿ ಕುಳಿತು ಗಗನ ಗಾಮಿಗಳಾಗಿ ಅದೃಶ್ಯರಾದ ವಿಷಯ ಸರ್ವವಿದಿತ. ಇಂದು ತಮ್ಮ ಅವತಾರದ ಪಂಚ ಶತಾಬ್ಧಿಯ ದಿನ ಶ್ರೀ ರಾಜರು ಗಗನದಿಂದಲೇ ತಮ್ಮ ಅದೃಶ್ಯ ಹಸ್ತದಿಂದ ಭಕ್ತಾದಿಗಳನ್ನು ಹರಸುತ್ತಿರುವುದರ ಸಂಕೇತವಾಗಿ ಶ್ರೀರಾಜರ ವಿಗ್ರಹ ಯಾತ್ರೆಯುದ್ದಕ್ಕೂ ಪುಷ್ಪವೃಷ್ಟಿಯೊಂದಿಗೆ ಶ್ರೀರಾಜರ ನುಡಿಮುತ್ತುಗಳುಳ್ಳ ಸಂದೇಶ ಪತ್ರಗಳು ಸುರಿಯಲಾರಂಭಿಸಿದುವು.

**ಭೂಮಿ–ಗಗನವನ್ನು ಚಾಚಿದ ಅಭೂತಪೂರ್ವ ಮೆರವಣಿಗೆ**

ಜೋಡುಕಟ್ಟೆಯಲ್ಲಿ ಸಂಧಿಸಿದ ಶ್ರೀ ವಾದಿರಾಜರ ವಿಗ್ರಹಯಾತ್ರೆ ಮತ್ತು ಮಹಿಮಾಫಲ ಸಮರ್ಪಣ ಯಾತ್ರೆ ಒಂದಾಗಿ ಭೂಮಿಯ ಮೇಲೆ ಸಾಗುತ್ತಿದ್ದಂತೆ ಗಗನದಲ್ಲಿ ಶ್ರೀ ವಾದಿರಾಜರ ಸಂದೇಶವಾಹಕ ವಾಹನ ಸಾಗುತ್ತಾ ಪುಷ್ಪವೃಷ್ಟಿಯಿಂದ, ಸಂದೇಶ ಪತ್ರಗಳ ಸುರಿಮಳೆಯಿಂದ, ರಥಬೀದಿಯವರೆಗಿನ ಎಲ್ಲಾ ಬೀದಿಗಳನ್ನು ತುಂಬಿ ನಿಂತ ಸಹಸ್ರ ಸಹಸ್ರ ಮಂದಿ ವೀಕ್ಷಕರ ಭಾವುಕರ ಹೃನ್ಮನಗಳನ್ನು ಆನಂದಗೊಳಿಸಿತು. ಉಡುಪಿಯ ಇತಿಹಾಸದಲ್ಲಿ ನಡೆದ ಯಾವುದೇ ಪರ್ಯಾಯ ಮೆರವಣಿಗೆಯ ಮೂರು ಪಾಲು ಮಂದಿ ಲಕ್ಷಕ್ಕೂ ಮಿಕ್ಕಿದ ಭಾವುಕರು ಶ್ರೀ ವಾದಿರಾಜತೀರ್ಥರ ವಿಗ್ರಹವನ್ನು ಸ್ವಾಗತಿಸಲು ಸಂಭ್ರಮದಿಂದ ಕಾದಿದ್ದು ಈ ಅಭೂತಪೂರ್ವ ಮೆರವಣಿಗೆ ಭೂಮಿ–ಗಗನಗಳನ್ನು ಚಾಚಿ ರಾಜವೈಭವದಿಂದ ಸಾಗುವುದನ್ನು ವೀಕ್ಷಿಸುತ್ತಿದ್ದಂತೆ ಜನಸಾಗರ ಕೃತಕೃತ್ಯ ಭಾವವನ್ನು ಹೊಂದಿತು.

ಶ್ರೀ ರಾಜರ ವಿಗ್ರಹಯಾತ್ರೆ ರಥಬೀದಿ ತಲುಪಿ ಶ್ರೀಕೃಷ್ಣ ಮಠದ ಹೆಬ್ಬಾಗಿಲಿಗೆ ಆಗಮಿಸಿದಾಗ ವಿಗ್ರಹವನ್ನು ಅಷ್ಟಮಠಾಧೀಶರೊಂದಿಗೆ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠಾಧೀಶರು ಮತ್ತು ಶ್ರೀ ಭೀಮನಕಟ್ಟೆಯ ಶ್ರೀ ಭೀಮಸೇತು ಮುನಿವೃಂದ ಮಠಾಧೀಶರು ಭಕ್ತಿಯಿಂದ ಸ್ವಾಗತಿಸಿದರು.

### ಶ್ರೀ ವಾದಿರಾಜೋತ್ಸವದ ಉದ್ಘಾಟನೆ

ಶ್ರೀ ರಾಜರ ವಿಗ್ರಹವನ್ನು ಭಜಕರು ಹೊತ್ತು ಬಡಗುಮಾಳಿಗೆಯ ಪರ್ಯಾಯದ ಅರಳು ಗದ್ದುಗೆ ಹಾಸುವಲ್ಲಿ ತಂದು ಇರಿಸಿದ ಮೇಲೆ ಪರ್ಯಾಯ ಶ್ರೀ ಸೋದೆವಾದಿರಾಜ ಮಠಾಧೀಶರು ಶ್ರೀ ರಾಜರ ವಿಗ್ರಹ ಮತ್ತು ಪಾದುಕೆಗಳಿಗೆ ಆರತಿ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ಮಂತ್ರಾಲಯದ ಶ್ರೀಗಳವರು ಜ್ಯೋತಿಯನ್ನು ಬೆಳಗಿಸಿ ಶ್ರೀ ವಾದಿರಾಜತೀರ್ಥರ ಪಂಚ ಶತಾಬ್ದ ಉತ್ಸವವನ್ನು ಉದ್ಘಾಟಿಸಿದರು.

ಸುಮಾರು ೫೦೦ ವರ್ಷಗಳ ಹಿಂದೆ ಯಾವ ಪವಿತ್ರ ಸ್ಥಳದಲ್ಲಿ ಅರಳು ಗದ್ದುಗೆಯನ್ನು ಹಾಸಿ ಮೊದಲ ಬಾರಿಗೆ ಶ್ರೀ ವಾದಿರಾಜರು ಪರ್ಯಾಯ ದರ್ಬಾರು ಸಭೆಯನ್ನು ನಡೆಸಿದರೋ ಅದೇ ಸ್ಥಳದಲ್ಲಿ ಶ್ರೀ ವಾದಿರಾಜರ ಶಿಲಾ ವಿಗ್ರಹವನ್ನು ನಿಲ್ಲಿಸಿ ಅವರ ಪಂಚ ಶತಾಬ್ಧಿ ಉತ್ಸವದ ಉದ್ಘಾಟನೆಯನ್ನು ನೆರವೇರಿಸಲಾಯಿತು.

ಶ್ರೀ ವಾದಿರಾಜೋತ್ಸವದ ಉದ್ಘಾಟನೆ ಬಡಗು ಮಾಳಿಗೆಯಲ್ಲಿ ನಡೆಯಿತಾದರೂ, ಸಮಾರಂಭದ ಕಾರ್ಯಕಲಾಪಗಳನ್ನು ನಡೆಸಲು ಅಲ್ಲಿಯ ಸ್ಥಳಾಭಾವದಿಂದ ಮೊದಲೇ ನಿಶ್ಚಯಿಸಿದಂತೆ ರಾಜಾಂಗಣದ 'ಶ್ರೀ ವಾದಿರಾಜರ ಮಂಟಪ'ದಲ್ಲಿ ಈ ಕಾರ್ಯಕ್ರಮಗಳು ನಡೆದುವು.

### ಶ್ರೀ ವಾದಿರಾಜೋತ್ಸವದ ದರ್ಬಾರು

ಸಮಾರಂಭದ ಕಾರ್ಯಕಲಾಪಗಳನ್ನು ನಡೆಸಲು ಎಲ್ಲಾ ಮಠಾಧೀಶರು ಬಡಗು ಮಾಳಿಗೆಯಿಂದ 'ಶ್ರೀ ವಾದಿರಾಜ ಮಂಟಪ'ಕ್ಕೆ ತೆರಳುತ್ತಿದ್ದಂತೆ ಅಲ್ಲಿ ನೆರೆದ ಭಾವುಕ ಜನರು ಜಯಕಾರದೊಂದಿಗೆ ಶ್ರೀ ಪಾದಂಗಳವರನ್ನು ಬರಮಾಡಿಕೊಂಡರು. ಸಭಾಂಗಣವಿಡೀ ಜನರಿಂದ ತುಂಬಿತ್ತು. ವೇದಿಕೆಯ ಮೇಲೆ ಉತ್ಸವದ ಉದ್ಘಾಟಕರಾದ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠಾಧೀಶರಾದ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರೂ, ಸಮಾರಂಭದ ಅಧ್ಯಕ್ಷರಾದ ಶ್ರೀ ಭೀಮನ ಕಟ್ಟೆ ಮಠಾಧೀಶರೂ, ಪರ್ಯಾಯ ಪೀಠಸ್ಥರಾದ ಶ್ರೀ ಸೋದೆ ವಾದಿರಾಜ ಮಠಾಧೀಶರೂ, ಶ್ರೀ ಕಾಣಿಯೂರು, ಶ್ರೀ ಕೃಷ್ಣಾಪುರ ಮತ್ತು ಶ್ರೀ ಶೀರೂರು ಮಠಾಧೀಶರೂ ಆಸೀನರಾದರು.

ಶ್ರೀ ಸೋದೆ ವಾದಿರಾಜ ಮಠಾಧೀಶರು ಯತಿ ವರೇಣ್ಯರನ್ನೂ, ನೆರೆದ ಸಭಾಸದರನ್ನೂ ಸ್ವಾಗತಿಸಿ ಶ್ರೀ ಗುರುರಾಜರ ಸಂದೇಶದ ಔನ್ನತ್ಯವನ್ನೂ ಅವರ ಪಂಚಶತಾಬ್ಧಿ ಉತ್ಸವದ ಮಹತ್ವವನ್ನೂ ವಿವರಿಸಿ ಅನುಗ್ರಹ ಭಾಷಣ ಮಾಡಿದರು. ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠಾಧೀಶರು ಉದ್ಘಾಟನಾ ರೂಪದಲ್ಲಿ ಅನುಗ್ರಹ ಭಾಷಣಮಾಡಿ ಶ್ರೀ ವಾದಿರಾಜರ ಭಾವಚಿತ್ರಗಳನ್ನು ಅನಾವರಣಗೊಳಿಸಿದರು.

### ಭಾವುಕ ಕಲಾಕಾರರಿಗೆ ಸಮ್ಮಾನ

ತಮ್ಮ ಭಕ್ತಿಗೀತೆಗಳಿಂದ ಕನ್ನಡದ ಜನಮನವನ್ನು ಬಹುಕಾಲದಿಂದ ರಂಜಿಸಿಕೊಂಡು ಬಂದಿರುವ ನಾಡಿನ ಪ್ರತಿಭಾವಂತ ಕಲಾವಿದ ಡಾ॥ ರಾಜಕುಮಾರರು ವಿಶೇಷ ಆಮಂತ್ರಿತರಾಗಿ ಈ ಸಮಾರಂಭದಲ್ಲಿ ಭಾಗವಹಿಸಿದ್ದು ಅವರಿಗೆ ಈ ಸಂದರ್ಭದಲ್ಲಿ ಪರ್ಯಾಯ ಪೀಠದಿಂದ

'ಕಲಾ ಭೂಷಣ' ಎಂಬ ಪ್ರಶಸ್ತಿಯನ್ನಿತ್ತು ಸಮ್ಮಾನಿಸಲಾಯಿತು. ಡಾ। ರಾಜಕುಮಾರರು ತಮಗೆ ನೀಡಿದ ಸಮ್ಮಾನಕ್ಕೆ ಉತ್ತರ ನೀಡಿ ಶ್ರೀಪಾದಂಗಳವರಿಗೆ ಭಕ್ತಿ ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸಿದರು. ಇದೇ ಸಂದರ್ಭದಲ್ಲಿ ಈ ಕಲಾವಿದರು ಎರಡು ಭಕ್ತಿಗೀತೆಗಳನ್ನು ಹಾಡಿ ನೆರೆದ ಸಭಾಸದರನ್ನು ಸಂತಸಗೊಳಿಸಿದರು.

ಶ್ರೀವಾದಿರಾಜರ ಶಿಲಾ ವಿಗ್ರಹವನ್ನು ನಿರ್ಮಿಸಿದ ಮೈಸೂರಿನ ಶಿಲ್ಪಿ ಶ್ರೀ ಪಣಿಯಾಡಿ ಶ್ರೀನಿವಾಸಾಚಾರ್ಯರನ್ನೂ, ಶ್ರೀ ವಾದಿರಾಜರ ತೈಲಚಿತ್ರವನ್ನು ರಚಿಸಿದ ಉಡುಪಿಯ ಕಲಾವಿದ ಶ್ರೀ ಆರ್.ಕೆ. ದೇವಾಡಿಗಾರರನ್ನೂ ಈ ಸಂದರ್ಭದಲ್ಲಿ ಪರ್ಯಾಯ ಪೀಠದಿಂದ ಶಾಲು ಹೊದಿಸಿ ಗೌರವಿಸಲಾಯಿತು.

### ಶಿಷ್ಯವೃಂದದವರಿಂದ ನಿಧಿ ಸಮರ್ಪಣೆ

ಸೋದಾ ಕ್ಷೇತ್ರದಲ್ಲಿ ಶ್ರೀ ವಾದಿರಾಜರ ಆರಾಧನೋತ್ಸವದ ಬಗ್ಗೆ ಶಿಷ್ಯರಾದ ಅಖಿಲ ದೈವಜ್ಞ ಬ್ರಾಹ್ಮಣ ಸಮಾಜದವರು ಸಂಗ್ರಹಿಸಿದ ಶಾಶ್ವತ ನಿಧಿಯನ್ನು ಶ್ರೀ ಸೋದೆ ವಾದಿರಾಜ ಮಠಾಧೀಶರ ಸನ್ನಿಧಾನಕ್ಕೆ ಸಮಾಜದ ಟ್ರಸ್ಟಿಗಳಿಂದ ಸಲ್ಲಿಸಲಾಯಿತು. ಶ್ರೀ ವಾದಿರಾಜೋತ್ಸವದ ಉದ್ಘಾಟನಾ ದಿನದ ಸಂತರ್ಪಣೆ ಮತ್ತು ಉತ್ಸವದ ಖರ್ಚಿನ ಬಗ್ಗೆ ಕೋಟೇಶ್ವರ ಮಾಗಣೆಯ ಶ್ರೀಮಠದ ಶಿಷ್ಯವೃಂದದವರು ಸಂಗ್ರಹಿಸಿದ ನಿಧಿಯನ್ನು ಶ್ರೀ ಸೋದೆ ಶ್ರೀಪಾದರಿಗೆ ಸಲ್ಲಿಸಲಾಯಿತು.

ಸಭೆಯಲ್ಲಿ ಉಪಸ್ಥಿತರಿದ್ದ ಶ್ರೀಪಾದಂಗಳವರಿಂದ ಅನುಗ್ರಹ ಭಾಷಣವಾದ ಬಳಿಕ ಸಮಾರಂಭದ ಅಧ್ಯಕ್ಷ ಪೀಠವನ್ನು ಅಲಂಕರಿಸಿದ ಶ್ರೀ ಭೀಮನಕಟ್ಟೆ ಶ್ರೀಪಾದಂಗಳವರು ಅನುಗ್ರಹ ಭಾಷಣ ಮಾಡಿದರು.

### ವಿದ್ವತ್ ಸಭಾ

ಶ್ರೀ ವಾದಿರಾಜ ಗುರುಸಾರ್ವಭೌಮರ ಪಂಚಶತಾಬ್ಧಿ ಉತ್ಸವದ ಮುಖ್ಯ ಕಾರ್ಯಕ್ರಮಗಳಲ್ಲಿ ಒಂದಾಗಿ ಶ್ರೀಮತ್ಸಮೀರ ಸಮಯ ಸಂವರ್ಧಿನೀ ಸಭಾ ನಿರ್ವಾಹಕರಾದ ಮಂತ್ರಾಲಯ ಮಠಾಧೀಶರ ಆಶ್ರಯದಲ್ಲಿ ವಿದ್ವತ್ ಸಭಾದ ಕಾರ್ಯ ಕಲಾಪಗಳು ಜನವರಿ ೩೦ ಮತ್ತು ೩೧ರಂದು ಪೂರ್ವಾಹ್ನ ಮತ್ತು ಅಪರಾಹ್ನ 'ಶ್ರೀ ವಾದಿರಾಜ ಮಂಟಪ'ದಲ್ಲಿ ಜರಗಿದುವು. ನೂರಾರು ಪಂಡಿತರು, ವಿದ್ವಾಂಸರು, ತತ್ತ್ವವೇತ್ತರಿಂದ ಕೂಡಿದ ಈ ಸಭೆಯಲ್ಲಿ ಅನೇಕ ಗಹನ ತಾತ್ತ್ವಿಕ ವಿಷಯಗಳಲ್ಲಿ ವಿಚಾರಮಂಥನ ನಡೆಯಿತು.

### ವಿಚಾರಗೋಷ್ಠಿಗಳು

ಶ್ರೀ ವಾದಿರಾಜೋತ್ಸವದ ಅಂಗವಾಗಿ ಜನವರಿ ೩೦ ಮತ್ತು ೩೧ರಂದು ಸಂಜೆ 'ಶ್ರೀ ವಾದಿರಾಜ ಮಂಟಪ'ದಲ್ಲಿ ಶ್ರೀರಾಜರ ಬಗ್ಗೆ ಎರಡು ವಿಚಾರ ಗೋಷ್ಠಿಗಳು ನಡೆದವು. ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಉಪನ್ಯಾಸಗಳನ್ನು ನೀಡಲು ಪರಿಣಿತ ವಿದ್ವಾಂಸರನ್ನು ನಾಡಿನ ಬೇರೆ ಬೇರೆ ಭಾಗಗಳಿಂದ ಆಮಂತ್ರಿಸಲಾಗಿತ್ತು.

### ೧. ಶ್ರೀ ವಾದಿರಾಜರ ಕೃತಿದರ್ಶನ

ಜನವರಿ ೩೦ರಂದು ಸಂಜೆ ಶ್ರೀ ಕಾಣಿಯೂರು ಮಠಾಧೀಶರ ಅಧ್ಯಕ್ಷತೆಯಲ್ಲಿ ನಡೆದ

'ಶ್ರೀ ವಾದಿರಾಜ ಕೃತಿದರ್ಶನ' ವಿಚಾರ ಗೋಷ್ಠಿಯಲ್ಲಿ ಶ್ರೀ ವಾದಿರಾಜರ ಬೇರೆ ಬೇರೆ ಕೃತಿಗಳ ಬಗ್ಗೆ ಆಮಂತ್ರಿತ ವಿದ್ವಾಂಸರು ಉಪನ್ಯಾಸ ನೀಡಿದರು. 'ಯುಕ್ತಿಮಲ್ಲಿಕಾ' ಕುರಿತು ಬೆಂಗಳೂರಿನ ಪ್ರೊ. ಕೆ.ಟಿ. ಪಾಂಡುರಂಗಿಯವರು 'ರುಕ್ಮಿಣೀಶ ವಿಜಯ'ವನ್ನು ಕುರಿತು ಮುಂಬೈಯ ಡಾ। ಬಿ.ಎನ್.ಕೆ. ಶರ್ಮ ಅವರು, 'ತೀರ್ಥ ಪ್ರಬಂಧ'ದ ಬಗ್ಗೆ ಕುಂಭಕೋಣಂನ ಶ್ರೀ ಆರ್. ಅಪ್ಪಣ್ಣಾಚಾರ್ ಅವರು ಮತ್ತು 'ದಶಾವತಾರ ಸ್ತುತಿಗಳು' ಕುರಿತು ಮೈಸೂರಿನ ಡಾ। ಜಿ. ವರದರಾಜರಾವ್ ಅವರು ಉಪನ್ಯಾಸಗಳನ್ನು ನೀಡಿ ನೆರೆದ ಶ್ರೋತೃಗಳನ್ನು ಸಂತೋಷಗೊಳಿಸಿದರು.

ಈ ಕಾರ್ಯಕ್ರಮದ ಮೊದಲಲ್ಲಿ ತುಮಕೂರಿನ ಶ್ರೀ ಬಿ.ಪಿ. ನಾಗಭೂಷಣ ರಾವ್ ವಿರಚಿತ 'ಶ್ರೀವಾದಿರಾಜ ಚರಿತೆ' ಎಂಬ ಕಿರು ಹೊತ್ತಿಗೆಯನ್ನು ಬಿಡುಗಡೆಗೊಳಿಸಲಾಯಿತು.

**೨. ಶ್ರೀ ವಾದಿರಾಜ ಮಹಿಮಾದರ್ಶನ**

ಜನವರಿ ೩೧ರ ಸಂಜೆ ಶ್ರೀ ಕೃಷ್ಣಾಪುರ ಮಠಾಧೀಶರ ಅಧ್ಯಕ್ಷತೆಯಲ್ಲಿ ನಡೆದ 'ಶ್ರೀ ವಾದಿರಾಜ ಮಹಿಮಾದರ್ಶನ' ವಿಚಾರಗೋಷ್ಠಿಯಲ್ಲಿ ಮೈಸೂರಿನ ಶ್ರೀ ಎಚ್. ಸುಬ್ಬರಾವ್ ಅವರು 'ಶ್ರೀ ವಾದಿರಾಜರ ಮಹಿಮೆಗಳು' ಮತ್ತು ಹುಬ್ಬಳಿಯ ಶ್ರೀ ಪಾ.ವೆಂ. ಆಚಾರ್ಯರು 'ಶ್ರೀ ವಾದಿರಾಜರ ಸಾಧನೆಗಳು' ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಿದರು. 'ದಾಸ ಸಾಹಿತ್ಯ'ದ ಬಗ್ಗೆ ಶೃಂಗೇರಿಯ ಶ್ರೀ ಎ.ಎಸ್. ರಾಮಕೃಷ್ಣ ಶಾಸ್ತ್ರಿಯವರು ಉಪನ್ಯಾಸ ಮಾಡಿದರು.

**ಸಾಂಸ್ಕೃತಿಕ ಕಾರ್ಯಕ್ರಮ**

ಜನವರಿ ೨೯, ೩೦ ಮತ್ತು ೩೧ರಂದು ನಡೆದ ಶ್ರೀ ವಾದಿರಾಜತೀರ್ಥರ ಪಂಚ ಶತಾಬ್ಧಿ ಅಂಗವಾಗಿ ಪ್ರತಿ ರಾತ್ರಿ 'ಶ್ರೀ ವಾದಿರಾಜ ಮಂಟಪ'ದಲ್ಲಿ ದಾಸ ಸಾಹಿತ್ಯ-ಸಂಗೀತವನ್ನು ಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

ಜನವರಿ ೨೯ರ ರಾತ್ರಿ ಬೆಂಗಳೂರಿನ ಕಲಾವಿದೆ ಶ್ರೀಮತಿ ಬಿ.ಕೆ. ಸುಮಿತ್ರಾ ಮತ್ತು ಬಳಗದವರಿಂದ ಭಕ್ತಿಗೀತೆಗಳ ರಂಜನೀಯ ಕಾರ್ಯಕ್ರಮ ನಡೆಯಿತು. ದಿನಾಂಕ ೩೦ರ ರಾತ್ರಿ ಮಂಗಳೂರಿನ ಕಲಾವಿದ ಶ್ರೀ ಶ್ರೀನಿವಾಸ ಉಡುಪ ಮತ್ತು ಬಳಗದವರಿಂದ ಶ್ರೀ ವಾದಿರಾಜರ ಕೃತಿಗಳ ಶಾಸ್ತ್ರೀಯ ಹಾಡುಗಾರಿಕೆಯೂ, ಕಡಿಯಾಳಿಯ ಬಾಲಗಾನ ಮೇಳದವರಿಂದ ಗಾನರಸಮಂಜರಿ ಕಾರ್ಯಕ್ರಮವೂ, ಮಂತ್ರಾಲಯದ ಶ್ರೀ ಅಶೋಕ ಕಮಲಾಪುರ, ತುಮಕೂರಿನ ಕು। ಬಿ.ಎಸ್. ವೀಣಾ ಮತ್ತು ಹೊಸನಗರದ ಶ್ರೀ ಪಾಂಡುರಂಗ ಭಟ್ ಇವರ ಭಕ್ತಿಗೀತೆಗಳ ಕಾರ್ಯಕ್ರಮವೂ, ದಾಸಕೀರ್ತನ ಸ್ಪರ್ಧೆಯಲ್ಲಿ ವಿಜೇತರಾದವರಿಂದ ಹಾಡುಗಾರಿಕೆಯ ಕಾರ್ಯಕ್ರಮವೂ ನಡೆದುವು. ಮೇಲಿನ ಕಾರ್ಯಕ್ರಮದ ಮೊದಲು ಶ್ರೀ ವಾದಿರಾಜರ ಬಗ್ಗೆ ಗ್ರಂಥಗಳನ್ನು ರಚಿಸಿ ಶ್ರೀರಾಜರ ಸಂದೇಶ ಪ್ರಸಾರ ಕಾರ್ಯದಲ್ಲಿ ವಿಶೇಷ ಆಸಕ್ತಿವಹಿಸಿದ ಪಂಡಿತರುಗಳಾದ ಶ್ರೀ ಅಡ್ಡೆ ವೇದವ್ಯಾಸಾಚಾರ್ಯರು ಮತ್ತು ಶ್ರೀ ಎಚ್. ಸುಬ್ಬರಾವ್ ಅವರನ್ನು ಪರ್ಯಾಯ ಶ್ರೀಗಳವರು ಶಾಲು ಹೊದಿಸಿ ಗೌರವಿಸಿದರು. ದಿನಾಂಕ ೩೧ರ ರಾತ್ರಿ ಶ್ರೀ ಎಂ.ಎನ್. ಬೆಟಗೇರಿ, ಸಿದ್ಧಾಪುರ, ಶ್ರೀ ಮಂಜುನಾಥ ಐತಾಳ, ಚಿತ್ರದುರ್ಗ ಮೊದಲಾದವರ ಹಾಡುಗಾರಿಕೆಯೂ ಹರಿಕಥಾ ಸ್ಪರ್ಧೆಯಲ್ಲಿ ಕ್ರಮವಾಗಿ ಪ್ರಥಮ ಮತ್ತು

ದ್ವಿತೀಯ ಸ್ಥಾನಗಳನ್ನು ಗಳಿಸಿದ ಉಡುಪಿಯ ಶ್ರೀ ಆರ್. ಶ್ರೀಶದಾಸ್ ಮತ್ತು ಶ್ರೀಕೃಷ್ಣದಾಸ ಮುರಗೋಡ ಇವರಿಂದ ಹರಿಕಥಾ ಕಾರ್ಯಕ್ರಮವೂ ನಡೆದುವು.

**ಸಮಾರೋಪ**

ಜನವರಿ ೩೧ರ ರಾತ್ರಿಯ ಸಾಂಸ್ಕೃತಿಕ ಕಾರ್ಯ ಕ್ರಮದೊಂದಿಗೆ ಶ್ರೀವಾದಿರಾಜೋತ್ಸವದ ಸಮಾರೋಪ ಸಮಾರಂಭ ನಡೆಯಿತು. ಈ ಸಂದರ್ಭದಲ್ಲಿ ಹರಿಕಥಾ ಸ್ಪರ್ಧೆ ಮತ್ತು ದಾಸಕೀರ್ತನ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಪರ್ಯಾಯ ಶ್ರೀ ಸೋದೆ ವಾದಿರಾಜ ಮಠಾಧೀಶರು ಬಹುಮಾನಗಳನ್ನಿತ್ತು ಹರಸಿದರು. ಅಂತೆಯೇ ಹರಿಕಥಾ ಸ್ಪರ್ಧೆಯಲ್ಲಿ ತೀರ್ಪುಗಾರರಾಗಿ ಮತ್ತು ಹಿಮ್ಮೇಳವಾದಕರಾಗಿ ಸಹಕರಿಸಿದ ಮಹನೀಯರಿಗೂ, ಶ್ರೀ ವಾದಿರಾಜರನ್ನು ಕುರಿತು ಸ್ತುತಿಸಿದ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದ ಉಡುಪಿಯ ಶ್ರೀ ಬಿ. ಸುಂದರ ರಾವ್ ಅವರಿಗೂ, ಬೇರೆ ಬೇರೆ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡ ಎಲ್ಲಾ ಉಪನ್ಯಾಸಕರಿಗೂ, ಕಲಾವಿದರಿಗೂ ಪರ್ಯಾಯ ಶ್ರೀಪಾದರು ಪ್ರಸಾದವನ್ನಿತ್ತು ಆಶೀರ್ವದಿಸಿದರು.

ಪರ್ಯಾಯ ಶ್ರೀಗಳವರು ಸಮಾರೋಪ ಭಾಷಣ ಮಾಡುತ್ತಾ ತಮ್ಮ ಪರ್ಯಾಯ ಪೀಠಾರೋಹಣ ಉತ್ಸವದೊಂದಿಗೆ ಮೇಳೈಸಿದ ಶ್ರೀವಾದಿರಾಜೋತ್ಸವವು ತನ್ನ ಅರ್ಥಪೂರ್ಣ ಕಾರ್ಯಕ್ರಮಗಳಿಂದ ಭಾವುಕರ ಮನಸ್ಸಿಗೆ ಆನಂದವುಂಟು ಮಾಡಿರುವ ವಿಷಯವು ತಮಗೆ ವೇದ್ಯವಾಗಿದೆಯೆಂದೂ, ಇಂತಹ ಮಹತ್ವಪೂರ್ಣ ಉತ್ಸವಗಳ ಉದ್ದೇಶವಾದರೋ ಜನರಲ್ಲಿ ಧರ್ಮನಿಷ್ಠೆ ಮತ್ತು ಸಂಸ್ಕೃತಿ ಪ್ರೇಮವನ್ನು ಮೂಡಿಸಿ ಬೆಳೆಸುವುದೇ ಆಗಿದೆಯೆಂದೂ ತಿಳಿಯಪಡಿಸುತ್ತಾ ಕಳೆದ ಮೂರು ವಾರಗಳಿಂದ ಅವ್ಯಾಹತವಾಗಿ ನಡೆದು ಬಂದಿರುವ ಪರ್ಯಾಯೋತ್ಸವ–ಶ್ರೀ ವಾದಿರಾಜೋತ್ಸವದ ಧಾರ್ಮಿಕ–ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳ ಯಶಸ್ವಿ ನಿರ್ವಹಣೆಯಲ್ಲಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನೂ ಹರಸಿದರು.

ಇಂತು ಶ್ರೀ ಸೋದೆ ವಾದಿರಾಜ ಮಠಾಧೀಶರ ಪರ್ಯಾಯ ಪೀಠಾರೋಹಣ ಮಹೋತ್ಸವ ಮತ್ತು ಶ್ರೀ ವಾದಿರಾಜ ಗುರುಸಾರ್ವಭೌಮರ ಅವತಾರದ ಪಂಚ ಶತಾಬ್ಧಿ ಉತ್ಸವ ೧೯೮೦ನೇ ಜನವರಿ ದಿನಾಂಕ ೭ರಿಂದ ೩೧ರ ವರೆಗೆ ವೈಭವೋಪೇತವಾಗಿ ಜರಗಿ ಉಡುಪಿಯ ಶ್ರದ್ಧಾಳುಗಳ ಪಾಲಿಗೂ, ಪರವೂರುಗಳಿಂದ ಬಂದ ಯಾತ್ರಾರ್ಥಿಗಳ ಪಾಲಿಗೂ ಧಾರ್ಮಿಕ–ಸಾಂಸ್ಕೃತಿಕ ಮಹತ್ವದ ಒಂದು ಮಹಾ ಸಂಭ್ರಮದ ಜಾತ್ರೆಯಲ್ಲಿ ತಾವು ಪಾಲ್ಗೊಂಡ ಸಂತೃಪ್ತಿಯನ್ನೂ ಸಂತೋಷವನ್ನೂ ತಂದುಕೊಟ್ಟಿತು.

**ಪರ್ಯಾಯ ಪೀಠದಿಂದ ಸಂದೇಶ**

ನಮ್ಮ ತೃತೀಯ ಪರ್ಯಾಯ ಪೀಠಾರೋಹಣದೊಂದಿಗೆ ಸಮಾವೇಶಗೊಂಡ ಗುರುಸಾರ್ವಭೌಮ ಶ್ರೀ ವಾದಿರಾಜತೀರ್ಥರ ಅವತಾರದ ಪಂಚಶತಮಾನೋತ್ಸವ ಇದೇ ಜನವರಿಯ ಕೊನೆಯ ಮೂರು ವಾರಗಳಲ್ಲಿ ನಡೆದು ಉಡುಪಿಯಲ್ಲಿ ಸರಳ ಸಾತ್ವಿಕ ವಾತಾವರಣವನ್ನು ನಿರ್ಮಿಸಿತು. ನಮ್ಮ ಪುರಪ್ರವೇಶ ಮೊದಲ್ಗೊಂಡು ಜನವರಿಯ ಕೊನೆಯ ದಿನದ ತನಕ ಶ್ರೀಕೃಷ್ಣ ಸನ್ನಿಧಿಯಲ್ಲಿ ಪೂಜೆ, ಉತ್ಸವ, ಮೆರವಣಿಗೆ, ವಿಚಾರಗೋಷ್ಠಿ, ಸಂಗೀತ ಮೊದಲಾದುವುದರ ಸಮಾರಾಧನೆಯೇ ನಡೆಯಿತು. ಊರು–ಪರವೂರುಗಳ ಸಹಸ್ರಾರು

ಮಂದಿ ಭಕ್ತ ಭಾವುಕರು ಯಾತ್ರಿಕರು ಶ್ರೀಮಠದ ಶಿಷ್ಯರು ಈ ಸಮಾರಾಧನೆಯಲ್ಲಿ ಪಾಲ್ಗೊಂಡು ಸಂತಸಭರಿತರಾದ ವಿಷಯ ನಮಗೆ ಮನವರಿಕೆಯಾಗಿದೆ.

ಪರ್ಯಾಯೋತ್ಸವ-ಶ್ರೀ ವಾದಿರಾಜೋತ್ಸವ ಎಂಬ ಹೆಸರಿನಲ್ಲಿ ಉಡುಪಿಯಲ್ಲಿ ನಡೆದ ಮೂರು ವಾರಗಳ ಅವಧಿಯ ಸಮಾರಂಭಗಳ ಸರಮಾಲೆ ಜನರಲ್ಲಿ ಧರ್ಮಶ್ರದ್ಧೆಯನ್ನೂ ಸಂಸ್ಕೃತಿ ಪ್ರೇಮವನ್ನೂ ಹೆಚ್ಚಿಸಲು ಸಹಕಾರಿಯಾಗಿದ್ದರೆ ನಮಗೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೆ ಇಲ್ಲ. ನಾವು ಹಮ್ಮಿಕೊಂಡು ಉತ್ಸವದ ಉದ್ದೇಶವಾದರೂ ಇಷ್ಟೇ. ಎಲ್ಲಕ್ಕಿಂತ ನಮಗೆ ಹೆಚ್ಚಿನ ಸಂತೋಷವನ್ನುಂಟುಮಾಡಿದ ವಿಷಯವೆಂದರೆ ಯಾವ ಗುರುವರೇಣ್ಯರು ಉಡುಪಿ ಪರ್ಯಾಯದ ವಿಧ್ಯುಕ್ತಕ್ರಿಯೆಗೆ ಜಾತ್ರೆಯ ರೂಪನ್ನು ತೊಡಿಸಿ, ಶ್ರೀಕೃಷ್ಣಮಂದಿರ ಮತ್ತು ಅಷ್ಟಮಠಗಳ ಎಲ್ಲಾ ಕ್ರಮನಿಯಮಗಳನ್ನು ಅಲಂಕಾರದ ಚೌಕಟ್ಟಿನಲ್ಲಿರಿಸಿ ಉಡುಪಿಯ ಆಕರ್ಷಣೆಯನ್ನು ಹೆಚ್ಚಿಸಿದರೋ ಆ ಗುರುಸಾರ್ವಭೌಮರ ಅವತಾರದ ಪಂಚಶತಾಬ್ಧಿ ಉತ್ಸವ ಹಿಂದೆ ಎಂದೂ ನಡೆಯದಷ್ಟು ಶೋಭಾಯಮಾನವಾಗಿ ನಡೆಯಿತೆಂಬ ಸಂಗತಿ. ಇದನ್ನು ಸಾಧ್ಯಗೊಳಿಸಿದವರು ನಮ್ಮ ಮಠದ ಶಿಷ್ಯರು, ಅಭಿಮಾನಿಗಳು, ಶ್ರೀಕೃಷ್ಣ ಭಜಕರು, ಸ್ಥಳೀಯ ನಾಗರಿಕರು ಮತ್ತು ಕಾರ್ಯಕರ್ತರನ್ನೊಳಗೊಂಡ ಉತ್ಸವ ಸಮಿತಿಯ ಸದಸ್ಯರು. ಇವರೆಲ್ಲರಿಗೂ ಹಾಗೂ ಮೇಲ್ಲಿನ ಸಮಾರಂಭಗಳಲ್ಲಿ ಪಾಲ್ಗೊಂಡು ತಮ್ಮ ತನು ಮನ ಧನಗಳಿಂದ ಸಹಕರಿಸಿದ ಎಲ್ಲಾ ಅಭಿಮಾನಿಗಳಿಗೂ ಹರಿವಾಯುಗಳನ್ನು ಪ್ರಾರ್ಥಿಸಿ ನಾವು ಆಶೀರ್ವದಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು,

ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರು



## 'ವಿಶ್ವ ಸೌರಭ' ಸ್ಮರಣ ಸಂಚಿಕೆಯಿಂದ ಉದ್ಧೃತ

## ಹೊಳೆಹೊನ್ನೂರಿನಲ್ಲಿ ನಡೆದ ಶ್ರೀಗಳವರ ಸುವರ್ಣ ಮಹೋತ್ಸವ ಮತ್ತು ಭಾಗೀರಥಿ ದರ್ಶನ

ಲೇಖನ : ಎಸ್.ಆರ್. ಪ್ರಹ್ಲಾದಾಚಾರ್ಯ

ಅಂಗೀರಸ ಸಂ॥ ಆಶ್ವೀಜ ಶುದ್ಧ ತೃತೀಯಾ ಮಂಗಳವಾರ ಸ್ವಾತಿ ಮಹಾನಕ್ಷತ್ರದ ಶುಭ ದಿವಸ ಭದ್ರಾತಟದ ಸ್ವರ್ಣಪುರಿಯ (ಹೊಳೆಹೊನ್ನೂರು)ಲ್ಲಿ ಶ್ರೀ ಶ್ರೀ ಸತ್ಯಧರ್ಮ ಶ್ರೀ ಪಾದಂಗಳವರ ಬೃಂದಾವನದ ದಿವ್ಯ ಸನ್ನಿಧಿಯಲ್ಲಿ ಭಕ್ತರುಗಳ ಸಂಭ್ರಮವೊ ಸಂಭ್ರಮ. ಹೊನ್ನಿನಹೊಳೆಯೇ ಹರಿದ ಹೊಳೆಹೊನ್ನೂರಿನಲ್ಲಿ ಭಕ್ತಿಯ ಹೊಳೆಯನ್ನು ಹರಿಸಿದ, ಭಕ್ತರಿಗೆ "ಆನಂದ"ವೇನೆಂಬುದೇನೆಂದು ಅನುಭವವಾದ ದಿನವಾಗಿತ್ತು. ತಾ. ೨೯-೯-೧೯೯೨.

ಈ ಆನಂದಕ್ಕೆ ಕಾರಣವೇನು ಎಂದರೆ ಹಿಂದಿನ ದಿನ ಆಶ್ವೀಜ ಶು॥ ಬಿದಿಗೆ "ಇಂದು" ವಾರದಂದು "ಇಂದು"ವಿನಂತೆ ಆಗಮಿಸಿದ ಸೋದಾಮಠದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ "ಪ್ರಪ್ರಥಮ" ಆಗಮನದ ದಿನ. ಅದೂ ಶ್ರೀ ಸತ್ಯಧರ್ಮರ ದರ್ಶನಕ್ಕಾಗಿ ಬಂದ ಶುಭದಿನ ಅದಾಗಿತ್ತು. ಈ ಶುಭದಿನಕ್ಕೆ "ಆನಂದ"ವೇ ಅರಸಿ ಬಂದಿತ್ತು ಎನ್ನುವಂತೆ ಇತ್ತು. ಕೋಟೆಯಲ್ಲಿ ಶ್ರೀಜನಾರ್ಧನ ಸ್ವಾಮಿಯ ಸನ್ನಿಧಿಯಲ್ಲಿ ನೂರಾರು ಸುಮಂಗಳೆಯರು ಶ್ರೀಗಳವರಿಗೆ ಮಂಗಳಕರವಾದ ಮಂಗಳಾರತಿ ಮಾಡಿ ಕೃತಾರ್ಥರಾದರು. ನಂತರ ದಿವ್ಯವಾದ ಸುಸ್ವರದ ವೇದ ಘೋಷ, ದೇವರನಾಮ ಭಜನೆ ಹಾಗೂ ಪೂಜ್ಯಗುರುಗಳಿಗೆ ಜಯಜಯವೆಂಬ ಜಯಕಾರಗಳು. ಈ ಮಂಗಳ ಧ್ವನಿಗಳು ಹೊಳೆಹೊನ್ನೂರಿನಲ್ಲಿ ತುಂಬಿ ತುಳುಕಾಡಿದವು. ಎಲ್ಲರಿಗೂ ರೋಮಾಂಚನ ಮಾಡಿಸಿದವು. ಈ ಸಂಭ್ರಮದಲ್ಲಿ ಶ್ರೀ ಜನಾರ್ಧನ ಸ್ವಾಮಿ, ಶ್ರೀ ಸತ್ಯಧರ್ಮರ ಕರಾರ್ಚಿತ (ಪೂರ್ವಾಶ್ರಮದಲ್ಲಿ) ವಂಶೋದ್ಧಾರಕ ಭಾರತೀಶ, ನಂತರ ಕೋಟಿಪ್ರಾಣಪತಿಗಳ ದರ್ಶನ ಮಾಡಿಸಿ ಶ್ರೀ ಶ್ರೀ ಸತ್ಯಧರ್ಮರ ಮಠಕ್ಕೆ ಶ್ರೀ ಶ್ರೀ ವಿಶ್ವೋತ್ತಮರನ್ನು ಕರೆತಂದಾಗ ಭಕ್ತರೆಲ್ಲಾ ಗುರುಗಳ ಮೇಲೆ ಪುಷ್ಪ ವೃಷ್ಠಿ ಮಾಡಿ ಧನ್ಯರಾದರು. ಶ್ರೀಗಳವರ ಮಂದಹಾಸದ ಭವ್ಯತೆಗೆ ದೃಷ್ಟಿಯಾದೀತೆಂದು ಈಡುಗಾಯಿ ಒಡೆದು ಜಯಕಾರ ಮಾಡಿದರು. ನಂತರ ಶ್ರೀಗಳವರು ಶ್ರೀ ಸತ್ಯಧರ್ಮರ ಬೃಂದಾವನಕ್ಕೆ ಪ್ರದಕ್ಷಿಣೆ ಬಂದು ದಂಡಪ್ರಣಾಮ ಮಾಡಿ ಭಾವಿ ಸಮೀರ ಶ್ರೀಮದ್ ವಾದಿರಾಜರ ಸನ್ನಿಧಾನಯುಕ್ತವಾದ ದಿವ್ಯ ವೃಂದಾವನದ ಎದುರಿಗೆ ಭಾಗೀರಥಿಯು ಬೀಳುತ್ತಿದ್ದ ಸ್ಥಳದಲ್ಲಿ ಉದ್ಭವಿಸಿರುವ ಮನೋಭಿಮಾನಿಯ ಪ್ರತೀಕವಾದ ಲಿಂಗದ್ವಯಗಳನ್ನು ನೋಡಿ "ನಮೋ" "ನಮೋ" ಎಂದು ಪರಮಾನಂದಭರಿತರಾದರು. ಇದನ್ನು ನೋಡಿದವರಿಗೆ ಆಯ್ತು "ಆನಂದದ ಅನುಭವ" ಇದೇ ಮಹನೀಯರ ಚಾರಿತ್ರ್ಯದ ಹಿರಿಮೆ.

ಮರುದಿನ ಆಶ್ವೀಜ ಶುದ್ಧ ತೃತೀಯ ಆಶ್ರಮದ "ಸುವರ್ಣ ಮಹೋತ್ಸವ" ಸ್ವರ್ಣ ಪುರಿಯ ಶ್ರೀ ಶ್ರೀ ಸತ್ಯಧರ್ಮರ ಸನ್ಮುಖದಲ್ಲಿ ಸ್ವರ್ಣ ವರ್ಣದ ಯತಿಗಳಿಗೆ ಸುವರ್ಣ ಅಭಿಷೇಕ ನಡೆದ ಸುವರ್ಣ ದಿನವಾಯಿತು.

ಅಂದು ಪ್ರಾತಃ ಕಾಲದಲ್ಲಿ ಸಂಸ್ಥಾನದ ಪ್ರತಿಮಾ ಪೂಜಾ ಮಹಾಮಂಗಳಾರತಿ ಮುಗಿಸಿದ ಶ್ರೀಗಳವರು ಭಕ್ತರುಗಳಿಗೆ ಸಂಸ್ಥಾನದಲ್ಲಿ ಪೂಜೆಗೊಳ್ಳುತ್ತಿರುವ ದೇವರುಗಳ ದರ್ಶನ ಮಾಡಿಸಿದ ನಂತರ ಗುರುಗಳಿಗೆ ಸುವರ್ಣ ಮಹೋತ್ಸವದ ಸಂಭ್ರಮ ಪ್ರಾರಂಭವಾಯಿತು. ಶ್ರೀ ಶ್ರೀ ಶ್ರೀ ವಿಶ್ವೋತ್ತಮರನ್ನು ಸುವರ್ಣಾಭಿಷೇಕಕ್ಕೆ ಪ್ರಾರ್ಥಿಸಿ ಕರೆತಂದ ಭಕ್ತರು ಶ್ರೀಗಳವರಿಗೆ ಪಾದಪೂಜಾ ಮಾಡಿ, ಕನಕಾಂಬರವನ್ನು ಹೊದ್ದಿಸಿ ಮಾಲಾರ್ಪಣೆ ಮಾಡಿದನಂತರ ಶ್ರೀ ಸೂಕ್ತ ಪಠನದೊಂದಿಗೆ ಸುವರ್ಣದ ನಾಣ್ಯಗಳಿಂದ ಅಭಿಷೇಕ ಮಾಡಿ ಕೃತಾರ್ಥರಾದರು. ಅದೇ ದಿನ ಶ್ರೀ ಸತ್ಯಧರ್ಮ (ರುದ್ರಾಂಶ ಸಂಭೂತ)ರಿಗೂ ಅದೇ ನಾಣ್ಯದಿಂದ ಅಭಿಷೇಕಗೈದು ಅದನ್ನೇ ಶ್ರೀ ವಿಶ್ವೋತ್ತಮರಿಗೂ ಅಭಿಷೇಕ ಪೂರ್ವಕ ಅರ್ಪಿಸಲಾಯ್ತು. ೧೯೪೩ರಲ್ಲಿ ಇಸವಿ ಅಂಗೀರಸ ಸಂ॥ ಗಣೇಶ ಚತುರ್ಥಿಗೆ ೪೯ ವರ್ಷಗಳಾಗಿ "೫೦" ನೇ ವರ್ಷದ 'ಆಶ್ರಮದ ನಡೆ' ಪ್ರಾರಂಭವಾಗಿದೆ. ಈ ಮೊದಲನೇ ಸುವರ್ಣಮಹೋತ್ಸವ ಸಮಾರಂಭ ಶ್ರೀ ಸತ್ಯಧರ್ಮರು ತಮ್ಮ ಮಠದಲ್ಲಿ ನಡೆಸಬೇಕೆಂದೇ ಆಶಿಸಿ ಬೆಂಗಳೂರಿನ ಹಾಗೂ ಹೊಳೆಹೊನ್ನೂರಿನ ಭಕ್ತರಿಗೆ ಪ್ರೇರಿಸಿ, ಪುನೀತರನ್ನಾಗಿಸಿದ್ದು ಅವರಕಾರುಣ್ಯದ ಫಲವಾಗಿರುತ್ತೆ. ಆದ್ದರಿಂದ ಮೊಟ್ಟಮೊದಲ ಸುವರ್ಣ ಮಹೋತ್ಸವದ "ಸಂಭ್ರಮ" ಮತ್ತು "ಪುಣ್ಯ" ನಮಗಾಯಿತೆಂದು ಹೆಮ್ಮೆಯಿಂದ ಹೇಳಬೇಕಾಗಿದೆ.

ಪೀತಾಂಬರವನ್ನು ಹೊದ್ದು ಸುವರ್ಣಾಭಿಷೇಕಕ್ಕೆ ಕುಳಿತ ಮಹಾನುಭಾವರನ್ನು ನೋಡಿದಾಗ

"ಇವರ ಪೂಜೆಯೆ ನಮ್ಮ ವಾದಿರಾಜರ ಪೂಜೆ । ಇವರ ದಯವೇ ವಾದಿರಾಜರ ದಯವು ॥
ಇವರ ಕೊಂಡಾಡುವುದೇ ವಾದಿರಾಜರ ಸ್ತೋತ್ರ । ಇವರೇ ವಾದಿರಾಜರ ಮುಖ್ಯ ಪ್ರತಿಮಾ॥"

ಎನ್ನುವುದು ಹೃದಯದಲ್ಲಿ ನಾಟಿತು. ಈ ಮಾತು ಅಲ್ಲಿದ್ದ ಭಕ್ತರೆಲ್ಲರೂ ಆನಂದಬಾಷ್ಪ ಪುಳಕಿತರಾಗಿ ಮಾಡಿದ್ದು. ಆಗಿನ ಆನಂದ ಸುಖವನ್ನು ಅನುಭವಿಸದವರಿಗೇ ಆ ಸುಖ ಗೊತ್ತು. ವರ್ಣನಾತೀತದ್ದಾಗಿತ್ತು. ನಂತರ ಉತ್ಸವದ ಅಂಗವಾಗಿ ಇಬ್ಬರು ಭಕ್ತರು ಶ್ರೀಗಳವರಿಗೆ ತುಲಾಭಾರ ಮಾಡಿ ಕೃತಾರ್ಥರಾದರು. ತುಲಾಭಾರ ಮಾಡುವಾಗ ಪುಷ್ಪಾಲಂಕೃತವಾದ ತಕ್ಕಡಿಯಲ್ಲಿ ಶ್ರೀ ಗುರುರಾಜರ ಪಾದುಕೆಗಳನ್ನು ತೊಡೆಯಮೇಲಿಟ್ಟುಕೊಂಡು ಕುಳಿತಿದ್ದ ಶ್ರೀ ವಿಶ್ವೋತ್ತಮರನ್ನು ನೋಡಿದರೆ "ಚಂದ್ರ" ನಂತೆ ಭಾಸವಾಗುತ್ತಿತ್ತು ಎಂದರೆ ಅತಿಶಯೋಕ್ತಿಯಲ್ಲ.

**ಅಂದು ರಾತ್ರಿಯೇ ಭರದಿಂದ ಬಂದ ಭಾಗೀರಥಿಯ ದರ್ಶನ**

ಅಂದು ರಾತ್ರಿ ೭-೦೦ ಘಂಟೆಗೆ ಶ್ರೀ ಭೂತರಾಜರ ಪೂಜಾನಂತರ ವಂದಿಸಿದ ಶ್ರೀಗಳವರು ಶ್ರೀ ವಾದಿರಾಜರು ಮಾಡಿದ ಭಾಗೀರಥೀ ಸ್ತೋತ್ರ ಹೇಳುತ್ತಾ ಶ್ರೀ ಸತ್ಯಧರ್ಮರಿಗೆ ಮಂಗಳಾರತಿ ಮಾಡುತ್ತಿರಲು ಭಾಗೀರಥಿ ಶ್ರೀ ಸತ್ಯಧರ್ಮರ ಗರ್ಭಗೃಹದಲ್ಲಿರುವ ರುದ್ರದೇವರಿಗೆ ಅಭಿಷೇಕ ಪ್ರಾರಂಭಿಸಿದ್ದನ್ನು ನೋಡಿದ ಶ್ರೀಗಳವರು ಆನಂದ ಪುಳಕಿತರಾದರು.

ಮಂಗಳ ಮಹಿಮರಾದ ಶ್ರೀ ವಿಶ್ವೋತ್ತಮರು ಮಂಗಳವಾರ ಮಹಾರುದ್ರರ ಶಿರಸ್ಸಿನಲ್ಲಿ ಮಂಗಳೆ ಗಂಗಾದೇವಿಯನ್ನು ನೋಡಿ ನಮ್ಮನ್ನು ಕರೆದು ತೋರಿಸಿ ನಮ್ಮ ಜನ್ಮ ಸಾರ್ಥಕಗೊಳಿಸಿದರು. ಮರುದಿನ ಶ್ರೀ ಸತ್ಯಧರ್ಮರಿಗೆ ಅರ್ಪಿಸಿದ ಮಡಿಯು ಒದ್ದೆಯಾಗಿದ್ದು ನೋಡಿದ ಭಕ್ತರು ಮೂಕವಿಸ್ಮಿತರಾದರು. ಶ್ರೀ ಸತ್ಯಧರ್ಮರು ತಾವೇ ಮಾಡಿಸಿಕೊಂಡ

ಸುಂದರ ವೃಂದಾವನಸ್ಥರಾದ ಕೆಲವು ಕಾಲದಮೇಲೆ ಪ್ರತ್ಯಕ್ಷಳಾಗಿದ್ದ ಸ್ಥಳದಲ್ಲಿ ಲಿಂಗ ಉದ್ಭವಿಸಿದೆ. ಆದರೆ ಕೆಲವು ವರ್ಷಗಳಿಂದ ಅಪ್ರತ್ಯಕ್ಷಳಾಗಿದ್ದು ಶ್ರೀ ವಿಶ್ವೋತ್ತಮರ ಸುವರ್ಣ ಮಹೋತ್ಸವ ನೋಡಬೇಕೆಂದೇ, ಪುನಃ ಶ್ರೀಗಳವರ ಮಹಿಮೆ ತೋರಿಸಲೆಂದೇ, ಪ್ರತ್ಯಕ್ಷವಾಗಿದ್ದರಲ್ಲಿ ಸಂದೇಹವೇ ಇಲ್ಲ.

ಮಂಗಳ ಮಹಿಮರಾದ ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳವರು ಮಂದಮತಿಗಳಿಗೂ ಮುಂದಿನದಾರಿಯನ್ನು ತೋರುವ ಮಾತೃ ಹೃದಯಿಗಳಾಗಿ ದಯಾಮಯರಾಗಿ ವಿರಾಜಿಸುತ್ತಿರುವುದನ್ನು ನೋಡುತ್ತಿರುವ ಭಕ್ತರೇ ಧನ್ಯ ಜೀವಿಗಳು.

### ಶ್ರೀ ಸೋದೆವಾದಿರಾಜಮಠ ಮತ್ತು ಕೋಟೇಶ್ವರ ಮಾಗಣೆಯವರು

ಕೋಟೇಶ್ವರ ಮಾಗಣೆಗೆ ೧೪ ಗ್ರಾಮಗಳು ಸೇರಿವೆ. ತೆಕ್ಕಟ್ಟೆ, ಕೊಮೆ, ಕುಂಭಾಸಿ, ಕೊರವಡಿ, ಗೋಪಾಡಿ, ಬೀಜಾಡಿ, ಹೋದ್ರಾಳಿ, ಬಡಾಕೆರೆ, ಕುಂಬ್ರಿ, ಹಂಗ್ಳೂರು, ಕೋಣಿ, ಕಟ್ಕೆರೆ, ಮೂಡಹಂಗ್ಳೂರು ಮತ್ತು ಮೂಡುಗೋಪಾಡಿ ಈ ಎಲ್ಲಾ ಗ್ರಾಮದಲ್ಲಿರುವವರನ್ನು ಭಾಗವತ ಸಂಪ್ರದಾಯದವರು. ಮಾಯಾವಾದ ಮತಾವಲಂಬಿಗಳಾಗಿದ್ದರು. ಭಾವೀ ಸಮೀರ ಶ್ರೀ ವಾದಿರಾಜರ ಕಾಲದಲ್ಲಿ ಭಕ್ತವತ್ಸಲರೂ ಕರುಣಾಮಯಿಗಳೂ ಆದ ಶ್ರೀ ಗುರುರಾಜರು ತಮ್ಮ ದಿವ್ಯದೃಷ್ಟಿಯಿಂದ ಕೋಟೇಶ್ವರ ಮಾಗಣೆಯ ವಿಪ್ರರು ಸುಜೀವಿಗಳೂ, ಸ್ವರೂಪಯೋಗ್ಯರೂ ಆಗಿರುವುದರಿಂದ ಅವರನ್ನು ಉದ್ಧರಿಸಬೇಕೆಂದು ತಪ್ತ ಚಕ್ರಾಂಕನದಿಂದ ಶುದ್ಧ ಮಾಡಿ ತಮ್ಮ ಮಠದ ಶಿಷ್ಯರನ್ನಾಗಿ ಮಾಡಿ ಪೂರ್ಣಾನುಗ್ರಹ ಮಾಡಿದರು. ಅಂದು ರಾಜರು ಮಾಡಿದ ಅನುಗ್ರಹದ ಫಲವನ್ನು ಇಂದಿಗೂ ಅವರ ವಂಶಜರು ಅನುಭವಿಸುತ್ತಲೇ ಬಂದಿರುವರು.

ಹಿಂದೆ ಬೇಸಾಯ ಮತ್ತು ಬ್ರಾಹ್ಮಣ್ಯವೃತ್ತಿ ಮಾಡಿಕೊಂಡಿದ್ದ ಇವರುಗಳು ಭೂ ಸುಧಾರಣೆ ಕಾನೂನು ಜಾರಿಗೆ ಬಂದ ಮೇಲೆ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಬೇರೆ ಬೇರೆ ಊರುಗಳಿಗೆ ಹೋಗಿ ಹೋಟೆಲ್ ಮುಂತಾದ ವೃತ್ತಿ ಅವಲಂಬಿಸಿ ಅದರಲ್ಲಿ ಯಶಸ್ವಿಯಾಗಿ ಜನಾನುರಾಗಿಗಳಾಗಿಯೂ ಆಗಿದ್ದಾರೆ. ಹಿಂದೆ ಕೋಟೇಶ್ವರದಲ್ಲಿ ಸೋದೆಮಠದ ಆಸ್ತಿ ತುಂಬಾ ಪ್ರಮಾಣದಲ್ಲಿದ್ದಿತು. ಪ್ರತಿವರ್ಷಗೇಣಿ ಹಾಕುತ್ತಿದ್ದರು. ಪರ್ಯಾಯ ಕಾಲದಲ್ಲಿ ಹೊರೆ, ಕಾಣಿಕೆ ಸಲ್ಲಿಸುತ್ತಾ ತನು, ಮನ, ಧನ ಪೂರ್ವಕವಾಗಿ ಸೇವೆಸಲ್ಲಿಸುತ್ತಾ ತಮ್ಮ ಕೈಲಾದಷ್ಟು ಹರಿಗುರುಗಳ ಸೇವೆ ಮಾಡುತ್ತಿದ್ದರು. ಶ್ರೀ ವಿಶ್ವೋತ್ತಮತೀರ್ಥರು ತಮ್ಮ ಪ್ರಥಮ ಪರ್ಯಾಯದಿಂದ ಎದ್ದ ನಂತರ ೧೯೫೦ರಲ್ಲಿ ಕೋಟೇಶ್ವರ ಮಾಗಣೆ ಭಕ್ತರು ಕಟ್ಟಿಸಿದ ಕೋದಂಡರಾಮ ಮಂದಿರದಲ್ಲಿ ಶ್ರೀ ರಾಮದೇವರನ್ನು ಪ್ರತಿಷ್ಠಾಪಿಸಿ ಶಿಷ್ಯರನ್ನು ಅನುಗ್ರಹಿಸಿದರು.

ಶ್ರೀ ವಿಶ್ವೋತ್ತಮತೀರ್ಥರು ೮೦ ದಶಕದವರೆಗೆ ಹೆಚ್ಚಾಗಿ ಸಂಚಾರ ಮಾಡುತ್ತಿರಲಿಲ್ಲ. ನಂತರದ ವರ್ಷಗಳಲ್ಲಿ ಕೋಟೇಶ್ವರದವರೊಂದಿಗೆ ಹೆಚ್ಚು ಹೆಚ್ಚು ಸಂಪರ್ಕಕ್ಕೆ ಬಂದರು. ಪ್ರಥಮವಾಗಿ ೧೯೭೩ರಲ್ಲಿ ತುಮಕೂರಿಗೆ ಬಂದು ಓ॥ ಜನಾರ್ಧನ ಉಪಾಯಿದ್ರ ಮನೆಯಲ್ಲಿ ಶ್ರೀ ರುಕ್ಮಿಣೀಶವಿಜಯದ ಮಂಗಳದ ಕಾರ್ಯಕ್ರಮಲ್ಲಿ ಭಾಗವಹಿಸಿ ೪-೭ದಿನಗಳ ಕಾಲ ತುಮಕೂರಿನ ಭಕ್ತರ ಮನೆಯಲ್ಲಿ ಭಿಕ್ಷೆ ಸ್ವೀಕರಿಸಿ ಅನುಗ್ರಹಿಸಿದರು.

ಕೊರವಡಿ ಮತ್ತು ಬಡಾಕೆರೆ ದೇವಸ್ಥಾನದಲ್ಲಿ ನಡೆಯುವ ಭಜನೆ ಮಂಗಲ ಕಾರ್ಯಕ್ರಮದಲ್ಲಿ ಪ್ರತಿವರ್ಷ ತಪ್ಪದೆ ಬಂದು ಭಿಕ್ಷೆ ಸ್ವೀಕರಿಸಿ ಭಕ್ತರನ್ನು ಅನುಗ್ರಹಿಸುತ್ತಿದ್ದರು.

ಬೆಂಗಳೂರಿಗೆ ಪ್ರತಿವರ್ಷ ಆಷಾಢ ಮಾಸದಲ್ಲಿ ಮಾಗಣೆ ಭಕ್ತರಿಗೆ ಮುದ್ರಧಾರಣೆ ಮಾಡುತ್ತಿದ್ದರು. ಹಾಗೂ ಧನುರ್ಮಾಸದಲ್ಲಿ ನೆಟ್‌ಕಲ್ಲಪ್ಪ ಸರ್ಕಲಿನಲ್ಲಿರುವ ಶ್ರೀ ವಾದಿರಾಜ ಕಲ್ಯಾಣ ಮಂಟಪಕ್ಕೆ ಬಂದು ನಾಲ್ಕಾರುದಿನ ವಾಸವಾಗಿದ್ದು ಭಕ್ತರಿಂದ ಭಿಕ್ಷೆ ಸ್ವೀಕರಿಸಿ ಗುರುವಂದನಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಶಿಷ್ಯರನ್ನು ಅನುಗ್ರಹಿಸುತ್ತಿದ್ದರು.

ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರ ಮೂರನೆ ಪರ್ಯಾಯ ಸಮಾರಂಭದ ಮೊದಲನೇ ಮತ್ತು ಕಡೆದಿನದ ಸಂತರ್ಪಣೆ ಖರ್ಚನ್ನು ಮಾಗಣೆಯ ಶಿಷ್ಯರು ವಹಿಸಿಕೊಂಡುದಲ್ಲದೇ ಒಂದು ಲಕ್ಷ ರೂಪಾಯಿಗಳಿಗೂ ಮೀರಿ ಕಾಣಿಕೆ ಕೊಟ್ಟಿರುವರು. ನಾಲ್ಕನೆಯ ಪರ್ಯಾಯದಲ್ಲಿ ಎರಡು ವರ್ಷಗಳ ಕಾಲ ಪ್ರತಿದಿನವೂ ಮಾಗಣೆ ಶಿಷ್ಯರಿಂದ ಬ್ರಹ್ಮೋತ್ಸವ ಸೇವೆ ನಡೆಸುವ ಮೂಲಕ ದಾಖಲೆ ನಿರ್ಮಿಸಿದ್ದಾರೆ. ಕೋಟೇಶ್ವರದಲ್ಲಿ ೧೩–೧–೧೯೯೩ರಂದು ಶ್ರೀ ವಿಶ್ವೋತ್ತಮತೀರ್ಥರ ಷಷ್ಟ್ಯಬ್ಧಿ ಪೂರ್ತಿ ಶಾಂತಿ ಹಾಗೂ ಶ್ರೀ ಬಿ.ಪಿ. ನಾಗಭೂಷಣರಾಯರಿಂದ ಅನುವಾದಿಸಲ್ಪಟ್ಟ ಸಾಪ್ನವೃಂದಾವನಾಖ್ಯಾನ ಗ್ರಂಥದ ಬಿಡುಗಡೆ ಕಾರ್ಯಕ್ರಮ 'ನ ಭೂತೋ ನ ಭವಿಷ್ಯತಿ' ಎನ್ನುವ ರೀತಿ ನಡೆಸಿದರು.

ಬೆಂಗಳೂರಿನ ಚಾಮರಾಜ ಪೇಟೆಯಲ್ಲಿ ರಾಯರಾಯ ಕಲ್ಯಾಣ ಮಂಟಪದ ಪಕ್ಕದಲ್ಲಿ ಮುಜರಾಯಿ ಇಲಾಖೆಯಿಂದ ನೀಡಲಾದ ಸ್ಥಳದಲ್ಲಿ ಶ್ರೀಕೃಷ್ಣ ವಾದಿರಾಜ ಮಂದಿರ ಎಂಬ ಹೆಸರಿನ ಕಟ್ಟಡ ಮಾಗಣೆಯರು ಕಟ್ಟಿಸಿ ಅಲ್ಲಿ ಮಂಗಲ ಕಾರ್ಯ ನಡೆಸಲು ಅವಕಾಶ ಮಾಡಿಕೊಟ್ಟಿದ್ದಾರೆ. ಇದು ಬೆಂಗಳೂರು ಮಹಾನಗರದ ಮಧ್ಯದಲ್ಲಿದ್ದುದರಿಂದ ಬಹುಜನರಿಗೆ ಉಪಯೋಗವಾಗುತ್ತಿದೆ. ಎನ್.ಆರ್.ಕಾಲೋನಿಯಲ್ಲಿ ಕೋಟೇಶ್ವರದ ಭಕ್ತರೊಬ್ಬರು ಸೋದಾಮಠಕ್ಕೆ ದಾನಕೊಟ್ಟ ಮನೆಯಲ್ಲಿ ಹಯಗ್ರೀವ ದೇವರನ್ನು ಪ್ರತಿಷ್ಠಾಪಿಸಿದರು ಅದರಲ್ಲಿ ಮಾಗಣೆ ಬಂಧುಗಳು ಸಣ್ಣ ಪ್ರಮಾಣದ ಮಂಗಲಕಾರ್ಯ ಮಾಡಲು ಅನುವು ಮಾಡಿಕೊಟ್ಟಿರುವರು. ಹೊಸಕೆರೆಹಳ್ಳಿಯಲ್ಲಿ ಒಂದು ಕಟ್ಟಡ ಖರೀದಿಸಿ ಅಲ್ಲಿ ಅಪರಕರ್ಮ ನೆರವೇರಿಸಲು ವ್ಯವಸ್ಥೆ ಮಾಡಿರುತ್ತಾರೆ. ಅದು ವೈಕುಂಠಧಾಮ ಅಥವಾ ಹಯಗ್ರೀವಮಂದಿರ ಎಂಬ ಹೆಸರಿಂದ ಕರೆಯಲಾಗುತ್ತದೆ. ಕುಂಭಾಶಿಯಲ್ಲಿ ಹಾಗೂ ಹೂವಿನ ಕೆರೆಯಲ್ಲಿ ಮಠಗಳನ್ನು ನವೀಕರಿಸಲು ಕೋಟೇಶ್ವರ ಮಾಗಣೆಯವರು ಬಹು ದೊಡ್ಡ ಮೊತ್ತ ನೀಡಿ ಪುಣ್ಯ ಭಾಜನರಾಗಿದ್ದಾರೆ.

ಸೋದೆಯಲ್ಲಿ ಮಠದಲ್ಲಿ ನಡೆದ ನವೀಕರಣದಲ್ಲಿ ಹಾಗೂ ವಸತಿ ಸಮುಚ್ಚಯ ನಿರ್ಮಾಣದಲ್ಲಿ ಕೋಟೇಶ್ವರ ಮಾಗಣೆಯವರದು ಸಿಂಹಪಾಲು ದೇಣಿಗೆಯಿದೆ.

ಕೋಟೇಶ್ವರದವರು ತಾವು ಆರ್ಥಿಕವಾಗಿ ಉತ್ತಮ ಸ್ಥಿತಿಗೆ ಬರಲು ತಮ್ಮ ಸ್ವರೂಪೋದ್ಧಾರಕ ಗುರುಗಳಾದ ಭಾವಿ ಸಮೀರ ಶ್ರೀ ವಾದಿರಾಜರು ಹಾಗೂ ಅವರ ಪರಂಪರೆಯ ಗುರುಗಳೆಲ್ಲರ ಅನುಗ್ರಹವೇ ಕಾರಣವೆಂದು ನಂಬಿದ್ದಾರೆ. ಶ್ರೀ ವಿಶ್ವೋತ್ತಮತೀರ್ಥರಲ್ಲಿ ಶ್ರೀ ವಾದಿರಾಜರನ್ನು ನೋಡುವ ಭಕ್ತರಿಗೆ. ಶ್ರೀ ವಿಶ್ವೋತ್ತಮತೀರ್ಥರೂ ಸಹ ಕೋಟೇಶ್ವರ ಮಾಗಣೆಯ ಭಕ್ತವೃಂದವು ಶ್ರೀ ವಾದಿರಾಜರ ಕಾರುಣ್ಯಕ್ಕೆ ಪಾತ್ರರಾದವರೆಂದು ಹೆಚ್ಚಿನ ಮಮತೆ ತೋರಿಸಿ ಅನುಗ್ರಹಿಸುತ್ತಿದ್ದರು.

## ಕೋಟೇಶ್ವರದಲ್ಲಿ ನಡೆದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪದಂಗಳವರ ೭೦ನೇ ವರ್ಧಂತಿ

# ಮಹೋತ್ಸವದ ವರದಿ

### (“ವಿಶ್ವಸೌರಭ” ಸ್ಮರಣ ಸಂಚಿಕೆಯಿಂದ ಉದ್ಧೃತ)

ಸೋದೆ ಮಠಾಧೀಶರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರ ವೇದಾಂತ ಸಾಮ್ರಾಜ್ಯ ಪೀಠಾರೋಹಣದ ಸುವರ್ಣಮಹೋತ್ಸವ ಮತ್ತು ೭೦ನೇ ವರ್ಧಂತಿ ಉತ್ಸವವನ್ನು ಕೋಟೇಶ್ವರದಲ್ಲಿ ಆಚರಿಸಬೇಕು, ಗೌರವಿಸಬೇಕು ಭಕ್ತಿ ಶ್ರದ್ಧೆಯಿಂದ ಕಾಣಿಕೆ ಸಲ್ಲಿಸಬೇಕು, ಎಂದು ಮಾಗಣೆಯ ಶಿಷ್ಯರು ಒಂದು ವರ್ಷದಿಂದ ನಡೆಸಿದ ಸಿದ್ಧತೆಯಂತೆ ತಾ. ೧೨.೧.೧೯೯೫ನೇ ತಾರೀಖು ಮಂಗಳವಾರ ಪುಷ್ಯ ಬಹುಳ ಪಂಚಮೀ ಮಂಗಳವಾರ ಬಂದೇ ಬಿಟ್ಟಿತು.

ತಾ. ೧೨ರ ಬೆಳಿಗ್ಗೆಯಿಂದಲೇ ಊರಿನ ವಿವಿಧ ಗ್ರಾಮದವರು ಹಾಗೂ ಪರ ಊರುಗಳಿಂದ ಬಂದವರೂ ಕೋಟೇಶ್ವರ ಪೇಟೆಯಲ್ಲಿ ರಥಬೀದಿಯಲ್ಲಿ ಓಡಾಡುತ್ತಿರುವುದನ್ನು ನೋಡಿದರೆ ಕೋಟೇಶ್ವರದ ಜಾತ್ರೆಯ ಸಂಭ್ರಮದಂತೆ ಇತ್ತು. ಕಾರ್ಯಕರ್ತರಲ್ಲಿ ವಿಶೇಷ ಉತ್ಸಾಹ, ರಥಬೀದಿಯಲ್ಲಿ ವಿಚಾರಣಾ ಕೇಂದ್ರವನ್ನು ತೆರೆಯಲಾಗಿದ್ದು ಕಾರ್ಯಕ್ರಮಗಳ ವಿವರಣೆಯನ್ನು ನೀಡುತ್ತಿದ್ದರು. ರಥಬೀದಿಯಲ್ಲಿ ಗುರುಗಳು ಅನುಗ್ರಹಿಸಿದ ಕೇಸರೀ ಬಣ್ಣದ ಶೇಷವಸ್ತ್ರ ಹೊದ್ದಿದ್ದ ಮಹನೀಯರುಗಳ ಓಡಾಟ ಸಂಭ್ರಮದಿಂದ ಸಿದ್ಧತೆನಡೆಸುತ್ತಿದ್ದ ಕಾರ್ಯಕರ್ತರ ತಂಡ ಬೆಳೆಯುತ್ತಾ ಇತ್ತು. ಬೆಳಗ್ಗೆಯಿಂದಲೇ ಶ್ರೀ ವಾದಿರಾಜ ಕಲ್ಯಾಣ ಮಂದಿರದಲ್ಲಿ ಕಾಫೀ, ತಿಂಡಿ, ಊಟದ ವ್ಯವಸ್ಥೆ ಮಾಡಲಾಗಿತ್ತು. ಶ್ರೀ ಲಾತವ್ಯಾತ್ಮಕ ಶ್ರೀ ವಾದಿರಾಜರ ಗುರು ಸೇವಾ ಸಮಿತಿ ಅಧ್ಯಕ್ಷರಾದ ಶ್ರೀ ಹೆಚ್. ಸೀತಾರಾಮರಾಯರುಮತ್ತು ಹಿರಿಯರ ಸಮಕ್ಷಮದಲ್ಲಿ ಎಲ್ಲಾ ಗ್ರಾಮಗಳವರೂ ಸಂಗ್ರಹಿಸಿದ ಅಕ್ಕಿ, ತೆಂಗಿನಕಾಯಿ, ತರಕಾರಿ ಮೊದಲಾದವುಗಳನ್ನು ಮೂಡು ರಸ್ತೆಯಿಂದ ತಟ್ಟೀರಾಯ, ಮಕರಧ್ವಜ, ಬಾಣಬಿರುಸು, ವಾದ್ಯ ವೈಭವದ ಮೂಲಕ ಮೆರವಣಿಗೆಯಿಂದ ೨೦ ವಾಹನಗಳಲ್ಲಿ ಹೊರೆ ಕಾಣಿಕೆಯನ್ನು ಶ್ರೀ ವಾದಿರಾಜ ಕಲ್ಯಾಣ ಮಂದಿರಕ್ಕೆ ತಂದು ಸಮರ್ಪಿಸಿದರು. ಹೊರೆ ಕಾಣಿಕೆ ತಂದೊಪ್ಪಿಸಿದ ವಿವಿಧ ಗ್ರಾಮಗಳ ಗಣ್ಯರಿಗೆ ಅಧ್ಯಕ್ಷರು ಅಭಿನಂದಿಸಿ, ಸಂಜೆಯ ಮೆರವಣಿಗೆ ಮತ್ತು ೧೩ನೇ ತಾರೀಖಿನ ಎಲ್ಲ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ಸಹಕರಿಸಿ ಯಶಸ್ವಿಗೊಳಿಸಬೇಕೆಂದು ವಿನಂತಿಸಿಕೊಂಡರು.

ಕೋಟೇಶ್ವರ ಹಬ್ಬದಂತೆ ಮೆರಗು ತಂದ ಈ ಸಂಭ್ರಮದಲ್ಲಿ ಕೋಟೇಶ್ವರ ಪೇಟೆಯ ಪ್ರಮುಖರೂ ವಾಣಿಜ್ಯೋದ್ಯಮಿಗಳೂ, ಅಂಗಡಿ, ಮನೆ, ಮುಂಗಟ್ಟುಗಳನ್ನು ಶೃಂಗರಿಸಿ ಹೆಚ್ಚಿನ ಸೊಬಗು ತಂದು ಕೊಟ್ಟರು. ಎಲ್ಲಾ ರಸ್ತೆಯಲ್ಲೂ ಚಪ್ಪರ, ಹಸಿರು, ತೋರಣ,

ಸ್ವಾಗತದ ಕಮಾನುಗಳು, ಶ್ರೀಗಳವರಿಗೆ ಸ್ವಾಗತ ಕೋರುವ ಬ್ಯಾನರುಗಳು, ಬಣ್ಣ ಬಣ್ಣ ಸೀರಿಯಲ್ ಸೆಟ್ ದೀಪಗಳು, ರಸ್ತೆಗಳ ಬದಿಯಲ್ಲಿ ಟ್ಯೂಬ್‌ಲೈಟ್‌ಗಳ ಸಾಲುಗಳಿಂದ ಅಲಂಕೃತವಾಗಿತ್ತು. ರಥಬೀದಿಯಂತೂ ವಿಶೇಷ ಅಲಂಕಾರಗೊಂಡಿದ್ದು, ಶ್ರೀ ಕೋಟಿಲಿಂಗೇಶ್ವರ ದೇವಸ್ಥಾನ, ಶ್ರೀ ರಾಮ ಮಂದಿರ, ರಥಬೀದಿಯ ಎಲ್ಲಾ ಕಲ್ಯಾಣ ಮಂದಿರಗಳು ಸೀರಿಯಲ್ ಸೆಟ್, ಬಣ್ಣ ಬಣ್ಣದ ದೀಪ, ತಳಿರು ತೋರಣಗಲಿಂದ ಅಲಂಕಾರಗೊಂಡಿದ್ದವು. ಉಡುಪಿ ಶ್ರೀಕೃಷ್ಣದೇವರ ಪೂಜಾ ಪರ್ಯಾಯೋತ್ಸವದಲ್ಲಿ ಉಡುಪಿ ರಥಬೀದಿಯ ಅಲಂಕಾರದಂತೆಯೇ ಕೋಟೇಶ್ವರದಲ್ಲೂ ನಡೆದಿತ್ತು. ರಥಬೀದಿಯಲಿ "ಶ್ರೀ ಹಯವದನ ಮಂಟಪ" ಎಂಬ ಸಭಾಭವನವನ್ನು, ವೇದಿಕೆಯನ್ನೂ ಸಭಿಕರಿಗಾಗಿ ವಿಶಾಲ ಸಭಾ ಮಂಟಪವನ್ನು ರಚಿಸಲಾಗಿತ್ತು.

ಪೂರ್ವ ನಿರ್ಧಾರದಂತೆ ಸಂಜೆ ೫.೦೦ ಘಂಟೆಗೆ ಸರಿಯಾಗಿ ಮುಖ್ಯ ರಸ್ತೆಯಿಂದ ಹೂವಿನ ಕೆರೆಗೆ ಹೋಗುವ ಮುಖ್ಯದ್ವಾರದ ಬಳಿ ಎಲ್ಲಾ ಗ್ರಾಮದ ಹತ್ತು ಸಮಸ್ತರು ಮಹನೀಯರು ಮಹಿಳೆಯರು, ಮಕ್ಕಳು, ವಿಶೇಷ ಆಹ್ವಾನಿತ ಪಂಡಿತರು, ವಿದ್ವಾಂಸರು ಹಾಗೂ ಗಣ್ಯ ನಾಗರಿಕರು ಹೆಚ್ಚಿನ ಸಂಖ್ಯೆಯಲ್ಲಿ ಮೆರವಣಿಗೆಯ ಪ್ರಾರಂಭಕ್ಕಾಗಿ ಸೇರುತ್ತಿದ್ದರು. ಆ ಸಮಯದಲ್ಲಿ ಶ್ರೀ ನಾರಾಯಣುಪಾಧ್ಯರ ಮನೆಯಲ್ಲಿ ಎಲ್ಲರಿಗೂ ಕಾಫೀ, ತಿಂಡಿಯ ವ್ಯವಸ್ಥೆ ನಡೆದಿತ್ತು. ಮೆರವಣಿಗೆಯಲ್ಲಿ ಸೇವಾ ದಳದ ಬಾಲಕ, ಬಾಲಕಿಯರು ಮೆರವಣಿಗೆಯಲ್ಲಿ ಭಾಗವಹಿಸಲು ಬಂದಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸಿದ್ಧರಾದ ಉಡುಪಿಯ ಶ್ರೀ ದೇವರಾಜ್‌ರಿಂದ ವಿಶೇಷವಾಗಿ ದೀಪಗಳಿಂದ ಅಲಂಕೃತವಾದ ಶ್ರೀಗಳವರ ಮೆರವಣಿಗೆಯ ಹಂಸರೂಪದ ವಾಹನ, ವಿವಿಧ ಟ್ಯಾಬ್ಲೋಗಳು ಊರಿನ ಯುವ ಮುಂದಾಳುಗಳಿಂದ ವ್ಯವಸ್ಥೆಗೊಂಡವುಗಳು ಕೀಲುಕುದುರೆ ನೃತ್ಯ, ಕೇರಳದ ಚಂಡೆವಾದಕರು, ವಿವಿಧ ವೇಷಧಾರಿಗಳು, ಸ್ಯಾಕ್ಸೋಪೋನ್ ವಾದಕರು, ಬ್ಯಾಂಡ್ ಸೆಟ್‌ರವರು, ಭಜನಾತಂಡದವರು, ಗೀತ ನೃತ್ಯಕಾರರು, ತಟ್ಟೀರಾಯ, ಮಕರಧ್ವಜ ಹಿಡಿದವರು, ಉಜಿರೆಯ ಗಜರಾಜ ಕೃಷ್ಣ, ಪೂರ್ಣ ಕುಂಭ ಹಿಡಿದ ಮುತ್ತೈದೆಯರು ಎಲ್ಲರೂ ಆಗಲೇ ಬಂದು ಸೇರಿದ್ದರು. ಎಲ್ಲ ವ್ಯವಸ್ಥೆಯೂ ಒಂದಕ್ಕಿಂತ ಇನ್ನೊಂದು ಆಕರ್ಷಣೀಯವಾಗಬಹುದು ಎಂದು ಅಲ್ಲಿ ಸೇರಿದ್ದ ಸಾವಿರಾರು ಜನರು ಆಗಲೇ ರಸ್ತೆಯ ಎರಡೂ ಕಡೆ ಸಾಲಾಗಿ ನಿಂತು ಕಾತುರದಿಂದ ನೋಡುತ್ತಿದ್ದಂತೆಯೇ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರು ಪಟ್ಟದದೇವರೊಂದಿಗೆ ಪಂಡಿತರೂ, ವಿದ್ವಾಂಸರೂ ಮತ್ತು ಆಪ್ತ ಶಿಷ್ಯರನ್ನೂ ಕೂಡಿಕೊಂಡು ದಯಮಾಡಿಸಿದರು.

ಪೂರ್ಣಕುಂಭ ಸ್ವಾಗತದೊಂದಿಗೆ ಮಾಗಣೆಯವರ ಮುಗಿಲು ಮುಟ್ಟುವ ಜಯಕಾರದೊಂದಿಗೆ ವಯೋವೃದ್ಧರಾದ ವೇ॥ ಕೀರ್ತನ ಪಂಚಾನನ ಮಾಲಾಡಿಫಣಿಭಟ್ಟರು ಶ್ರೀಪಾದಂಗಳವರಿಗೆ ಮಾಲಾರ್ಪಣೆ ಮಾಡಿ ಸ್ವಾಗತಿಸಿದರು.

ಶ್ರೀಪಾದಂಗಳವರು ಹಂಸರೂಪದ ವಾಹನದಲ್ಲಿ ಆಸೀನರಾದ ಕೂಡಲೇ ಸಿಡಿಮದ್ದು ಬಾಣ ಬಿರುಸುಗಳು ಸ್ಫೋಟಗೊಂಡು ಆಕಾಶದಲ್ಲಿ ಬಣ್ಣ ಬಣ್ಣದ ಚಿತ್ತಾರ ಮೂಡಿಸಿದಾಗ ಗಜರಾಜ ಕೃಷ್ಣನು ಶ್ರೀಗಳವರಿಗೆ ವಂದನೆ ಮಾಡಿ ಮಾಲಾರ್ಪಣೆ ಮಾಡಿದನು. ಅಲ್ಲಿ ಸೇರಿದ್ದ ಸಹಸ್ರಾರು ಭಕ್ತರು ಜಯಘೋಷ ಮಾಡಿದರು. ವಿಪ್ರರು ವೇದ ಘೋಷ ಮಾಡುತ್ತಿದ್ದಂತೆ

ಮೆರವಣಿಗೆಯ ವಿವಿಧ ತಂಡದವರು ಶ್ರೀಗಳವರು ಆಸೀನರಾದ ವಾಹನದ ಮುಂದೆ ಪ್ರದರ್ಶನ ನಡೆಸುತ್ತಾ ಪಥ ಸಂಚಲನ ಪ್ರಾರಂಭಿಸಿದರು. ಮೆರವಣಿಗೆಯುರಾಜ ಮಾರ್ಗದಲ್ಲಿ ಕೋಟೇಶ್ವರ ಪೇಟೆಗೆ ಪ್ರವೇಶಿಸಿ ಉತ್ತರದ ರಸ್ತೆಯಲ್ಲಿ ಸಾಗಿ ಬೈಪಾಸ್ ಮೂಲಕ ಸೋಮೇಶ್ವರ ರಸ್ತೆಯಿಂದ ಪೇಟೆಗೆ ಬಂದು ರಥ ಬೀದಿ ಮೂಲಕ ಮುಂದುವರಿಯುತ್ತಿದ್ದಾಗ ಆಹೋ! ಶ್ರೀವಾದಿರಾಜರೇ ಮೆರವಣಿಗೆಯಲ್ಲಿ ಬರುತ್ತಿದ್ದಾರೆ ಎಂಬ ಮಾತುಗಳು ಕೇಳಿ ಬರುತ್ತಿತ್ತು. ಶ್ರೀಗಳವರ ಮಂದಸ್ಮಿತ ಮುಖಕಮಲ ನೋಡಿ ಭಕ್ತವೃಂದವು ಜಯಕಾರ ಹಾಕಿದ್ದು ಮುಗಿಲು ಮುಟ್ಟುವಂತಿತ್ತು.

ಮೆರವಣಿಗೆಯಲ್ಲಿ ಸೇರಿದ ಜನಸ್ತೋಮ ವಿವಿಧ ವೈಭವವನ್ನು ಕಣ್ತುಂಬಾ ನೋಡಿ ಉಡುಪಿ ಪರ್ಯಾಯದ ಮೆರವಣಿಗೆಯಂತೆಯೇ ಇದೆ ಎನ್ನುತ್ತಿದ್ದರು. ಉತ್ಸವವು ರಥಬೀದಿಯಲ್ಲಿರುವ "ಶ್ರೀ ಹಯವದನ ಮಂಪಟ"ದ ಸಮೀಪ ಬಂದಾಗ ಶ್ರೀಗಳವರು ವಾಹನದಿಂದ ಇಳಿದು ಎಲ್ಲರೊಂದಿಗೆ ಮಂಟಪಕ್ಕೆ ದಯಮಾಡಿಸಿದರು. ಆಗ ನಡೆದ ಸಿಡಿಮದ್ದು ಬಾಣ ಬಿರುಸುಗಳ ವಿವಿಧ ಪ್ರದರ್ಶನವು ಅತ್ಯಮೋಘವಾಗಿತ್ತು.

ಶ್ರೀಹಯವದನಮಂಟಪದಲ್ಲಿ ಮಾಗಣೆಯವರ ಪರವಾಗಿ ಹಿರಿಯರಾದ ಶ್ರೀ ಎನ್. ಕೆ. ವೆಂಕಟರಾಯರು ಶ್ರೀಗಳವರಿಗೆ ಮಾಲಾರ್ಪಣೆ ಮಾಡಿ ಗೌರವಿಸಿದರು. ಸಮಿತಿಯ ಪರವಾಗಿ ಹಿರಿಯರು ಪಾದ ಪೂಜೆ ಮಾಡಿದರು. ರಾಜ್ಯ ಪ್ರಶಸ್ತಿ ವಿಜೇತ ಶ್ರೀ ಹೊ.ನಾ. ರಾಘವೇಂದ್ರರಾಯರು ಸ್ವಾಗತಗೀತೆ ಹಾಡಿದರು. ವಿವಿಧ ಗ್ರಾಮಗಳ ಪರವಾಗಿ, ವಿವಿಧ ಊರುಗಳ ಹಲವಾರು ಸಂಘ ಸಂಸ್ಥೆಗಳು ಪರವಾಗಿ ಎಲ್ಲರೂ ಶ್ರೀ ಪಾದಂಗಗಳವರಿಗೆ ಮಾಲಾರ್ಪಣೆ ಮಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಹೆಚ್. ಸುಬ್ಬರಾಯರು ತಮ್ಮ ತಂದೆಯವರಾದ ದಿ|| ಹೊದ್ರಾಳಿ ಶ್ರೀನಿವಾಸಹತ್ವಾರ ಸ್ಮರಣಾರ್ಥವಾಗಿ ಸಂಧ್ಯಾವಂದನೆ ದೇವರ ಪೂಜೆ, ನಿತ್ಯಕರ್ಮಗಳ ಆಚರಣೆಯನ್ನು ವಿವರಿಸುವ "ನಿತ್ಯಾನುಷ್ಠಾನ ಸಂಗ್ರಹ" ಎಂಬ ಪುಸ್ತಕವನ್ನು ಶ್ರೀಗಳವರು ಬಿಡುಗಡೆ ಮಾಡಿದರು. ಶ್ರೀ ಸುಬ್ಬರಾಯರು ಎಲ್ಲ ಪುಸ್ತಕಗಳನ್ನು ಸೋದಾ ಮಠಕ್ಕೆ ಸಮರ್ಪಿಸಿದರು. ಅನಂತರ ಶ್ರೀಗಳವರು ಅನುಗ್ರಹ ಭಾಷಣ ಮಾಡಿದರು.

ಶ್ರೀ ರಾಮಮಂದಿರದಲ್ಲಿ ರಾತ್ರಿ ಪೂಜಾದಿಗಳನ್ನು ನೆರವೇರಿಸಿದ ನಂತರ ಎಲ್ಲ ಭಕ್ತರಿಗೂ ಮಂತ್ರಾಕ್ಷತೆ ಕೊಟ್ಟು ಅನುಗ್ರಹಿಸಿದ ನಂತರ ಕಾರ್ಯಕ್ರಮ ಮುಗಿಯಿತು. ಊಟೋಪಚಾರದ ನಂತರ ವಿವಿಧ ಗ್ರಾಮಗಳಿಂದ ಬಂದವರಿಗೆ ವಾಪಸ್ ಹೋಗಲು ವಾಹನ ವ್ಯವಸ್ಥೆ ಮಾಡಲಾಗಿತ್ತು.

# ತಾ. ೧೩.೧.೧೯೯೩ ಬುಧವಾರ ನಡೆದ ಕಾರ್ಯಕ್ರಮಗಳು

**ಹೋಮ ಹವನಗಳು**

ಬುಧವಾರ ಬೆಳಿಗ್ಗೆ ಶ್ರೀ ರಾಮಮಂದಿರದಲ್ಲಿ ಸಮಿತಿಯು ಮಾಗಣೆಯ ಪರವಾಗಿ ಶ್ರೀ ಗುರುಗಳಿಗಾಗಿ ಶ್ರೀ ಮೃತ್ಯುಂಜಯ ಹೋಮ, ಶ್ರೀ ಪವಮಾನ ಹೋಮ, ಶ್ರೀ ಧನ್ವಂತರಿ ಹೋಮ, ಶ್ರೀ ಗಣಹೋಮಗಳನ್ನು ನಡಸಿ ಪೂರ್ಣಾಹುತಿಯ ನಂತರ ಸೋದಾ ಮತ್ತು ಕೃಷ್ಣಾಪುರ ಶ್ರೀಪಾದಂಗಳವರಿಗೆ ಭಿಕ್ಷೆ ಆದ ನಂತರ ಮಹಾ ಸಂತರ್ಪಣೆ ಕಾರ್ಯ ನಡೆಯಿತು.

**ಸಂತರ್ಪಣೆ**

ಶ್ರೀಗಳವರ ೬೦ನೇ ವರ್ಧಂತೀ ಸಮಾರಂಭದಲ್ಲಿ ೧೨ನೇ ತಾರೀಖು ಬೆಳಗ್ಗೆಯಿಂದಲೇ ೧೩ನೇ ತಾರೀಖು ರಾತ್ರಿಯವರೆಗೆ ಊಟ ಕಾಫಿ, ತಿಂಡಿ ವ್ಯವಸ್ಥೆ ಮಾಡಲಾಗಿತ್ತು. ೧೩ನೇ ತಾರೀಖು ಮಧ್ಯಾಹ್ನ ಶ್ರೀ ವಾದಿರಾಜ ಕಲ್ಯಾಣ ಮಂದಿರ, ಶ್ರೀ ಶ್ರೀನಿವಾಸ ಕಲ್ಯಾಣ ಮಂದಿರದಲ್ಲಿ ಊರಿನ ಮತ್ತು ಪರ ಊರಿನ ಎಲ್ಲರಿಗೂ ಮೃಷ್ಟಾನ್ನ ಭೋಜನ, ಸಮಿತಿಯವರ ನಿರೀಕ್ಷೆಗಿಂತ ಮೂರರಷ್ಟು ಜನ ಬಂದರೂ ಎಲ್ಲರಿಗೂ ಸಕ್ಕರೆ ಹೋಳಿಗೆ, ಲಾಡು, ಪಾಯಸ, ಹಯಗ್ರೀವ ಮೊದಲಾದ ಮಧುರ ಭಕ್ಷಗಳಿಂದ ಕೂಡಿದ ಸುಗ್ರಾಸ ಭೋಜನ ಯಾರಿಗೂ ಯಾವುದೇ ಕೊರತೆಯಿರಲಿಲ್ಲ. ಹಿಂದಿನ ದಿನದ ಮೆರವಣಿಗೆಯು ಕುಂದಾಪುರ ತಾಲ್ಲೂಕಿನಲ್ಲಿ ದಾಖಲೆ ಆಗಿರಬಹುದು. ಉಡುಪಿಯ ಪರ್ಯಾಯೋತ್ಸವದಂತೆ ಎಷ್ಟು ಅಡಿಗೆ ಮಾಡಿದರೂ ಮೊದಲಿನಿಂದ ಕಡೆಯವರೆಗೂ ಒಂದೇ ರುಚಿ, ಶಾಲಾ ಮಕ್ಕಳಿಗೂ ಅವರ ಪೋಷಕರಿಗೂ ಭೋಜನಕ್ಕೆ ಕರೆದಿದ್ದರು. ಅಡಿಗೆ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಶ್ರೀ ಬಿ.ಎಂ. ರಾಮಕೃಷ್ಣಹತ್ವಾರರೂ ಅಡಿಗೆ ತಂಡದ ಯಜಮಾನರಾದ ಶ್ರೀ ಅನಂತಯ್ಯ ಭಟ್ಟರೂ ಅಭಿನಂದನಾರ್ಹರು. ಅದಕ್ಕಾಗಿ ಶ್ರೀಗಳವರು ಅವರಿಬ್ಬರಿಗೂ ಉಡುಗೊರೆಯಿತ್ತು ಸನ್ಮಾನಿಸಿದರು.

ಶ್ರೀಗಳವರು ೬೦ನೇ ವರ್ಧಂತೀ ಸವಿನೆನಪಿಗಾಗಿ ೬೦ ಬಗೆಯ ಭಕ್ಷಗಳನ್ನು ಹಸ್ತೋದಕಕ್ಕೆ ತುಮಕೂರಿನ ಶ್ರೀಮತಿ ಮತ್ತು ಶ್ರೀ ಬಿ.ಪಿ. ನಾಗಭೂಷಣರಾಯರು ಮಾಡಿಸಿದ್ದರು. ಶ್ರೀ ರಾಮ ಮಂದಿರದಲ್ಲಿ ಸೋದೆ ಮತ್ತು ಶ್ರೀ ಕೃಷ್ಣಾಪುರ ಮಠದ ಶ್ರೀ ಪಾದಂಗಳವರಿಗೆ ಭಿಕ್ಷೆ ನಡೆಯಿತು.

**ಸನ್ಮಾನ ಸಮಾರಂಭ, ತುಲಾಭಾರ, ಕನಕಾಭಿಷೇಕ ಮತ್ತು ಸಭಾಕಾರ್ಯಕ್ರಮಗಳು.**

ಬುಧವಾರ ಮಧ್ಯಾಹ್ನದ ಸಂತರ್ಪಣೆ ಮುಗಿಯುತ್ತ ಇದ್ದಂತೆಯೇ ೩.೦೦ ಘಂಟೆಗೆ

ಸರಿಯಾಗಿ ಸಮಾರಂಭ ಸಭೆಯ ಅಧ್ಯಕ್ಷತೆ ವಹಿಸುವ ಉಡುಪಿ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರು ದಯಮಾಡಿಸಿದರು. ಅವರೊಂದಿಗೆ ಮುಖ್ಯ ಅತಿಥಿಗಳಾದ ಕೃಷ್ಣಾಪುರ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀ ಪಾದಂಗಳವರನ್ನೂ, ನಮ್ಮ ಗುರುಗಳಾದ ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳವರನ್ನೂ ವಾದ್ಯ, ವೈಭವ, ಭಜನೆ, ವೇದಘೋಷಗಳೊಡನೆ ಶ್ರೀ ಹಯವದನಮಂಟಪಕ್ಕೆ ಕರೆದುಕೊಂಡು ಬರಲಾಯಿತು. ಶ್ರೀ ಪಾದಂಗಳವರೆಲ್ಲರೂ ವಿಶೇಷ ಆಸನದಲ್ಲಿ ವಿರಾಜಮಾನರಾದರು. ವಿಶೇಷ ಆಹ್ವಾನಿತರಾದ ಶ್ರೀ ಹರಿಕೃಷ್ಣ ಪುನರೂರರೂ ಆಸೀನರಾದರು. ಸಮಿತಿಯ ಅಧ್ಯಕ್ಷರು ಎಲ್ಲ ಶ್ರೀಗಳವರಿಗೂ ಮಾಲಾರ್ಪಣೆ ಮಾಡಿ ಗೌರವಿಸಿದರು.

ವೇದ ಘೋಷ ದೇವತಾ ಪ್ರಾರ್ಥನೆ ನಂತರ ಕಾರ್ಯಕ್ರಮದ ನಿರೂಪಕರಾದ ಶ್ರೀ ಬಿ.ಎಸ್. ನಾಗರಾಜಧನ್ಯರು ಶ್ರೀ ಕೋಟೀಲಿಂಗೇಶ್ವರನ ದೇವ ಸಭೆಗೆ ಆಗಮಿಸಿದ ಯತಿತ್ರಯರನ್ನೂ ಗಣ್ಯರನ್ನೂ ಹಾಗೂ ಮಾಗಣೆಯ ಬಂಧುಗಳನ್ನು ಸ್ವಾಗತಿಸಿ ಪರಿಚಯ ಭಾಷಣವನ್ನು ಮಾಡಿದರು. ಶ್ರೀ ಕೆ. ಶ್ರೀಧರಹತ್ವಾರರು ಈ ಸಮಾರಂಭವನ್ನೂ ಮತ್ತು ಗ್ರಂಥಗಳ ಪ್ರಕಟಣೆಗಳನ್ನೂ ಹಮ್ಮಿಕೊಂಡ ಬಗ್ಗೆ ವಿವರಗಳನ್ನು ಸಭೆಗೆ ನೀಡಿದರು. ಸಮಾರಂಭಕ್ಕೆ ಶುಭ ಹಾರೈಸಿ ಬಂದ ಸಂದೇಶಗಳನ್ನು ಶ್ರೀ ನಾಗರಾಜಧನ್ಯರು ಓದಿದರು.

ಅನಂತರ ಸರ್ವಶ್ರೀ ಸೀತಾರಾಮರಾಯರು, ಸುಬ್ಬರಾಯರು, ನಾಗಭೂಷಣರಾಯರು, ಶಾಂತಾರಾಮರಾಯರು, ಶ್ರೀಧರ ಹತ್ವಾರರು, ಮೊದಲಾದ ಹಿರಿಯರೆಲ್ಲಾ ಸೇರಿ ನಮ್ಮ ಗುರುಗಳಿಗೆ ಮಾಗಣೆಯವರ ಪರವಾಗಿ ಕನಕಾಭಿಷೇಕ, ತುಲಾಭಾರ ನಡೆಸಿ ಶ್ರೀಗಳವರ ೬೦ನೇ ವರ್ಧಂತೀ ನೆನಪಿಗಾಗಿ ರೂ. ೬೦ ಸಾವಿರ ರೂಪಾಯಿ ನಿಧಿಯನ್ನು ಸಮರ್ಪಿಸಿದರು. ನಂತರ ಶ್ರೀ ಹೆಚ್. ಪಿ. ನಾಗರಾಜರಾಯರು ಸಿದ್ಧಪಡಿಸಿದ ಶ್ರೀಗಳವರ ಅಭಿವಂದನಾ ಪತ್ರವನ್ನು ಶ್ರೀ ಕೆ. ಶ್ರೀಪತಿ ಉಪಾಧ್ಯಾಯರು ವಾಚನ ಮಾಡಿದ ಮೇಲೆ ಶ್ರೀ ಸೀತಾರಾಮರಾಯರು ಗುರುಗಳಿಗೆ ಅರ್ಪಿಸಿ ಶಾಲು ಹೊದೆಸಿ ಸನ್ಮಾನಿಸಿ ವಂದಿಸಿದರು.

**ಸ್ವಾಪ್ನ ವೃಂದಾವನಾಖ್ಯಾನ, ಸ್ಮರಣ ಸಂಚಿಕೆ ಮತ್ತು ವಿವಿಧ ಕೃತಿಗಳ ಬಿಡುಗಡೆ.**

ಶ್ರೀ ಬಿ. ಪಿ. ನಾಗಭೂಷಣರಾಯರು ಶ್ರೀ ಗುರುರಾಜ ಮಹಿಮೆ ಮತ್ತು ವೈಭವಗಳನ್ನು ನಿರೂಪಿಸುವ "ಸ್ವಾಪ್ನವೃಂದಾವಾನಖ್ಯಾನ" ಗ್ರಂಥವನ್ನು ಕನ್ನಡ ಅನುವಾದದೊಂದಿಗೆ ಬರೆದು ಶ್ರೀಲಾತವ್ಯಾತ್ಮಕ ವಾದಿರಾಜ ಗುರು ಸೇವಾ ಸಮಿತಿ ಪ್ರಕಟಿಸಿದ ಈ ಗ್ರಂಥವನ್ನು ನಮ್ಮ ಗುರುಗಳು ಬಿಡುಗಡೆ ಮಾಡಿ ಪ್ರಕಟಣೆಗೆ ಧನ ಸಹಾಯ ಮಾಡಿದ ಶ್ರೀ ಹೆಚ್. ಸೀತಾರಾಮರಾಯರನ್ನು ಶ್ರೀ ಹೆಚ್. ವಿ. ಶಾಂತರಾಮರಾಯರನ್ನು ಫಲ ಮಂತ್ರಾಕ್ಷತೆ ನೀಡಿ ಅನುಗ್ರಹಿಸಿ 'ಸ್ವಾಪ್ನ ವೃಂದಾವನಾಖ್ಯಾನ' ಶ್ರೀ ಗುರುರಾಜರ ಋಜುತ್ವಸಿದ್ಧಾಂತಪ್ರಮೇಯಗಳನ್ನು ವಿವರಿಸಿ ಶ್ರೀ ನಾಗಭೂಷಣರಾಯರ ಅನುವಾದ ಕಾರ್ಯವನ್ನು ಪ್ರಶಂಸಿದರು.

ಶ್ರೀ ನಾಗಭೂಷಣರಾಯರು ಆ ಗ್ರಂಥವು ವೇದಕ್ಕೆ ಸಮಾನ. ಮಹಾಭಾರತದಂತೆ ಪವಿತ್ರವಾದುದು ಎಂದು ಅದರ ವಿವರಣೆ ನೀಡಿ ಸ್ವಾಪ್ನವೃಂದಾವನಾಖ್ಯಾನವನ್ನು ಸೋದೆಯಲ್ಲಿ ಶ್ರೀ ವೇದವೇದ್ಯರ ವೃಂದಾವನದ ಬದಿಯಲ್ಲಿ ಶಿಲಾಶಾಸನ ಮಾಡಿದ್ದು ದಿನವೂ ಪೂಜಿಸಲಾಗುತ್ತಿದೆಯೆಂದೂ, ದಿನವೂ ಅದನ್ನು ಪಾರಾಯಣ ಮಾಡಬೇಕಾದುದು ಅವಶ್ಯವೆಂದು ತಿಳಿಸಿದರು.

ನಂತರ ಶ್ರೀಗಳವರ ಆಶ್ರಮ ಸ್ವೀಕಾರದ ಸುವರ್ಣಮಹೋತ್ಸವದ ಮತ್ತು ೭೦ನೇ ವರ್ಧಂತಿ ಉತ್ಸವ ಸವಿನೆನಪಿನ 'ವಿಶ್ವಸೌರಭ' ಸ್ಮರಣ ಸಂಚಿಕೆಯನ್ನು ಕೃಷ್ಣಾಪುರ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀ ಪಾದಂಗಳವರು ಬಿಡುಗಡೆ ಮಾಡಿದರು. ಸ್ಮರಣ ಸಂಚಿಕೆಯ ಸಂಪಾದಕ ಶ್ರೀ ಹೆಚ್. ಪಿ. ನಾಗರಾಜರಾವ್‌ರವರು ಕೋಟೇಶ್ವರ ಮಾಗಣೆಯ ಶಿಷ್ಯರ ಸ್ವರೂಪೋದ್ಧಾರಕಾರಾದ ಶ್ರೀ ವಾದಿರಾಜ ಗುರುಸಾರ್ವಭೌಮರು ಮತ್ತು ಅವರ ಪರಂಪರೆಯ ಎಲ್ಲಾ ಪೀಠಾಧೀಶರೂ ಮಾಗಣೆಯವರ ಮೇಲೆ ಇಟ್ಟಿದ್ದ ವಾತ್ಸಲ್ಯವನ್ನು ಮತ್ತು ಈಗ ಪೀಠದಲ್ಲಿ ವಿರಾಜಮಾನರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಗಳವರು ಇಟ್ಟಿರುವ ವಾತ್ಸಲ್ಯ ಪ್ರೇಮದ ಮತ್ತು ಮಾಗಣೆಯ ಶಿಷ್ಯರು ಗುರುಗಳಲ್ಲಿ ಇಟ್ಟಿರುವ ಭಕ್ತಿ, ಶ್ರದ್ಧೆ ಸೌರಭವನ್ನು ಜಗತ್ತಿಗೆ ಸಾರುವ 'ವಿಶ್ವಸೌರಭ' ಸ್ಮರಣ ಸಂಚಿಕೆಯ ಸಂಪಾದಕ ಮಂಡಲಿಯ ಶ್ರೀ ಕೆ.ವಿ. ಕೃಷ್ಣಯ್ಯನವರು, ಶ್ರೀ ನಾಗಭೂಷಣರಾಯರು, ಶ್ರೀ ನಾಗರಾಜಧನ್ಯರುಗಳ ಸಹಾಯ ಸಹಕಾರ ಮತ್ತು ಶ್ರೀ ಹೆಚ್. ಸುಬ್ಬರಾಯರು ಮತ್ತು ಅವರ ಕುಟುಂಬದವರೆಲ್ಲರ ಸಹಕಾರವನ್ನು ಸ್ಮರಿಸಿ ಸ್ಮರಣ ಸಂಚಿಕೆ ಲೇಖನ ಬರೆದು ಕಳುಹಿಸಿದವರು, ಜಾಹೀರಾತು ನೀಡಿದವರು ಅದರಲ್ಲೂ ಸರ್ವಶ್ರೀ ಸುಬ್ಬರಾಯರು, ಎನ್. ಆರ್. ನಾರಾಯಣರಾಯರು, ಜಗನ್ನಾಥರಾಯರು, ಬಾಯರಿಯವರು, ಸೀತಾರಾಮರಾಯರು, ಶಾಂತರಾಮರಾಯರು, ಮೈಸೂರಿನ ಕೃಷ್ಣರಾಯರು ಮೊದಲಾದವರನ್ನೂ ಅಭಿನಂದಿಸಿದರು.

## ಶ್ರೀಗಳವರಿಂದ ಅನುಗ್ರಹ ಭಾಷಣ

ಈ ಸಂದರ್ಭದಲ್ಲಿ ಶ್ರೀ ಗೋಪಾಡಿ ರಾಘವೇಂದ್ರ ಭಟ್ಟರು ಪ್ರಕಟಿಸಿದ 'ಶ್ರೀ ಶ್ರೀಶಗುಣದರ್ಪಣಮ್' ಮಂಡ್ಯದ ಭಕ್ತ ಮಂಡಲಿಯವರ 'ಸೋದಾ ಕ್ಷೇತ್ರ ದರ್ಶನ' ಇತ್ಯಾದಿ ಪ್ರಕಟಣೆಗಳನ್ನೂ ಶ್ರೀ ಗಳವರು ಬಿಡುಗಡೆ ಮಾಡಿದರು.

ಆಮೇಲೆ ಗುರುಗಳಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ಸೋದಾ ಮಠದ ಗುರುಗಳಲ್ಲಿ ಕೋಟೇಶ್ವರ ಮಾಗಣೆಯ ಶಿಷ್ಯ ವೃಂದವರು ಇಟ್ಟ ಗೌರವ, ಶ್ರದ್ಧೆ, ಭಕ್ತಿ ವಿಶಿಷ್ಟವಾದುದು. ಮಾಗಣೆಯವರನ್ನು ಶ್ರೀ ಗುರುರಾಜರು ತಪ್ತಮುದ್ರಾಧಾರಣೆ ಮಾಡಿ ತತ್ವಜ್ಞಾನ ಉಪದೇಶಿಸಿ ಉದ್ಧರಿಸಿದರು. ಪರಂಪರೆಯಿಂದ ನಿಮ್ಮ ಹಿರಿಯರು ನಮ್ಮ ಪರಂಪರೆಯ ಗುರುಗಳಲ್ಲಿ ಅನನ್ಯವಾದ ಭಕ್ತಿಯಿಂದ ನಡೆದು ಅಷ್ಟ ಮಠಗಳಲ್ಲಿ ಮತ್ತು ಉಡುಪಿ ಶ್ರೀ ಕೃಷ್ಣ ಶ್ರೀ ಹಯವದನ ಶ್ರೀ ಭೂವರಾಹ ದೇವರಲ್ಲಿ ಸೇವೆ ಸಲ್ಲಿಸಿದ್ದರು. ಅವರ ಪುಣ್ಯದ ಫಲ ಇಂದು ನಿಮಗೆ ಶ್ರೀ ಗುರುರಾಜರು ಅನುಗ್ರಹಿಸಿರುತ್ತಾರೆ. ನೀವು ಅದನ್ನು "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ" ಎಂಬ ರೀತಿಯಲ್ಲಿ ನಮ್ಮನ್ನೆಲ್ಲಾ ಕರೆಸಿ ಸನ್ಮಾನಿಸಿದ್ದೀರಿ.

"ಯಸ್ಯ ದೇವೇ ಪರಾಭಕ್ತಿ ಯಥಾದೇವೇ ತಥಾಗುರೌ" ಎನ್ನುವ ಶ್ರುತಿ ಸಂದೇಶದಂತೆ ಪರಮಾತ್ಮನಲ್ಲಿ ಭಕ್ತಿ ಮಾಡುವಂತೆಯೇ ಗುರುಗಳಲ್ಲೂ ಭಕ್ತಿಮಾಡಬೇಕೆಂದು ಅರಿತು ಋಜುಜೀವೋತ್ತಮದೇವರಾದ ಶ್ರೀ ವಾದಿರಾಜರಲ್ಲೂ, ಭಾವೀ ರುದ್ರರಾದ ಶ್ರೀ ಭೂತರಾಜರಲ್ಲೂ ವಿಶೇಷ ಭಕ್ತಿಯಿಂದ ನಮ್ಮ ಉಪಾಸ್ಯಮೂರ್ತಿ ಶ್ರೀ ಭೂವರಾಹ, ಶ್ರೀ ಹಯಗ್ರೀವ, ಶ್ರೀ ವೇದವ್ಯಾಸರೊಂದಿಗೆ ನಮಗೆ ಕನಕಾಭಿಷೇಕ, ತುಲಭಾರ, ನಿಧಿ ಸಮರ್ಪಣೆ ಮಾಡಿರುತ್ತೀರಿ ಇವೆಲ್ಲವೂ ಶ್ರೀ ಗುರುರಾಜರ ಅಂತರ್ಯಾಮಿ ಶ್ರೀ ಮಧ್ವವಲ್ಲಭ ಉಡುಪಿ ಶ್ರೀ ಕೃಷ್ಣನಿಗೆ

ಪ್ರೀತವಾಗಿದೆ. ನೀವು ಅರ್ಪಿಸಿದ ರೂ. ೬೦ ಸಾವಿರ ರೂಪಾಯಿ ನಿಧಿಯನ್ನು ಕುಂಭಾಸಿಯಲ್ಲಿ ನಿರ್ಮಿಸುವ ಮಠದ ಜೀರ್ಣೋದ್ಧಾರಕ್ಕಾಗಿ ಉಪಯೋಗಿಸಬೇಕು ಎಂದು ಕುಂಭಾಸಿ ಮಠದ ಜೀರ್ಣೋದ್ಧಾರದ ನೇತೃತ್ವ ವಹಿಸಿದ ಶ್ರೀ ಶಾಂತಾರಾಮರಾಯರಿಗೆ ನೀಡಿ, ಶೀಘ್ರವಾಗಿ ಕಾರ್ಯ ಕೈಗೊಡಲೆಂದು ಹರಸಿ ಮಂತ್ರಾಕ್ಷತೆ ನೀಡಿ ಅನುಗ್ರಹಿಸಿದರು. ತುಲಾಭಾರ ಮಾಡಿದ ದ್ರವ್ಯವನ್ನು ಸೋದೆಯಲ್ಲಿ ಶ್ರೀ ಗುರುರಾಜರ ವೃಂದಾವನಕ್ಕೆ ಮುಂಭಾಗದಲ್ಲಿ ನಿರ್ಮಿಸುವ ರಜತ ಕವಚಕ್ಕಾಗಿ ವಿನಿಯೋಗಿಸುವುದಾಗಿ ಅಪ್ಪಣೆ ಕೊಡಿಸಿದರು.

"ಶ್ರೀಸ್ವಾಪ್ನ ವೃಂದಾವನಾಖ್ಯಾನ"ವನ್ನು ಕನ್ನಡಕ್ಕೆ ಅನುವಾದ ಮಾಡಿದ ಶ್ರೀ ನಾಗಭೂಷಣರಾಯರನ್ನು ಮತ್ತು ಗ್ರಂಥ ಪ್ರಕಾಶನಕ್ಕೆ ದ್ರವ್ಯ ಸಹಾಯ ಮಾಡಿದ ಶ್ರೀ ಸೀತಾರಾಯರಾಯರು ಮತ್ತು ಶಾಂತಾರಾಮರಾಯರನ್ನು ಪ್ರಶಂಸಿಸಿ.

**ಯೋ ಮಾಂ ದೇವಂ ವಿಜಾನಾತಿ ಋಜುಸ್ಥಂ ಪುಣ್ಯ ಕೃನ್ನರಃ ॥**
**ಸ ಯಾತಿ ನಿಲಯಂ ಗತ್ವಾ ಯದ್ಗತ್ವಾ ನ ನಿವರ್ತತೇ ॥**

ನನ್ನನ್ನು ಋಜುಗಣದೇವನೆಂದು ತಿಳಿದು ಆಚರಿಸುವ ಪುಣ್ಯ ಪುರುಷನು ಯಾವತ್ತೂ ಹಿಂದಕ್ಕೆ ಬಾರದ ಮೋಕ್ಷ ಸುಖ ಹೊಂದುವನು ಎಂದು ಶ್ರೀ ಗುರುರಾಜರು ಅಪ್ಪಣೆ ಕೊಡಿಸಿದ್ದಾರೆ. ಅವರ ಸ್ವರೂಪ ಮಹಾತ್ಮೆಯನ್ನು ತಿಳಿಸುವ ಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಿ ಎಲ್ಲರಿಗೂ ತಿಳಿಯುವಂತೆ ಮಾಡಿದ ನಿಮ್ಮ ಪುಣ್ಯ ಕಾರ್ಯವು ಬಹು ದೊಡ್ಡದಾಗಿರುತ್ತದೆ. ಇದರಿಂದ ಶ್ರೀ ಹರಿವಾಯುಗಳೂ, ಶ್ರೀ ಗುರುರಾಜರೂ, ಶ್ರೀ ಭೂತರಾಜರೂ ಸುಪ್ರೀತರಾಗಿರುತ್ತಾರೆ.

ವಿಶ್ವ ಸೌರಭ ಸ್ಮರಣ ಸಂಚಿಕೆ, ಸುಲಭ ನಿತ್ಯಾನುಷ್ಠಾನ, ಶ್ರೀಶಗುಣದರ್ಪಣಮ್, ಸೋದಾ ಕ್ಷೇತ್ರ ದರ್ಶನ ಇತ್ಯಾದಿ ಪ್ರಕಟಣೆ ಮಾಡಿದ್ದೀರಿ ಇದಕ್ಕೆ ಕಾರಣರಾದ ಎಲ್ಲರೂ ಪುಣ್ಯಶಾಲಿಗಳು ಎಂದೂ, ಇದೇ ಸಂದರ್ಭದಲ್ಲಿ ಶ್ರೀ ಗುರುರಾಜರ ಕೃತಿ "ವೈಕುಂಠ ವರ್ಣನೆ" ಗ್ರಂಥವೂ ಬಿಡುಗಡೆ ಆಗಬೇಕಿದ್ದು, ಸೋದೆ ಹಬ್ಬದ ಸಮಯಕ್ಕೆ ಬಿಡುಗಡೆ ಆಗುವುದೆಂದು ತಿಳಿಸಿದರು. ಹಿಂದಿನ ತಮ್ಮ ಉಡುಪಿ ಶ್ರೀ ಕೃಷ್ಣದೇವರ ಪೂಜಾ ಸಮಯದಲ್ಲಿ ಮಾಗಣೆಯವರು ವಿಶೇಷ ಸಹಾಯ ಸಹಕಾರ ನೀಡಿದ್ದೀರಿ, ಮುಂದಿನ ಪರ್ಯಾಯದಲ್ಲಿ ನಿತ್ಯವೂ ದೇವರಿಗೆ ಬ್ರಹ್ಮೋತ್ಸವ ನಡೆಯುವಂತೆ ಈಗಾಗಲೇ ವ್ಯವಸ್ಥೆ ಮಾಡಿರುತ್ತೀರಿ. ಸೋದೆ, ಹೂವಿನಕೆರೆ, ಕುಂಭಾಸಿ ಕ್ಷೇತ್ರಗಳ ಅಭಿವೃದ್ಧಿ ಕಾರ್ಯಗಳನ್ನು ನಡೆಸುವಲ್ಲಿಯೂ ಮುಂದಾಗಿದ್ದೀರಿ. ಅನೇಕ ಪುಣ್ಯಕಾರ್ಯ ಮಾಡುವ ಮನಸ್ಸುಳ್ಳ ನಿಮಗೆಲ್ಲಾ ಶ್ರೀ ಹರಿವಾಯುಗಳೂ, ಶ್ರೀ ರಾಜರೂ, ಶ್ರೀ ಭೂತರಾಜರು ಸದಾ ಅನುಗ್ರಹಿಸುತ್ತಾ ಇರಲಿ ಎಂದು ಹರಸಿದರು. ಬಹುಮುಖ ಪ್ರತಿಭೆ, ವಿದ್ಯೆ, ಸಾಧನದಿಂದ ಮಧ್ವ ಸಮಾಜವನ್ನು ಮುಂದಕ್ಕೆ ತರುತ್ತಿರುವ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥರನ್ನು ಅವರು ವಾಮನ ರೂಪದ ತ್ರಿವಿಕ್ರಮ ದೇವರಂತೆ ಬೆಳೆದು ವ್ಯಾಪಿಸಿಕೊಂಡರು. ಅವರು ಸಮಾಜಕ್ಕೆ ಸಲ್ಲಿಸುತ್ತಿರುವ ಕಾರ್ಯಗಳಿಗೆ ಎಲ್ಲರೂ ಸಹಕಾರ ನೀಡಬೇಕೆಂದು ತಿಳಿಸಿದರು.

ಮುಖ್ಯ ಅತಿಥಿಗಳಾದ ಕೃಷ್ಣಾಪುರ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀಪಾದಂಗಳವರ ಬಗ್ಗೆ ಅವರ ಗುರುಗಳಾದ ಸೋದೆ ಸ್ವಾಮಿಗಳವರು ಮಾತನಾಡುತ್ತಾ ಶ್ರೀ ಶ್ರೀ ವಿದ್ಯಾಸಾಗರ ತೀರ್ಥರು ನಿಜಕ್ಕೂ ವಿದ್ಯಾ, ಜ್ಞಾನ ವಿನಯಸಂಪನ್ನರು ಶ್ರೀ ಗುರುರಾಜರಲ್ಲಿ

ಶ್ರೀ ಭೂತರಾಜರಲ್ಲೂ ಬಹಳವಾಗಿ ಭಕ್ತಿ ಮಾಡುತ್ತಾ ತಮ್ಮ ಪರ್ಯಾಯಕಾಲದಲ್ಲಿ ಶ್ರೀ ಹರಿವಾಯುಗಳ ಸೇವಾ ಕಾರ್ಯಗಳನ್ನು ವೈಭವಯುತವಾಗಿ ನಡೆಸಿ ಗೋಶಾಲೆ, ಗುರುಗಳ ವೃಂದಾವನ ಮಂದಿರ, ಅಶ್ವತ್ಥ ಕಟ್ಟೆ, ನಾಗದೇವರಬನ, ಶ್ರೀ ಸುಬ್ರಮಣ್ಯದೇವರಗುಡಿ ಪರಿಸರ ಎಲ್ಲಾ ನವೀಕರಿಸಿದರು ಎಂದು ಪ್ರಶಂಸಿದರು.

ವಿಶೇಷ ಆಹ್ವಾನಿತರಾದ ಶ್ರೀ ಹರಿಕೃಷ್ಣ ಪುನರೂರು ಅವರು ದಕ್ಷಿಣ ಕನ್ನಡ ಜಿಲ್ಲೆಯ ದೊಡ್ಡ ಮೇಧಾವಿಗಳು, ದಾನಿಗಳು ಮತ್ತು ಸಾರ್ವಜನಿಕ ಸೇವಾಕರ್ತರು ಎಂದು ನುಡಿದರು.

**ಶ್ರೀ ಶ್ರೀ ವಿದ್ಯಾಸಾಗರ ತೀರ್ಥರ ಆಶೀರ್ವಚನ :**

ಮುಖ್ಯಅತಿಥಿಗಳಾದ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀ ಪಾದಂಗಳವರು ಕೋಟೇಶ್ವರದಲ್ಲಿ ನಡೆದ ಮೆರವಣಿಗೆ ಮತ್ತು ಸನ್ಮಾನ ಸಮಾರಂಭಗಳು ಗುರುಗಳ ಮತ್ತು ಶಿಷ್ಯರ ಸಂಬಂಧ ಹೇಗಿರಬೇಕು ಎಂಬುದನ್ನು ಕೋಟೇಶ್ವರ ಮಾಗಣೆ ಶಿಷ್ಯರು ಈ ದಿನ ಇಲ್ಲಿ ತೋರಿಸಿಕೊಟ್ಟಿದ್ದಾರೆ. ಶ್ರೀ ಹರಿವಾಯುಗಳಲ್ಲಿ ಶ್ರೀ ಗುರುರಾಜರಲ್ಲಿ ಶ್ರೀ ಭೂತರಾಜರಲ್ಲಿ ಮತ್ತು ನಮ್ಮ ಗುರುಗಳಲ್ಲಿ ಮಾಗಣೆಯವರು ಇಟ್ಟಿರುವ ಭಕ್ತಿ ಭಾವವು ತಮಗೆ ಬಹಳ ಸಂತಸ ತಂದಿದೆ ಎಂದು ನುಡಿದ ಶ್ರೀಗಳವರು ತಮ್ಮ ಗುರುಗಳು ತಮ್ಮ ಬಗ್ಗೆ ಪ್ರಶಂಸಿದ್ದನ್ನು ಶ್ರೀಗಳವರ ಅನುಗ್ರಹದಿಂದಲೇ ಪರ್ಯಾಯ ನಡೆಸಲು ಸಾಧ್ಯವಾಯಿತು ಎಂದು ಪರ್ಯಾಯ ಕಾಲದಲ್ಲಿ ಗುರುಗಳು ಸದಾ ತಮಗೆ ಮಾರ್ಗದರ್ಶನ ಮಾಡಿದರೆಂದು ಕೃತಜ್ಞತೆಯಿಂದ ಸ್ಮರಿಸಿದರು.

ವಿಶೇಷ ಆಹ್ವಾನಿತರಾದ ಶ್ರೀ ಹರಿಕೃಷ್ಣ ಪುನರೂರರು ಮಾತನಾಡಿ ಸೋದೆ ಮಠಾಧೀಶರ ದಿವ್ಯ ಸ್ವರೂಪ ಮತ್ತು ಅವರ ಮಂದಸ್ಮಿತ ಮುಖ ಕಮಲಗಳಲ್ಲಿ ನೋಡಿದರೇ ದೈವೀ ಪುರುಷರೆಂದು ತಿಳಿಯುತ್ತದೆ. ಪೂಜನೀಯರಾದ ಪೇಜಾವರ ಶ್ರೀ ಪಾದಂಗಳವರ ಶ್ರೀ ಶ್ರೀ ಕೃಷ್ಣಾಪುರ ಮಠಾಧೀಶರ ದಿವ್ಯ ಸಾನ್ನಿಧ್ಯದಲ್ಲಿ ಕೋಟೇಶ್ವರ ಗ್ರಾಮದವರು ನಡೆಸುವ ಭಕ್ತಿ ಸಮರ್ಪಣೆ ನೋಡಿ ಪುಣ್ಯಪುರುಷರಾದ ಶ್ರೀ ಪಾದಂಗಳವರ ಅನುಗ್ರಹ ಪಡೆದು ಪುಣ್ಯವಂತನಾಗಬೇಕೆಂದು ನಾನು ಬಂದೆನಲ್ಲದೆ ಭಾಷಣ ಮಾಡಲಿಕ್ಕೆ ಅಲ್ಲ ಎಂದು ತಮ್ಮ ಸಜ್ಜನಿಕೆಯನ್ನು ಪ್ರಕಟಪಡಿಸಿದರು.

## ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರ ಅಧ್ಯಕ್ಷ ಭಾಷಣ

ಅಧ್ಯಕ್ಷತೆ ವಹಿಸಿದ್ದ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರು ಕೋಟೇಶ್ವರ ಮಾಗಣೆಯ ಶಿಷ್ಯರು ತಮ್ಮ ಗುರುಗಳನ್ನು ಗುರುಗಳ ಪೀಠಾರೋಹಣದ ಸುವರ್ಣ ಮಹೋತ್ಸವ ವರ್ಷದಲ್ಲಿ ೭೦ನೇ ವರ್ಧಂತ್ಯೋತ್ಸವವನ್ನು ಬಹಳ ಶ್ರದ್ಧಾಭಕ್ತಿಯಿಂದ ಆಚರಿಸುತ್ತಿದ್ದೀರಿ, ಕೋಟೇಶ್ವರದವರು ಶ್ರೀ ವಾದಿರಾಜರ ಅತ್ಯಂತ ಪ್ರೀತಿಯ ಶಿಷ್ಯರು. ಆದ್ದರಿಂದ ಗುರುರಾಜರ ಪೂರ್ಣ ಅನುಗ್ರಹಕ್ಕೆ ಪಾತ್ರರು. ಶ್ರೀ ಹಯಗ್ರೀವ ದೇವರು ದೇವೋತ್ತಮನಾದರೆ – ಶ್ರೀ ವಾದಿರಾಜರು ಜೀವೋತ್ತಮರು. ಶ್ರೀ ವಾದಿರಾಜರ ಪೀಠಾಧೀಶರಾದ ಗುರುಗಳು ವಿಶ್ವೋತ್ತಮರಾದರೆ ಕೋಟೇಶ್ವರ ಮಾಗಣೆಯವರು ಶಿಷ್ಯೋತ್ತಮರು. ಶ್ರೀಲಾತವ್ಯಾತ್ಮಕ ವಾದಿರಾಜಗುರು ಸೇವಾ ಸಮಿತಿಯು ಗುರುಗಳನ್ನು ಭಕ್ತಿ ಗೌರವದಿಂದ ಸನ್ಮಾನಿಸುತ್ತಿರುವುದು ಕೋಟೇಶ್ವರದೇವರೂ ಧ್ವಜಪುರಾಧೀಶ ಕೋಟೇಶ್ವರ, ಶ್ರೀ ಕೋಟಿ

ಲಿಂಗೇಶ್ವರ. ಈ ಕಾರ್ಯಕ್ರಮ ನಡೆಸಿದ ನೀವೂ ಕೋಟೇಶ್ವರರು ಎಂದರು. ಈ ಎರಡು ದಿನದಿಂದ ಇಲ್ಲಿ ನಡೆದ ಎಲ್ಲಾ ಕಾರ್ಯಕ್ರಮಗಳೂ ಅದ್ಭುತ. ಇದಕ್ಕೆ ಕೋಟೇಶ್ವರದವರ ಮೇಲೆ ಭಾವೀ ಸಮೀರರಾದ ಶ್ರೀ ವಾದಿರಾಜ ಗುರು ಸಾರ್ವಭೌಮರ ಮತ್ತು ಅವರ ಅಂತರ್ಯಾಮಿ ಶ್ರೀ ಭೂವರಾಹ ದೇವರ ದಯೆ. ನಿಮ್ಮ ಗುರುಗಳ ಸನ್ಮಾನ ಸಮಾರಂಭಕ್ಕಾಗಿ ನೀವುಗಳು ಎಷ್ಟೋ ದೂರದಿಂದ ಬಂದು ಈ ಶ್ರೀ ಹಯವದನ ಮಂಟಪ ಮತ್ತು ರಥ ಬೀದಿಯಲ್ಲಿ ನೆರೆದಿರುವ ಸಂಭ್ರಮ ಸಡಗರ ಭಕ್ತಿ ಎಲ್ಲವನ್ನು ನೋಡಿದರೆ ಕೋಟೇಶ್ವರದ ಹಬ್ಬದಂತೆ ಕಾಣುತ್ತದೆ ಎಂದು ಶ್ಲಾಘಿಸಿದರು. ಸೋದೆ ಮಠಾಧೀಶರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥರು ವೈರಾಗ್ಯ, ತಪಸ್ಸು, ವಿದ್ಯೆಗಳ ಸಾಕಾರ ಮೂರ್ತಿ ಅವರ ಶಿಷ್ಯ ವಾತ್ಸಲ್ಯ ಆದರ್ಶವಾದುದು "ವಿಶ್ವೋತ್ತಮರಾದ ಶ್ರೀಗಳ ಅನುಗ್ರಹ ಶಿಷ್ಯೋತ್ತಮರ ಮೇಲೆ ನಿರಂತರವಾಗಿರಲಿ" ಎಂದು ಅಪೂರ್ವವಾದ ಈ ಸಮಾರಂಭಕ್ಕೆ ಕಾರಣರಾದ ಎಲ್ಲರೂ ಅಭಿನಂದನಾರ್ಹರು ಎಂದು ಹೇಳಿದರು :

ಪೇಜಾವರ ಶ್ರೀ ಪಾದಂಗಳವರು ನಂತರ ಸೋದೆ ಮಠಾಧೀಶರಿಗೆ ಶಾಲು ಹೊದಿಸಿ ಉಡುಗೊರೆಯಿತ್ತು ತಮ್ಮ ಮಠದ ಪರವಾಗಿ ಸನ್ಮಾನಿಸಿದರು.

ನಂತರ ಶ್ರೀ ಡಿ. ನಾಗೇಂದ್ರ ಭಟ್ಟರಿಂದ ವಂದನಾರ್ಪಣೆಯಾದ ಮೇಲೆ ಪೇಜಾವರ ಶ್ರೀಗಳವರು, ಕೃಷ್ಣಾಪುರ ಶ್ರೀಗಳವರು ಉಡುಪಿಗೆ ತೆರಳಿದರು. ಸೋದೆ ಮಠಾಧೀಶರು ಶ್ರೀ ರಾಮ ಮಂದಿರದಲ್ಲಿ ರಾತ್ರಿ ಪೂಜೆ, ತೊಟ್ಟಿಲು ಪೂಜೆ ಮತ್ತು ಶ್ರೀ ಭೂತರಾಜರ ಪೂಜೆ ಸಲ್ಲಿಸಿ ಎಲ್ಲಾ ಭಕ್ತರಿಗೂ ಫಲ ಮಂತ್ರಾಕ್ಷತೆ ಕೊಟ್ಟು ಅನುಗ್ರಹಿಸಿದರು.

ರಾತ್ರೆ, ಯಕ್ಷಗಾನ, ಬಯಲಾಟವನ್ನು ದಿ॥ ಮಾರ್ಕೋಡು ಲಕ್ಷ್ಮೀನಾರಾಯಣರಾಯರು ಮಕ್ಕಳು ಇಡಿಸಿದ್ದರು. ಶ್ರೀ ಹಯವದನ ಮಂಟಪದಲ್ಲಿ ೧೩ನೇ ತಾರೀಖಿನಂದು ನಿರಂತರವಾಗಿ ವಿವಿಧ ಮನೋರಂಜನಾ ಕಾರ್ಯಕ್ರಮ ಸಭಾಕಾರ್ಯವಿಲ್ಲದ ಸಮಯದಲ್ಲಿ ನಡೆಯುತ್ತಲೇ ಇದ್ದಿತ್ತು.

ಇಷ್ಟು ವೈಭವ ಸಂಭ್ರಮದ ಕಾರ್ಯಕ್ರಮಗಳನ್ನು ಕೋಟೇಶ್ವರದಲ್ಲಿ ಹಿಂದೆ ನಡೆದೇ ಇಲ್ಲ. ಇಂತಹ ಕಾರ್ಯಕ್ರಮ ನೋಡಿದ್ದು ಭಾಗವಹಿಸಿದ್ದು ಎಲ್ಲಾ ನಮ್ಮ ಸುಕೃತ ಪುಣ್ಯದ ಫಲ ಎಂದು ತಿಳಿದು ಎಲ್ಲರೂ ರಾತ್ರೆ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಶ್ರೀ ಮಧ್ವದುಗ್ಧಾಬ್ಧಯೇ ನಮಃ ॥ಶ್ರೀ ಪತಿರ್ಮಾನದೋ ನಃ ॥ ಶ್ರೀ ಗುರುರಾಜೋ ವಿಜಯತೇ॥
॥ಶ್ರೀ ಭೂತರಾಜಾಯ ನಮಃ॥

॥ ಶ್ರೀ ಮಾಮನೋವಲ್ಲಭಂ ವಾಜಿವದನಂ ಸತ್ಪ್ರಮೋದನಂ
ಮಧ್ವಹೃತ್ಸದನಂ ಭಾವಿಮಧ್ವಸದ್ಭುಜಗಂ ಭಜೇ ॥

ಸ್ವಸ್ತಿ ! ಶ್ರೀ ಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯತ್ವಾದನೇಕ ಗುಣ ಪರಿಪೂರ್ಣ ಪದವಾಕ್ಯ ಪ್ರಮಾಣ ಪಾರಾವಾರ ಪಾರೀನ ಸರ್ವತಂತ್ರ ಸ್ವತಂತ್ರ ಯಮನಿಯಮಾಸನ ಪ್ರಾಣಾಯಮ ಪ್ರತ್ಯಾಹಾರ ಧ್ಯಾನಧಾರಣಾ ಸಮಾಭ್ಯಂಷ್ಟಾಂಗಯೋಗಾನುಷ್ಠಾನ ನಿಷ್ಣಾತ ಸಕಲಮುನಿ ನಿಕರಮಣಿ ಮಯ ಮುಕುಟ ಪ್ರಭಾ ಪುಂಜರಂಜಿತ ಶ್ರೀ ಮದ್ರಜತ ಪೀಠಪುರಾಧೀಶ ಶ್ರೀ ಕೃಷ್ಣ ಪಾದ ಪದ್ಮಾರಾಧಕ ದ್ವೈತಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಸಮೀರಾವತಾರ ಶ್ರೀ ಮದಾನಂದ ತೀರ್ಥ ಭಗವತ್ಪಾದಾಚಾರ್ಯ ಸೋದರ್ಯ ಶ್ರೀ ಮದ್‌ವಿಷ್ಣುತೀರ್ಥಾಚಾರ್ಯ ಶುಭವಂಶಾಬ್ಧಿಚಂದ್ರ ಭಾವೀಸಮೀರ ಶ್ರೀ ಮದ್ ವಾದಿರಾಜ ಗುರು ಪೀಠಾಧಿರೂಢ ಶ್ರೀ ಮದ್ ವೃಂದಾವನಾಚಾರ್ಯ ಶುಭ ಸಂಪ್ರದಾಯ ಪ್ರವರ್ತಕ ಶ್ರೀ ಮದ್ ವಿಶ್ವಾಧೀಶಮುನಿವರ ಕುಮಾರಕ ಶ್ರೀಮದ್ ವಿಶ್ವೇಂದ್ರತೀರ್ಥಕರ ಸಂಜಾತ.

# ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರ

೬೦ನೇ ವರ್ಧಂತೀ ಹಾಗೂ ಆಶ್ರಮ ಸ್ವೀಕಾರದ ಸುವರ್ಣ ಮಹೋತ್ಸವಗಳ ಸಂದರ್ಭದಲ್ಲಿ ಕೋಟೀಶ್ವರ ಮಾಗಣೆಯ ಶಿಷ್ಯರನ್ನು ಅನುಗ್ರಹಿಸಲು ಬಂದಿರುವ ತಮ್ಮನ್ನು ಅತ್ಯಂತ ಭಕ್ತಿ ಪುರಸ್ಸರವಾಗಿ ಸ್ವಾಗತಿಸಿ ತಮ್ಮ ಪಾವನವಾದ ದಿವ್ಯ ಸನ್ನಿಧಿಯಲ್ಲಿ ಅನಂತಾನಂತ ವಂದನೆಗಳೊಂದಿಗೆ ಸಮರ್ಪಿಸಿದ

# ಸನ್ಮಾನ ಪತ್ರ

**ಶ್ರೀ ಪೂರ್ಣಬೋಧ ಗುರು ಸೋದರ ವಂಶಜರೇ !**

ಜಗದ್ಗುರು ಶ್ರೀಮನ್‌ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರೂ ಸೋದರರೂ ಆದ ಶ್ರೀ ವಿಷ್ಣು ತೀರ್ಥರ ಸೋದೆ ಶ್ರೀ ವಾದಿರಾಜ ಮಠದ ಪೀಳಿಗೆಯಲ್ಲಿ ೩೫ನೇ ಯತಿಗಳಾದ ತಾವು, ತಮ್ಮ ೯ನೇ ವಯಸ್ಸಿನಲ್ಲಿಯೇ ಗುರುಗಳಾದ ಶ್ರೀ ವಿಶ್ವೇಂದ್ರ ತೀರ್ಥ ಶ್ರೀ ಪಾದಂಗಳವರಿಂದ ಪರಮ ಹಂಸ ಪರಿವ್ರಾಜಕ ಪದವಿಯನ್ನು ಸ್ವೀಕರಿಸಿ ಅನವರತ ಶಾಸ್ತ್ರಾಭ್ಯಾಸ, ತತ್ವಜ್ಞಾನ, ಚಿಂತನೆ, ಯತಿಧರ್ಮಪಾಲನೆ ಮತ್ತು ಹರಿಗುರುಗಳ ಆರಾಧನೆಗಳಲ್ಲಿ ನಿರತರಾಗಿ ಪರಮ ವೈರಾಗ್ಯ ಮೂರ್ತಿಗಳಾಗಿರುತ್ತೀರಿ.

ಮಹಾ ಮಹಿಮರೂ, ಶ್ರೀ ಹರಿಯ ಏಕಾಂತ ಭಕ್ತೋತ್ತಮರೂ, ಪಂಚ ವೃಂದಾವನಗಳಲ್ಲಿ

ಸದಾ ಸನ್ನಿಹಿತರಾಗಿ ಕಾಮಧೇನುವಿನಂತೆ ಭಕ್ತಾಭೀಷ್ಟ ಪ್ರದಾಯಕರೂ ಆಗಿರುವ ಭಾವೀಸಮೀರ ಶ್ರೀ ವಾದಿರಾಜ ಗುರುಸಾರ್ವಭೌಮರ ಪೀಳಿಗೆಯಲ್ಲಿ ಬಂದ ತಾವು ಶ್ರೀ ಗುರುರಾಜರ ಪಂಚವೃಂದಾವನದ ದರ್ಶನವು ಸಕಲ ಭಕ್ತರಿಗೆ ನಾಲ್ಕು ದಿಕ್ಕಿನಲ್ಲೂ ದರ್ಶನವಾಗುವಂತೆ ಶ್ರೀ ವಾದಿರಾಜರ ಗುಡಿಯ ಪುನಃರ್ನಿರ್ಮಾಣ ಮಾಡಿಸಿ ಭಕ್ತ ಜನರಿಗೆ ಪರಮಾನುಗ್ರಹ ಮಾಡಿದ್ದೀರಿ.

**ವಿದ್ಯಾ ಸಾಮ್ರಾಟ್ ಪೋಷಕರೇ**

ಲೌಕಿಕ ವಿಷಯ ಮತ್ತು ಪ್ರಸಿದ್ಧಿಗೆ ವಿಮುಖರಾಗಿ ಪ್ರಾಚೀನ ಶಾಸ್ತ್ರ ಮತ್ತು ಧರ್ಮ ಗ್ರಂಥಗಳನ್ನು ಚೆನ್ನಾಗಿ ಅಧ್ಯಯನ ಮಾಡಿ ವೇದಾಂತ ಜ್ಞಾನೇಚ್ಛುಗಳಿಗೆ ಉಪದೇಶಿಸುತ್ತಾ ಪ್ರಚಾರಕ್ಕೆ ಬರದೇ ಇರುವ ತಾಳೇವಾಲೆಗಳಲ್ಲಿ ಲಿಖಿತವಾಗಿರುವ ಅನೇಕ ಗ್ರಂಥ ಹಾಗೂ ಕೃತಿಗಳನ್ನು ತಾವು ಸಂಶೋಧಿಸಿ ಪ್ರಕಟಿಸಿದ್ದೀರಿ, ಶ್ರೀ ಗುರುರಾಜರ "ಹರಿಭಕ್ತಿಲತಾ", "ಶೃತಿತತ್ವ ಪ್ರಕಾಶಿಕಾ", "ಲಕ್ಷಾಲಂಕಾರ", "ಸಟೀಕಾ ದಶವತಾರ ಸ್ತುತಿ" ಇತ್ಯಾದಿಗಳನ್ನೂ ಶ್ರೀ ನಾರಾಯಣ ಪಂಡಿತಾಚಾರ್ಯರ "ಶುಭೋದಯ"ವನ್ನೂ ಪ್ರಕಾಶನಗೊಳಿಸೀದ್ದಿರಿ. ಹಸ್ತ ಪ್ರತಿಯಲ್ಲಿದ್ದ ಇನ್ನೂ ಅನೇಕ ತುಳು, ಕನ್ನಡ, ಸಂಸ್ಕೃತ ಕೃತಿಗಳನ್ನು ಶ್ರಮ ವಹಿಸಿ ಶೋಧಿಸಿ ಪ್ರಕಟಿಸಿದ್ದೀರಿ ಮತ್ತು ಮುದ್ರಿಸಲು ಉದ್ಯುಕ್ತರಾಗಿದ್ದೀರಿ. ಶ್ರೀಮಧ್ವ ಶಾಸ್ತ್ರಗಳಲ್ಲಿ ಮತ್ತು ಶ್ರೀ ಗುರುರಾಜರ ಋಜುತ್ವ ಸಿದ್ಧಾಂತದ ವೇದತುಲ್ಯವಾದ "ವೃಂದಾವನಾಖ್ಯಾನ" ಮೊದಲಾದವುಗಳಲ್ಲಿ ಆಸೀಮ ನಿಷ್ಣಾಜ್ಞಾನಿಗಳಾದ ತಾವು ಶ್ರೀ ಕೃಷ್ಣಾಪುರ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಸಾಗರ ತೀರ್ಥ ಶ್ರೀ ಪಾದಂಗಳವರಿಗೆ "ಶ್ರೀಮನ್ ನ್ಯಾಯಸುಧಾ" ಪಾಠಮಾಡಿ ಮಂಗಳ ಮಾಡಿರುತ್ತೀರಿ.

ಉಡುಪಿ ಶ್ರೀ ಕೃಷ್ಣ ದೇವರ ಮೂರು ಪೂಜಾ ಪರ್ಯಾಯ ಪೂರೈಸಿದ ತಾವು ಮೂರನೇ ಪರ್ಯಾಯದ ಆರಂಭದಲ್ಲಿ ಶ್ರೀ ವಾದಿರಾಜ ಗುರುರಾಜರ ಅವತಾರದ "ಪಂಚ ಶತಾಬ್ಧಿ" ಉತ್ಸವವನ್ನು ಶ್ರೀಕೃಷ್ಣ ದೇವರ ಸನ್ನಿಧಿಯಲ್ಲಿ ಅಭೂತಪೂರ್ವಕವಾಗಿ ಬಹು ವೈಭವದಿಂದ ನೆರವೇರಿಸಿದ್ದೀರಿ,

**ಸಂಪ್ರದಾಯ ಪ್ರವರ್ತಕರೇ**

ಆಧ್ಯಾತ್ಮಿಕ ಕಾರ್ಯಗಳಲ್ಲದೆ ತಮ್ಮ ಮಠಕ್ಕೆ ಸೇರಿದ ವಿವಿಧ ಕ್ಷೇತ್ರಗಳಿಗೆ ಬರುವ ಭಕ್ತಾದಿಗಳಿಗೆ ಸಂಪ್ರದಾಯ ಪೂಜಾದಿಗಳಿಗೆ ಅನುಕೂಲವಾಗುವಂತೆ ಸೋದಾಕ್ಷೇತ್ರದಲ್ಲಿ ಮಠ, ಮಂದಿರಗಳ ಪುನಃನಿರ್ಮಾಣ ಮಾಡಿಸಿ ಅನೇಕ ಸೌಕರ್ಯಗಳನ್ನು ಏರ್ಪಡಿಸಿದ್ದಲ್ಲದೆ, ಇನ್ನೂ ಅಧಿಕ ಸೌಲಭ್ಯಗಳಿಗಾಗಿ ಭವನಗಳನ್ನು ನಿರ್ಮಾಣ ಮಾಡಿಸಲು ಉದ್ಯುಕ್ತರಾಗಿದ್ದೀರಿ. ಹೂವಿನಕೆರೆಯಲ್ಲಿ ಶ್ರೀ ಗುರುರಾಜರು ಅವತಾರ ಮಾಡಿದ ಕ್ಷೇತ್ರವನ್ನು ಪೂರ್ಣವಾಗಿ ನವೀಕರಣಗೊಳಿಸಿದ್ದಲ್ಲದೆ ಗೋ ಸೇವಾ ಕೇಂದ್ರವನ್ನೂ ಅಲ್ಲಿ ಸ್ಥಾಪಿಸಿದ್ದೀರಿ. ಕುಂಭಾಸಿಯಲ್ಲಿ ಮಠದ ಭವನವನ್ನು ಇಷ್ಟರಲ್ಲಿಯೇ ಪ್ರಾರಂಭಿಸುವ ಯೋಜನೆಯೂ ನಮಗೆಲ್ಲಾ ಸಂತಸದ ವಿಷಯ. ಶ್ರೀ ಭೂತರಾಜರ ಅವತಾರ ಕ್ಷೇತ್ರವಾದ ನಾರಳ ಮಠದಲ್ಲೂ ಶ್ರೀ ಭೂತರಾಜರ ಗುಡಿಯ ಜೀರ್ಣೋದ್ಧಾರ ಮಾಡಿ ಮಠದ ನವೀಕರಣವನ್ನೂ ನಡೆಸುತ್ತಿದ್ದೀರಿ. ನಡ್ಯಂತಾಡಿ, ರಂಜಾಳ, ಅರಿತೋಡು ಎಲ್ಲಾ ಕಡೆಯೂ ಜೀರ್ಣೋದ್ಧಾರದ ಏರ್ಪಾಡು ಮಾಡಿರುತ್ತೀರಿ.

ತಮ್ಮ ಗುರುಗಳು ಇನ್ನಂಜೆಯಲ್ಲಿ ಸ್ಥಾಪಿಸಿದ ಶ್ರೀ ವಿಷ್ಣುಮೂರ್ತಿ ಪ್ರೌಢ ಶಾಲೆಯನ್ನು (ಈಗ ಕಿರಿಯ ವಿದ್ಯಾಲಯ) ಉನ್ನತವಾಗಿ ನಡೆಸಿಕೊಂಡು ಬಂದುಸಾವಿರಾರು ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಕಾರಣರಾಗಿದ್ದೀರಿ. ಎಲ್ಲವೂ ಭಕ್ತ ಜನರ ಸಹಕಾರದಿಂದ ತಾವು ನಡೆಸಿದ ಮಹತ್ಕಾರ್ಯಗಳಾಗಿರುತ್ತವೆ.

ಶ್ರೀ ವಾದಿರಾಜ ಗುರುರಾಜರು ಕೋಟೇಶ್ವರ ಮಾಗಣೆಯ ಬ್ರಾಹ್ಮಣರು ಯೋಗ್ಯ ಸುಜೀವಿಗಳು, ಸಜ್ಜನರು ಎಂದು ಅವರಿಗೆ ತಪ್ತ ಮುದ್ರಾಧಾರಣಾದಿಗಳನ್ನು ಮಾಡಿಸಿ ದೀಕ್ಷೆಯನ್ನಿತ್ತು ಅನುಗ್ರಹಿಸಿದ್ದು, ಅದೇ ರೀತಿ ಗುರುರಾಜರ ಪರಂಪರೆಯಿಂದ ಬಂದ ಎಲ್ಲಾ ಪಾತ್ರಃ ಸ್ಮರಣೀಯರಾದ ಗುರುಗಳೂ ಹರಸುತ್ತಾ ಬಂದಿದ್ದಾರೆ. ಈಗ ತಮ್ಮ ಕಾಲದಲ್ಲಿ ಗುರು ಶಿಷ್ಯರ ಬಾಂಧವ್ಯ ಅತ್ಯುನ್ನತ ಶಿಖರಕ್ಕೇರಿದೆ. ಎಲ್ಲಾ ರೀತಿಯಿಂದ ಮಾಗಣೆಯ ಭಕ್ತರಿಗೆ ತಂದೆ, ತಾಯಿ, ಬಂಧುಗಳಂತೆ ಇದ್ದು, ಮಾಗಣೆಯ ಎಲ್ಲಾ ದೇವಸ್ಥಾನಗಳಲ್ಲಿ ನಡೆಯುವ ಪುನಃನಿರ್ಮಾಣ, ಭಜನಾ ಕಾರ್ಯಕ್ರಮ. ಪಾಠ ಪ್ರವಚನಗಳು ನಿರಂತರ ಪೂಜೆ ಎಲ್ಲದಕ್ಕೂ ತಮ್ಮ ಅನುಗ್ರಹ, ಪ್ರೋತ್ಸಾಹಗಳು ಕಾರಣವಾಗಿರುತ್ತದೆ.

ಇದಲ್ಲದೆ ಜ್ಞಾನ ಪ್ರಸಾರ ಗ್ರಂಥ ಪ್ರಕಾಶನಾದಿ ಸತ್ಕಾರ್ಯಗಳಲ್ಲಿ ಶ್ರೀ ವಾದಿರಾಜರ ಭಕ್ತರನ್ನು ನಿಯೋಜಿಸಿ ಅದಕ್ಕೆ ಪ್ರೇರಕವಾಗಿ ಅನುಗ್ರಹಿಸುತ್ತಿರುವ ತಮ್ಮ ೭೦ನೇ ವರ್ಧಂತೀ ಆಶ್ರಮ ಸ್ವೀಕಾರದ ಸುವರ್ಣ ಮಹೋತ್ಸವ ಶುಭ ಸಮಾರಂಭ ಒದಗಿದುದು ಕೋಟೇಶ್ವರ ಮಾಗಣೆಯ ಶಿಷ್ಯರಾದ ನಮ್ಮ ಬಹುಜನ್ಮದ ಸುಕೃತ ಫಲವೂ, ಪ್ರಾಚೀನ ಭಾಗ್ಯವೂ ಆಗಿದೆ. ಅನತಿ ಕಾಲದಲ್ಲೇ ಉಡುಪಿ ಶ್ರೀ ಕೃಷ್ಣದೇವರ ೪ನೇ ಪರ್ಯಾಯ ಪೂಜೆಯ ಸರ್ವಜ್ಞ ಪೀಠಾರೋಹಣ ಮಾಡಲಿರುವ ತಮ್ಮ ವಜ್ರ ವಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವಗಳನ್ನೂ ಆಚರಿಸುವ ಶುಭ-ಸದವಕಾಶವನ್ನು ಸಾತ್ವಿಕ ಸೇವೆ ಸಲ್ಲಿಸುವ ಸೌಭಾಗ್ಯವನ್ನೂ ಕೋಟೇಶ್ವರದ ಕ್ಷೇತ್ರಾಧಿಪತಿ "ಶ್ರೀ ಕೋಟೀಲಿಂಗೇಶ್ವರಾಂತರ್ಗತ ಸಮೀರ ಗುರುರಾಜ ವಂದಿತ ಶ್ರೀ ಹಯವದನಾತ್ಮಕ ಶ್ರೀ ಲಕ್ಷ್ಮೀನರಸಿಂಹ ದೇವರಲ್ಲಿ ಪ್ರಾರ್ಥಿಸುತ್ತೇವೆ."

ಕೋಟೇಶ್ವರ<br>ದಿನಾಂಕ : ೧೩-೧-೧೯೯೩<br>ಬುಧವಾರ

ಇತಿ ಶ್ರೀಪಾದ ಪದ್ಮ ಸೇವಾಕಾಂಕ್ಷಿ<br>**ಕೋಟೇಶ್ವರ ಮಾಗಣೆಯ ಶಿಷ್ಯ ವೃಂದ**<br>(ಶ್ರೀ ಲಾತವ್ಯಾತ್ಮಕ ವಾದಿರಾಜ ಗುರು ಸೇವಾ ಸಮಿತಿ)

## ಶ್ರೀ ವಿಶ್ವೋತ್ತಮತೀರ್ಥರ ನಾಲ್ಕನೆಯ ಪರ್ಯಾಯಕ್ಕೆ ಸಂಬಂಧಿಸಿದ ಒಂದು ವರದಿ

ಪರ್ಯಾಯ ದಿಗ್ವಿಜಯಾರ್ಥವಾಗಿ ವಿಶ್ವೋತ್ತಮರು ೧೧-೧೧-೯೫ ಶನಿವಾರದಂದು ಬೆಂಗಳೂರಿಗೆ ಆಗಮಿಸಿದಾಗ ಸಾಯಂಕಾಲ ೪-೩೦ಕ್ಕೆ ಕೃಷ್ಣ ವಾದಿರಾಜ ಮಂದಿರದಿಂದ, ವೈಭವದಿಂದ ಮೆರವಣಿಗೆಯಲ್ಲಿ ಎನ್. ಆರ್. ಕಾಲೋನಿಯಲ್ಲಿರುವ ವಾದಿರಾಜ ಕಲ್ಯಾಣಮಂಟಪಕ್ಕೆ ಕರೆದೊಯ್ಯಲಾಯಿತು. ಅಲ್ಲಿ ಶ್ರೀ ಹಯವದನ ಪುರಾಣಿಕರಿಂದ ಸ್ವಾಗತ ಭಾಷಣವಾಯಿತು. ಮಾಗಣೆಯ ಬಂಧುಗಳು ಬಹು ಸಂಖ್ಯೆಯಲ್ಲಿ ಭಾಗವಹಿಸಿದ್ದರು.

೧೨-೧೧-೧೯೯೫ನೇ ರವಿವಾರ ದಿನ ೩ ಘಂಟೆಗೆ ಪೂರ್ಣ ಪ್ರಜ್ಞ ವಿದ್ಯಾಪೀಠದಲ್ಲಿ ಸೋದೆ ಸ್ವಾಮಿಗಳ ಸ್ವಾಗತ ಕಾರ್ಯಕ್ರಮವಿತ್ತು. ಪಂಡಿತರಾದ ಶ್ರೀ ಕೆ.ಟಿ. ಪಾಂಡುರಂಗಿಯವರು

ಹಾಗೂ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರು ಸೋದೆ ಶ್ರೀಪಾದಂಗಳ ಗುಣಗಾನ ಮಾಡಿದರು. ಪೂರ್ಣಪ್ರಜ್ಞವಿದ್ಯಾಪೀಠದ ವತಿಯಿಂದ ಹತ್ತುಸಾವಿರ ರೂಪಾಯಿಗಳನ್ನು ಸೋದೆ ಶ್ರೀಗಳವರಿಗೆ ಸಮರ್ಪಿಸಿದರು. ಸೋದೆ ಶ್ರೀಪಾದಂಗಳವರು ಆ ಕ್ಷಣವೇ ಆ ಹಣವನ್ನು ವಿದ್ಯಾಪೀಠಕ್ಕೆ ಸಮರ್ಪಿಸಿದರು

೧೧-೧೧-೧೯೯೫ ರಿಂದ ೧೪-೧೧-೧೯೯೫ ರವರೆಗೆ ೪ ದಿನಗಳ ಕಾಲ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ದಿಗ್ವಿಜಯ ಅಂಗವಾಗಿ ನೆಟ್‌ಕಲ್ಲಪ್ಪ ಸರ್ಕಲ್‌ನಲ್ಲಿರುವ ವಾದಿರಾಜ ಕಲ್ಯಾಣ ಮಂಟಪದಲ್ಲಿ ವಾಸ್ತವ್ಯಮಾಡಿ ಪ್ರತಿದಿನ ಪಟ್ಟದ ದೇವರ ಭೂತರಾಜರ ಪೂಜೆಮಾಡಿ ತೀರ್ಥಪ್ರಸಾದವನ್ನು ಶಿಷ್ಯರಿಗೆ ಕರುಣಿಸಿದರು ಕೆಲವು ಪಂಡಿತರಿಂದ ಉಪಾನ್ಯಾಸ, ಭಜನೆಗಳು ನಡೆದವು. ಶಿಷ್ಯರು ಶ್ರೀ ಪಾದಂಗಳವರಿಗೆ ಭಿಕ್ಷೆ, ಪಾದಪೂಜೆ ಮಾಡಿ ಪರ್ಯಾಯ ಅಂಗವಾಗಿ ಕಾಣಿಕೆ ಅರ್ಪಿಸಿ ಧನ್ಯತಾಭಾವ ಹೊಂದಿದರು.

ಕೊನೆಯ ದಿನದ ಕಾರ್ಯಕ್ರಮಕ್ಕೆ ಶ್ರೀ ಪೇಜಾವರ ಶ್ರೀಪಾದಂಗಳವರು ಆಗಮಿಸಿ ಅನುಗ್ರಹ ವಚನ ನೀಡಿದರು. ವಿದ್ವಾನ್ ಶ್ರೀ ಪುಷ್ಕರ ಪ್ರಸಾದರಿಂದ ಉಪನ್ಯಾಸ ನಡೆಯಿತು. ಸೋದೆ ಶ್ರೀ ಪಾದಂಗಳವರು ಮಾತನಾಡಿ ತಮ್ಮ ಪರ್ಯಾಯ ಅವಧಿಯಲ್ಲಿ ಉಡುಪಿಗೆ ಬರುವಂತೆ ಆಹ್ವಾನಿಸಿದರು ಶ್ರೀ ಹುಸೇನ್ ಸಾಬರಿಂದ ದಾಸರ ಕೀರ್ತನೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

**ನಿತ್ಯ ಬ್ರಹ್ಮೋತ್ಸವದ ಸಮಿತಿ ರಚನೆ :**

ಶ್ರೀ ಹರಿಯು ಹೇಗೆ ಅಲಂಕಾರ ಪ್ರಿಯನೋ ಹಾಗೆಯೇ ಉತ್ಸವ ಪ್ರಿಯನೂಕೂಡ. ಶ್ರೀ ವಾದಿರಾಜ ಗುರುವರೇಣ್ಯರ ಜನ್ಮಭೂಮಿ ಪರಿಸರದ ಕೋಟೇಶ್ವರ ಮಾಗಣಿಯ ಭಕ್ತವೃಂದದವರು ಶ್ರೀ ಗುರುರಾಜರಿಂದ ಉದ್ಧೃತರಾದವರು ಅವರು ಭಾವೀ ಸಮೀರ ವಾದಿರಾಜ ಸೇವಾ ಸಮಿತಿಯನ್ನು ರಚಿಸಿಕೊಂಡು ಮಾಗಣೆಯ ಸರ್ವರೂ ಶ್ರೀಕೃಷ್ಣ ಪರಮಾತ್ಮನಿಗೆ ಪ್ರಿಯವಾದ ನಿತ್ಯ ಬ್ರಹ್ಮೋತ್ಸವ ನಡೆಸಿ ಅವನ ಕೃಪೆಗೆ ಪಾತ್ರರಾಗಲು, ಭಾವಿ ಸಮೀರ ವಾದಿರಾಜ ಸೇವಾ ಸಮಿತಿಯನ್ನು ರಚಿಸಿಕೊಂಡು ಮಾಗಣೆಯವರು ಭಾಗವಹಿಸುವ ಅವಕಾಶ ಕಲ್ಪಿಸುವ ಒಂದು ಮಹಾನ್ ಯೋಜನೆಯನ್ನು ೧೯೮೮ರಲ್ಲಿ ನಿಯೋಜಿಸಿಕೊಂಡರು. ಈ ಸಮಿತಿಯ ಗೌರವಾಧ್ಯಕ್ಷರಾಗಿ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು, ಕಾರ್ಯಾಧ್ಯಕ್ಷರಾಗಿ ಶ್ರೀಯುತ ಕೆ. ರಾಮಚಂದ್ರರಾಯರು ಚಿತ್ರದುರ್ಗ, ಉಪಾಧ್ಯಕ್ಷರಾಗಿ ಹೆಚ್. ಸುಬ್ರಾವ, ಬೆಂಗಳೂರು, ಖಜಾಂಚಿಯಾಗಿ ಕೆ. ಶ್ರೀಧರ ಹತ್ವಾರ, ಬೇಲೂರು ಇವರುಗಳು ಸದಸ್ಯರಾಗಿದ್ದು ಹೆಚ್. ಗೌತಮ ಬೆಂಗಳೂರು ಆಡಿಟರ್‌ರಗಿ ನೇಮಕಗೊಂಡರು ಶ್ರೀ ಸಾಮಾನ್ಯನಿಗೂ ಈ ಸೇವೆಯ ಭಾಗ್ಯ ದೊರಕುವಂತೆ ಮಾಡುವುದರ ಉದ್ದೇಶದಿಂದ ಪಿಗ್ಮಿ ಯೋಜನೆ ಹಾಕಿ ದೇಶದ ಎಲ್ಲಾ ಕಡೆ ಯಲ್ಲಿರುವ ಕೋಟೇಶ್ವರ ಮಾಗಣೆಯ ಭಕ್ತವೃಂದವನ್ನು ಸಂಪರ್ಕಿಸಿ ಬ್ರಹ್ಮೋತ್ಸವ ಸದಸ್ಯರನ್ನಾಗಿ ಮಾಡಿ ತಮ್ಮನ್ನು ಯೋಜನೆ ಯಶಸ್ವಿಗಾಗಿ ತೊಡಗಿಸಿಕೊಂಡು ಶ್ರೀಕೃಷ್ಣ, ಮುಖ್ಯಪ್ರಾಣರ ಹಾಗೂ ವಾದಿರಾಜರ ಕೃಪಾಶೀರ್ವಾದದಿಂದ ಈ ಕಾರ್ಯಕ್ರಮ ಪ್ರಾರಂಭಿಸಲು ಸಾಧ್ಯವಾಯಿತು.

ತರಂಗ ವಾರಪತ್ರಿಕೆಯಲ್ಲಿ ೨೧ ಜನವರಿ ೧೯೯೬ರ ಸಂಚಿಕೆಯಲ್ಲಿ ಪ್ರಕಟವಾದ ಸಂದರ್ಶನ

ಸಂದರ್ಶನ : ಬಿ. ಗಣಪತಿ

## "ದೇವರ ಹೆಸರಿನಲ್ಲಿ ರಕ್ತಪಾತ ಆಗಬೇಕೆಂದು ಯಾವ ಧರ್ಮವೂ ಹೇಳಿಲ್ಲ"

ಶ್ರೀ ವಿಶ್ವೋತ್ತಮತೀರ್ಥರು ವಿದ್ಯೆ, ವಿನಯ, ಜ್ಞಾನ ಮತ್ತು ಸಾತ್ತ್ವಿಕ ಪರಂಪರೆಯ ಉಜ್ವಲ ಪ್ರತೀಕ. ಸಾಮಾಜಿಕ, ರಾಜಕೀಯ ಸೆಳೆತಗಳಿಂದ ಗಾವುದ ದೂರ ನಿಂತಿರುವ ಇವರು, ಅನುಗಾಲವೂ ಆಧ್ಯಾತ್ಮಿಕ ಚಿಂತನೆ, ಅಧ್ಯಯನದಲ್ಲಿಯೇ ತೊಡಗಿರುವವರು. ಆಧುನಿಕ ಬದುಕಿನಿಂದ ಭಾಗಶಃ ಪ್ರತ್ಯೇಕವಾಗಿರುವ ಇವರು, ಸ್ವಾಮೀಜಿಗಳ ಮೂಲ ಧ್ಯೇಯ, ಗುರಿ, ಗೌರವಗಳನ್ನು ಮೌಲ್ಯಗಳನ್ನಾಗಿ ಸ್ವೀಕರಿಸಿ ಕೃಷ್ಣನಲ್ಲಿ, ವಾದಿರಾಜರಲ್ಲಿ ಮತ್ತು ಭೂತರಾಜರಲ್ಲಿ ಸರ್ವಸ್ವವನ್ನೂ ಕಂಡುಕೊಂಡವರು. ಅಪಾರ ಭಕ್ತಿ ಬಂಧುಗಳನ್ನು ಹೊಂದಿರುವ ಸ್ವಾಮೀಜಿಗಳು ಜೀವಂತ ದಂತಕಥೆಯಾಗಿ ಹಲವಾರು ವಿಸ್ಮಯಕಾರಕ ಕಥಾನಕಗಳಿಗೆ ಕಾರಣವಾಗುವಷ್ಟು ಆಧ್ಯಾತ್ಮಿಕ ಸಾಧನೆ ಮಾಡಿದವರು. ೬೦ ವಸಂತಗಳನ್ನು ಪೂರೈಸಿದ ಶ್ರೀ ವಿಶ್ವೋತ್ತಮತೀರ್ಥರು, ಪರ್ಯಾಯವನ್ನು ಆಡಂಬರದ ಪ್ರದರ್ಶನವನ್ನಾಗಿ ಮಾಡುವ ತವಕದಲ್ಲಿಲ್ಲ. ಅರ್ಥಪೂರ್ಣವಾದ ಕೆಲಸಗಳನ್ನು ತಜ್ಞರ ಒಂದು ಸಮಿತಿ ರಚಿಸಿ ಅವರ ಸಲಹೆಯ ಮೇರೆಗೆ ಮಾಡುವ ಉದ್ದೇಶ ಇಟ್ಟುಕೊಂಡಿದ್ದಾರೆ.

ಪರ್ಯಾಯದ ಪೂರ್ವಭಾವಿಯಾಗಿ 'ತರಂಗ' ಸ್ವಾಮೀಜಿಯವರ ವಿಶೇಷ ಸಂದರ್ಶನ ಮಾಡಿದೆ. ನಮ್ಮ ಮುಕ್ತ ಪ್ರಶ್ನೆಗಳಿಗೆ ನಿಸ್ಸಂಕೋಚದಿಂದ, ಅರ್ಥಗರ್ಭಿತವಾಗಿ ಉತ್ತರಿಸಿದ ಶ್ರೀ ವಿಶ್ವೋತ್ತಮತೀರ್ಥರು, ಹಲವು ದಾಖಲಾರ್ಹ ವಿಚಾರಗಳ ಕುರಿತು ಚರ್ಚಿಸಿದ್ದಾರೆ. ಕೆಲವು ಮಹತ್ತ್ವದ ಪ್ರಶ್ನೆಗಳನ್ನು ಧಾರ್ಮಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಎತ್ತಿದ್ದಾರೆ. ಸದಾ ಹಸನ್ಮುಖಿಯಾಗಿರುವ ಇವರೊಂದಿಗೆ ಸಂವಾದಿಸುವುದೇ ಒಂದು ಸುಖಾನುಭವ. ಮುಗ್ಧತೆ, ನಿತ್ಯವೂ ಕಲಿಯುವುದಿದೆ ಅನ್ನುವ ನಿರಾಡಂಬರ, ನಿರಾಭರಣಭಾವದ ವಿಶ್ವೋತ್ತಮತೀರ್ಥ ಸ್ವಾಮೀಜಿಗಳನ್ನು ಕಂಡು ಪುಳಕಗೊಳ್ಳದವರೇ ವಿರಳ.

**ಸಂದರ್ಶನ :**

**ಇಂದು ಸಾಧುಸಂತರು, ಸ್ವಾಮೀಜಿಗಳು ರಾಜಕೀಯ ಒಲವು, ನಿಲುವು ತೆಗೆದುಕೊಳ್ಳುತ್ತಿರುವಾಗ ನೀವು ಮಠಕ್ಕೇ ಅಂಟಿಕೊಂಡ ಉದ್ದೇಶವೇನು ?**

ಪ್ರಪಂಚದಲ್ಲಿ ಎಲ್ಲಾ ಧರ್ಮಶಾಸ್ತ್ರಗಳ ಉದ್ದೇಶಿತ ಗುರಿ ಒಂದೇ–ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿ. ಜ್ಞಾನಿಗಳಾದವರಿಗೆ ಮೋಕ್ಷಪ್ರಾಪ್ತಿ. ಅಂದರೆ ಪರಮಾತ್ಮನ ಸಾನ್ನಿಧ್ಯವನ್ನು ಹೊಂದುವುದೇ ಪರಮ ಪುರುಷಾರ್ಥವೆಂದು ತಿಳಿಯುತ್ತಾರೆ. ಸಂಸಾರದಲ್ಲಿ ಲಭ್ಯವಾಗುವ ಎಲ್ಲಾ ಸುಖವೂ ಅವರಿಗೆ ಅತ್ಯಂತ ಗೌಣ. ಈ ಜ್ಞಾನಿಗಳ ಪೈಕಿ ಕೆಲವರು ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸವನ್ನು ಸ್ವೀಕರಿಸುತ್ತಾರೆ. ಸಂಸಾರದಲ್ಲಿದ್ದರೆ ರಾಗದ್ವೇಷಾದಿಗಳ ಜಾಲದಲ್ಲಿ ಸಿಲುಕಿ, ತಮ್ಮ ಆಧ್ಯಾತ್ಮಿಕ ಸಾಧನೆಯ ತೀವ್ರತೆಯು ಕುಂಠಿತವಾಗಬಹುದೆಂಬ ಶಂಕೆಯಿಂದ, ಸನ್ಯಾಸ ಸ್ವೀಕಾರ ಮಾಡಿ ಆಧ್ಯಾತ್ಮಿಕ ಮಾರ್ಗದಲ್ಲಿಯೇ ತೀವ್ರಗತಿಯಿಂದ ಅಡೆತಡೆಯಿಲ್ಲದೆ ಮುಂದುವರಿಯಲು ಪ್ರಯತ್ನಿಸುತ್ತಾರೆ.

ಇನ್ನು ಕೆಲವು ಸಾಧುಸಂತರು, ಸನ್ಯಾಸಿಗಳು ತಮ್ಮ ಮೂಲಮಾರ್ಗವನ್ನು ಬಿಡದೆ, ಪ್ರವೃತ್ತಿ ಮಾರ್ಗಕ್ಕೆ ಪ್ರವೇಶಿಸಿ ಲೋಕೋಪಕಾರಕ ಕಾರ್ಯಗಳನ್ನು ಮಾಡಲು ತಮ್ಮದೇ ಆದ ಕಾರಣಗಳಿಂದಾಗಿ ಸಂಕಲ್ಪಿಸುತ್ತಾರೆ.

ಪ್ರವೃತ್ತಿ ಮಾರ್ಗಕ್ಕೆ ಪ್ರವೇಶಿಸಿದಾಗ ಎದುರಾಗುವ ರಾಗದ್ವೇಷಾದಿಗಳನ್ನು ಎದುರಿಸಿ ಅವನ್ನು ಮೆಟ್ಟಿನಿಲ್ಲಬೇಕಾಗಬಹುದು. ಅದಕ್ಕೆ ಸಾಕಷ್ಟು ಮನೋನಿಗ್ರಹ ಮತ್ತು ದೈವ ಸಹಾಯ ಬೇಕು. ಹಾಗಿದ್ದಲ್ಲಿ ಅವರು ಸಾಧನೆಯಲ್ಲಿ ಯಶಸ್ವಿಯಾಗಬಹುದು. ಇಲ್ಲದಿದ್ದಲ್ಲಿ ಸನ್ಯಾಸದ ಮೂಲ ಉದ್ದೇಶದಿಂದಲೇ ಅವರು ವಂಚಿತರಾಗಬಹುದು.

ಆದ್ದರಿಂದ ಮೇಲೆ ಹೇಳಿದ ಎರಡು ಪಥಗಳಲ್ಲಿ ಆಧ್ಯಾತ್ಮಿಕ ಸಾಧನೆಯಲ್ಲಿ ಎಷ್ಟರ ಮಟ್ಟಿಗೆ ಯಶಸ್ಸು ಲಭಿಸಿದೆ ಎನ್ನುವುದು ಮುಖ್ಯವೇ ಹೊರತು ಇಂತಹ ಪಥವೇ ಉತ್ಕೃಷ್ಟ ಎಂದು ಹೇಳಲು ಆಗುವುದಿಲ್ಲ.

ಪ್ರವೃತ್ತಿ ಮಾರ್ಗದಲ್ಲಿಯೇ ಇದ್ದುಕೊಂಡು ತಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಯಶಸ್ವಿಯಾದ ಮಹಾಪುರುಷರು ಹಿಂದೆಯೂ ಇದ್ದರು. ಈಗಲೂ ಬಹುಸಂಖ್ಯೆಯಲ್ಲಿ ಇದ್ದಾರೆ. ಪರಿಸ್ಥಿತಿ ಹೀಗಿರುವಾಗ ಸಾಧುಸಂತರೆಲ್ಲಾ ರಾಜಕೀಯವನ್ನು ಪ್ರವೇಶಿಸಬೇಕೆ ? ಅದರ ಅವಶ್ಯಕತೆ ಇದೆಯೇ ?

**ಸ್ವಾಮೀಜಿಗಳ ನಿಜವಾದ ಕರ್ತವ್ಯ, ಗುರಿ, ಧ್ಯೇಯಗಳೇನು ?**

ಯತಿಗಳ ಮುಖ್ಯ ಧ್ಯೇಯವೇನೆಂದರೆ ಸಂಸಾರದಿಂದ ನಿವೃತ್ತಿ ಪಡೆದು ಮೋಕ್ಷದಲ್ಲಿ ಪರಮಾತ್ಮನ ಪಾದಸನ್ನಿಧಿಯನ್ನು ಹೊಂದುವುದು. ಮೋಕ್ಷದಲ್ಲಿ ಯಾವ ಪರಿಯ ದುಃಖವೂ ಇರುವುದಿಲ್ಲ. ತಮ್ಮ ಸ್ವರೂಪಯೋಗ್ಯತೆಯಂತೆ ಸುಖವನ್ನು ಅನುಭವಿಸುತ್ತಾ ನಿರಂತರ ಪರಮಾತ್ಮನ ಚಿಂತನೆಯಲ್ಲಿ ಅವರು ಮಗ್ನರಾಗಿರುತ್ತಾರೆ. ಮೋಕ್ಷವನ್ನು ಬಯಸುವ ಜ್ಞಾನಿಗಳು ಯಥಾರ್ಥವಾದ ಶಾಸ್ತ್ರಜ್ಞಾನವನ್ನು ಗುರುಗಳಿಂದ ಪಡೆಯಬೇಕು. ಸಂಸಾರವು ನಶ್ವರವೆಂದು ತಿಳಿದು ಅದರಲ್ಲಿ ಆಸಕ್ತಿಯನ್ನು ಬಿಟ್ಟು, ವೈರಾಗ್ಯಭಾವವನ್ನು ತಾಳಬೇಕು. ಯಥಾರ್ಥ ಜ್ಞಾನವನ್ನು ಪಡೆದು ಅದರಿಂದ ಉಂಟಾಗುವ ಶುದ್ಧ ಭಕ್ತಿಯನ್ನು ದೇವರಲ್ಲಿ ಮಾಡುತ್ತಾ ತಮ್ಮ ಭಕ್ತಿಗೆ ಸಾಧ್ಯವಾದಷ್ಟು ವಿಚ್ಛಿತ್ತಿ ಬಾರದಂತೆ ನೋಡಿಕೊಳ್ಳಬೇಕು. ಲೋಕ ಕಲ್ಯಾಣಕ್ಕಾಗಿ ಸತತ ದೇವರಲ್ಲಿ ಪ್ರಾರ್ಥಿಸಬೇಕು. ಪರಮಾತ್ಮನ ಪ್ರೀತಿಗಾಗಿಯೇ ತಮ್ಮ ಜೀವನವನ್ನು ಮೀಸಲಿರಿಸಬೇಕು. ಯಾವ ಪ್ರಾಣಿಯಲ್ಲಿಯೂ ಅನಗತ್ಯ ಪ್ರೀತಿದ್ವೇಷಾದಿಗಳನ್ನು ಮಾಡಬಾರದು. ಅಧ್ಯಯನವು ತಪಸ್ಸಿನ ಒಂದು ಅಂಗವಾಗಿರುವುದರಿಂದ ಯೋಗ್ಯರಲ್ಲಿ ಬ್ರಹ್ಮಜ್ಞಾನೋಪದೇಶ ಮಾಡಬೇಕು. ಗೃಹಸ್ಥ ಶಿಷ್ಯರು ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ನಿರತರಾಗಿದ್ದು ಲೋಕೋಪಕಾರಕ ಕಾರ್ಯಗಳನ್ನು ನಡೆಸುವಂತೆ ಅವರನ್ನು ಪ್ರೋತ್ಸಾಹಿಸಬಹುದು.

**ಕೃಷ್ಣಮಠ 'ಆಧುನಿಕ ಕಿಷ್ಕಿಂಧೆ' ಆಗಿದೆ. ನಿಮ್ಮ ಪರ್ಯಾಯದಲ್ಲಿ ಇದರ ಪರಿಹಾರ ಅಥವಾ ಪರಿಷ್ಕರಣೆಗೆ ಏನು ಕ್ರಮ ತೆಗೆದುಕೊಳ್ಳುವವರಿದ್ದೀರಿ ?**

ನೀವು ಹೇಳಿರುವಂತೆ 'ಆಧುನಿಕ ಕಿಷ್ಕಿಂಧೆ'ಯಂತೂ ನಿರ್ಮಾಣ ಆಗಿಬಿಟ್ಟಿದೆ. ಇದಕ್ಕೆ ಕಾರಣಗಳು ಏನಿರಬಹುದೆಂದು ಮೊದಲು ವಿವೇಚಿಸೋಣ.

ಹಿಂದಿನ ಕಾಲದಲ್ಲಿ ಇಡೀ ದಕ್ಷಿಣ ಕನ್ನಡ ಜಿಲ್ಲೆಯೇ ದಟ್ಟವಾದ ಕಾಡುಗಳಿಂದ ತುಂಬಿದ್ದು, ದುರ್ಗಮವಾದ ಪಶ್ಚಿಮ ಘಟ್ಟಗಳ ಶ್ರೇಣಿಯಿಂದಾಗಿ ಭಾರತದ ಇತರ ಪ್ರದೇಶಗಳಿಂದ ಸಂಪೂರ್ಣವಾಗಿ ಪ್ರತ್ಯೇಕಿಸಲ್ಪಟ್ಟಿತ್ತು. ಸಂಪರ್ಕ ಸಾಧನಗಳಂತೂ ತೀರಾ ವಿರಳ ಮತ್ತು ಅತೃಪ್ತಿಕರವಾಗಿದ್ದವು. ಉದ್ಯಮಗಳಂತೂ ಏನೂ ಇರಲಿಲ್ಲ. ಪ್ರಕೃತಿಯು ತನ್ನ ವರವನ್ನು ಅಗಾಧವಾಗಿ ಈ ಜಿಲ್ಲೆಗೆ ಕೊಟ್ಟಿದ್ದರೂ, ಸ್ಥಳೀಯ ಜನರು ಕಡುಬಡತನದಲ್ಲಿ ಮುಳುಗಿದರು. ಯಾತ್ರೆಗೆಂದು ಬರುವವರು ಬಹಳ ಕಷ್ಟಗಳನ್ನು ಸಹಿಸಿ ಇಲ್ಲಿಗೆ ಬರಬೇಕಾಗಿತ್ತು. ಆದ್ದರಿಂದ ಆಗ ಬಂದು ಹೋಗುತ್ತಿದ್ದ ಯಾತ್ರಿಕರ ಸಂಖ್ಯೆ ಬೆರಳೆಣಿಸುವಷ್ಟು ಮಾತ್ರ ಇತ್ತು. ಆಗಿನ ಶ್ರೀಕೃಷ್ಣ ಮಠದ ಆಡಳಿತವರ್ಗದವರು ತಮ್ಮ ಅವಶ್ಯಕತೆಗಳಿಗೆ ತಕ್ಕಷ್ಟು ಮಾತ್ರ ಕಟ್ಟಡ ನಿರ್ಮಾಣ ಮಾಡಿಕೊಂಡು ಉಳಿದ ಸುತ್ತಮುತ್ತಲಿನ ಭೂಮಿಯನ್ನು ಗೇಣಿಗೆ ಕೊಟ್ಟಿದ್ದರು.

ಸ್ವಾತಂತ್ರ್ಯಾನಂತರದಲ್ಲಿ ಈ ಚಿತ್ರಣವು ಸಂಪೂರ್ಣ ಬದಲಾಯಿತು. ಕಾಡುಗಳು ಬಹಳಷ್ಟು ನಾಶವಾದವು. ಸಂಪರ್ಕಸಾಧನಗಳು ತೀವ್ರಗತಿಯಲ್ಲಿ ಸಂಖ್ಯೆಯಂತೂ ಅಗಾಧವಾಗಿ ಹೆಚ್ಚಿತು. ಅದಕ್ಕೆ ತಕ್ಕಂತೆ ಶ್ರೀಕೃಷ್ಣಮಠದವರು ಎಲ್ಲಾ ರೀತಿಯ ಸೌಕರ್ಯಗಳನ್ನೂ ಹೆಚ್ಚಿಸಲು ಕಟ್ಟಡಗಳನ್ನು ಹೆಚ್ಚುಹೆಚ್ಚಾಗಿ ಕಟ್ಟಬೇಕಾಯಿತು. ಆದರೆ ಈ ಹೊಸ ನಿರ್ಮಾಣಗಳಿಗೆಲ್ಲಾ ಜಾಗ ಎಲ್ಲಿಂದ ಬರಬೇಕು ? ಸುತ್ತಮುತ್ತ ಗೇಣಿಗೆ ಕೊಟ್ಟಿದ್ದ ವಿಶಾಲ ಪ್ರದೇಶಗಳೆಲ್ಲಾ ಸರಕಾರದ ಭೂಸುಧಾರಣಾ ಕಾಯಿದೆಯಂತೆ ಆಯಾ ಒಕ್ಕಲುಗಳ ವಶವಾಗಿ ಮಠಗಳ ಕೈತಪ್ಪಿವೆ. ಆದ್ದರಿಂದ ಅವಶ್ಯಕವೆನಿಸಿದ ಕಟ್ಟಬೇಕಾಗಿ ಬಂತು. ನೀವೆಂದಂತೆ 'ಕಿಷ್ಕಿಂಧಾ ಪಟ್ಟಣ' ನಿರ್ಮಾಣ ಆಯಿತು.,

ಈ ಸಮಸ್ಯೆಗೆ ಏನು ಪರಿಹಾರ ಎಂದು ನೀವು ಕೇಳಿದ್ದೀರಿ. ಆಸ್ತಿ–ಪಾಸ್ತಿಗಳನ್ನು ಮೊದಲೇ ಕಳೆದುಕೊಂಡು ದುರ್ಬಲವಾಗಿರುವ ಮಠಗಳಿಂದ ಈ ಸಮಸ್ಯೆ ಪರಿಹಾರ ಸಾಧ್ಯವೆಂದು ನೀವು ಭಾವಿಸಿದ್ದೀರಾ ? ಸುತ್ತಮುತ್ತಲಿರುವ ಭೂಮಿಯನ್ನು ವಶಪಡಿಸಿಕೊಂಡು ಅವನ್ನು ಸರಕಾರದವರು ಶ್ರೀಕೃಷ್ಣಮಠಕ್ಕೆ ಒಕ್ಕಲುಗಳಿಂದ ಮರಳಿಸುವ ಸಂಭಾವ್ಯತೆ ಇದೆಯೆಂದು ನೀವು ಭಾವಿಸುವಿರಾ ? ಸರಕಾರದವರು ಆ ಕೆಲಸ ಮಾಡಿದಲ್ಲಿ 'ಕಿಷ್ಕಿಂಧಾ ಪಟ್ಟಣ', 'ಅಲಕಾ ಪಟ್ಟಣ'ವಾಗುವ ಸಾಧ್ಯತೆಯ ಕನಸು ನನಸಾಗಬಹುದು.

**ನಿಮ್ಮ ಪರ್ಯಾಯ ಅನ್ನುವುದು ಕಟ್ಟಡಗಳ ಸಂಖ್ಯೆ ಹೆಚ್ಚಿಸುವ ಕಾರ್ಯಭಾರವೋ ? ಅಥವಾ ಏನಾದರೂ ಸಾಮಾಜಿಕ ಒಳಿತಿನ ಕೆಲಸಗಳನ್ನು ಕೈಗೆತ್ತಿಕೊಳ್ಳುವ ಉದ್ದೇಶವಿದೆಯೋ ? ಅಭಿವೃದ್ಧಿ ಅಂದರೆ ಕಟ್ಟಡಗಳನ್ನು ಕಟ್ಟಿ ಬಾಡಿಗೆಗೆ ಕೊಡುವುದೆಂದು ನೀವೂ ಭಾವಿಸುತ್ತೀರಾ ?**

ಪರ್ಯಾಯ ಎನ್ನುವುದು,ಕಟ್ಟಡಗಳನ್ನು ಅನಾವಶ್ಯಕವಾಗಿ ಕಟ್ಟಿಸಿ ಭೂಭಾರ ಹೆಚ್ಚಿಸುವ ಕಾರ್ಯವಂತೂ ಖಂಡಿತ ಅಲ್ಲ. ಆದರೆ ಕಟ್ಟಡಗಳ ಆಶ್ರಯವಿಲ್ಲದೆ ಯಾವ ಕಾರ್ಯವೂ ನಡೆಯಲಾರದಲ್ಲ. ಇಡಿ ದೇಶದಲ್ಲಿಯೇ ಅಸಾಮಾನ್ಯ ಪ್ರಮಾಣದಲ್ಲಿ ನಿರಂತರ ಉತ್ಸವಗಳನ್ನು ನಡೆಸುತ್ತಾ, ಅಸಂಖ್ಯ ಜನರಿಗೆ ಅನ್ನದಾನ ಮಾಡುತ್ತಿರುವಾಗ ಪರ್ಯಾಯವನ್ನು ಯಾರು ಬೇಕಾದರೂ ತಮ್ಮ ದೃಷ್ಟಿಕೋನದಿಂದ ತುಲನೆ ಮಾಡಿ ಹೊಗಳಬಹುದು ಅಥವಾ ತೆಗಳಬಹುದು. ವಾಕ್ ಸ್ವಾತಂತ್ರ್ಯವಿರುವ ಈ ದೇಶದಲ್ಲಿ ಇದಕ್ಕೆ ಯಾರದ್ದೂ ಪ್ರತಿರೋಧವಿಲ್ಲ. ಪರ್ಯಾಯದಲ್ಲಿ ಬರುವ ಸಾವಿರಾರು ಯಾತ್ರಿಕರು ಉಚಿತ ಪ್ರಸಾದ (ಭೋಜನ) ಪಡೆಯುತ್ತಾರೆ. ಸಹಸ್ರಾರು ಸಂಖ್ಯೆಯ ವಿದ್ಯಾರ್ಥಿಗಳೂ ಉಚಿತ ಭೋಜನ ಸೌಕರ್ಯ ಪಡೆದು ವಿದ್ಯಾರ್ಜನೆ ಮಾಡಿ

ದೇಶದ ಮಾನವ ಸಂಪನ್ಮೂಲವನ್ನು ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಿಸುತ್ತಾರೆ. ಸ್ಥಳೀಯ ಆಸ್ಪತ್ರೆಗಳ ಬಡರೋಗಿಗಳಿಗೂ ಸ್ವಲ್ಪ ಮಟ್ಟಿಗೆ ಉಚಿತ ಆಹಾರ ಇಲ್ಲಿಂದ, ಪೂರೈಕೆ ಆಗುತ್ತದೆ. ವಿಶೇಷ ಪೂಜಾದಿಗಳನ್ನೂ, ಉತ್ಸವಾದಿಗಳನ್ನೂ ನೋಡಿ ದೇವರ ದರ್ಶನ ಮಾಡಿ ಧನ್ಯರಾದೆವೆಂದು ಯಾತ್ರಿಕರು ಪುಳಕಗೊಳ್ಳುತ್ತಾರೆ. ಮನಃಶಾಂತಿ ಪಡೆಯುತ್ತಾರೆ. ರಾಜಮಹಾರಾಜರುಗಳು ಈ ಪುಣ್ಯಕಾರ್ಯಕ್ಕೆ ನೆರವಾಗಲೆಂದು ನೀಡಿದ ಉಂಬಳಿಗಳನ್ನು ನಮ್ಮ ಧರ್ಮನಿರಪೇಕ್ಷ ಸರಕಾರ ಕಿತ್ತು ಹಾಕಿದರೂ – ಇಲ್ಲಿ ನಡೆಯುವ ಸತ್ ಕಾರ್ಯ ಎಂದಿನಂತೆಯೇ ನಡೆಯುತ್ತಿದೆ. ಈ ಪ್ರಶಂಸನೀಯ ಕಾರ್ಯದಲ್ಲಿ ಯಾತ್ರಿಕರಿಗಾಗಿ ಮತ್ತು ಇತರ ಉದ್ದೇಶಗಳಿಗಾಗಿ ಸೌಕರ್ಯವನ್ನು ಪೂರ್ಣ ಪ್ರಮಾಣದಲ್ಲಿ ಅಲ್ಲದಿದ್ದರೂ ಕೆಲಮಟ್ಟಿಗಾದೂ ಕಲ್ಪಿಸಲು ಕಟ್ಟಡಗಳನ್ನು ನಿರ್ಮಿಸುವುದನ್ನು ತಪ್ಪೆಂದು ಹೇಳಲಾದೀತೇ?

ಅಷ್ಟಮಠಗಳು ಪರ್ಯಾಯ ನಿಲ್ಲಿಸುವಂತೆ ಇಲ್ಲಿ ಪರ್ಯಾಯವಿಲ್ಲದಿದ್ದ ಕಾಲದಲ್ಲಿಯೂ ದೈನಂದಿನ ಖರ್ಚು – ವೆಚ್ಚಗಳು ಸಹ ತಪ್ಪಿದ್ದಲ್ಲ. ಇದ್ದ ಆಸ್ತಿಗಳೆಲ್ಲವೂ ಭೂಸುಧಾರಣೆಯ ಕಾನೂನಿನ ಅಡಿ ಪರಭಾರೆ ಆಗಿವೆ. ಮಠಗಳ ಖರ್ಚನ್ನು ಮಠಗಳೇ ಹೊರಬೇಕಲ್ಲದೆ. ಸರಕಾರವಂತೂ ಹೊರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕೆಲವು ಮಠಗಳು ಕಟ್ಟಡ ನಿರ್ಮಿಸಿ ಬಾಡಿಗೆಗೆ ಕೊಟ್ಟು ವರಮಾನ ಬರುವಂತೆ ಮಾಡಿಕೊಂಡರೆ ಅದು ತಪ್ಪಾದೀತೇ? ಈ ಮಾರ್ಗ ಕಾನೂನಿಗಾಗಲಿ. ಸಾಮಾಜಿಕ ಒಳಿತಿಗಾಗಲೀ. ಧರ್ಮಕ್ಕಾಗಲೀ ವಿರುದ್ಧವಾಗಲಾರದಲ್ಲ.

**ನಿಮ್ಮ ದೃಷ್ಟಿಯಲ್ಲಿ ಪರ್ಯಾಯದ ಸಾರ್ಥಕತೆ ಅಂದರೆ ಏನು?**

– ಲೌಕಿಕ ದೃಷ್ಟಿಯಿಂದ ಹೇಳುವುದಾದರೆ ಧಾರ್ಮಿಕ ಮೌಲ್ಯಗಳನ್ನು ಎತ್ತಿ ಹಿಡಿಯುವುದು, ಆಧ್ಯಾತ್ಮಿಕ ಭಾವನೆಗಳನ್ನು ಎತ್ತಿ ಹಿಡಿಯುವುದು, ಆಧ್ಯಾತ್ಮಿಕ ಭಾವನೆಗಳಿಗೆ ಒತ್ತುಕೊಡುವುದು. ಶಾಸ್ತ್ರಜ್ಞಾನವೇ ತಿಳಿಭಾಷೆಯಲ್ಲಿ ಪ್ರಚುರಪಡಿಸುವುದು. ಸನ್ಮಾರ್ಗದಲ್ಲಿ ನಡೆಯುವ ಪ್ರವೃತ್ತಿಯನ್ನು ಸಾರ್ವಜನಿಕರಲ್ಲಿ ಮೂಡಿಸುವುದು. ಸಮಾಜಕ್ಕೆ ಹಿತವಾದ ಕಾರ್ಯಗಳ ಪರ್ಯಾಯದ ಆಡಳಿತವೂ ಮಾಡುವುದಲ್ಲದೆ ಸಮಾನದ ಶಿಷ್ಯರ ಮೂಲಕ ಮಾಡಿಸಲು ಪ್ರೋತ್ಸಾಹ ನೀಡುವುದು. ಇಷ್ಟು ಸಾಧಿಸಿದರೆ ಪರ್ಯಾಯದ ಉದ್ದೇಶಗಳು ಎಷ್ಟೋ ಮಟ್ಟಿಗೆ ನೆರವೇರಿದಂತೆ ಆಯಿತು.

**ನಿಮ್ಮ ಹಿಂದಿನ ಮೂರು ಪರ್ಯಾಯಗಳಲ್ಲಿ ಮಾಡಿದ ಕೆಲವು ಮುಖ್ಯ ಕಾರ್ಯಗಳ ವಿವರ ಕೊಡಿ. ಅವುಗಳಿಗಿಂತ ಈ ಪರ್ಯಾಯ ಭಿನ್ನವಾಗಿರುತ್ತದೆಯೇ? ಆಗುವುದಾದರೆ ಹೇಗೆ?**

– ಇಲ್ಲಿಯವರೆಗೆ ನಡೆದ ಪರ್ಯಾಯಗಳಂತೆಯೇ ನಮ್ಮ ಹಿಂದಿನ ಮೂರು ಪರ್ಯಾಯಗಳು ನಡೆದಿವೆ. ಈಗ ಬರುವ ಪರ್ಯಾಯದಲ್ಲಿಯೂ ಕಣ್ಣಿಗೆ ಹೊಡೆದು ಕಾಣುವಂತಹ ವೈಶಿಷ್ಟ್ಯವಾಗಲೀ, ಭಿನ್ನತೆಯಾಗಲಿ ಸಂಭವಿಸುವಂತೆ ತೋರುವುದಿಲ್ಲ. ಈ ಪರ್ಯಾಯದಲ್ಲಿ ಉತ್ಪನ್ನ ವಿಶೇಷವಾಗಿ ಬಂದಲ್ಲಿ ಒಂದು ಸಮಿತಿಯನ್ನು ರಚಿಸಿ ಅದರ ಸಲಹೆಯಂತೆ ಒಳ್ಳೆಯ ಕಾರ್ಯಗಳನ್ನು ಕೈಗೆತ್ತಿಕೊಳ್ಳಬಹುದು.

**ಕೃಷ್ಣನ ಹೆಸರಿನಲ್ಲಿ ರಾಮನ ಹೆಸರಿನಲ್ಲಿ ಮನುಷ್ಯ ಮನುಷ್ಯರ ಮಧ್ಯೆ ರಕ್ತಪಾತ ಆಗುತ್ತಿದೆ. ಇದಕ್ಕೆ ಸ್ವಾಮೀಜಿಗಳು, ಮಠಗಳು ಏನೂ ಮಾಡಬೇಡವೇ?**

– ದೇವರ ಹೆಸರಿನಲ್ಲಿ ಅನಾವಶ್ಯಕ ರಕ್ತಪಾತ ಆಗಬೇಕೆಂದು ಪ್ರಪಂಚದ ಯಾವ ಧರ್ಮವೂ ಹೇಳುವುದಿಲ್ಲ ಎಂದೇ ನಾವು ನಂಬಿದ್ದೇವೆ. ರಕ್ತಪಾತ ಮಾಡುವ ಕುಹಕ ಶಕ್ತಿಗಳು ದೇಶೀಯವೇ ಆಗಿರಲಿ. ವಿದೇಶೀಯವೇ ಆಗಿರಲಿ ಏನಾದರೂ ನೆಪ ತೆಗೆದು ತಮ್ಮ ಉದ್ದೇಶ ಸಾಧಿಸಿಕೊಳ್ಳುತ್ತವೆ. ದೇವರ ಹೆಸರಿನಲ್ಲಿ ಜಗಳವೆಬ್ಬಿಸಿ ಗಲಭೆ ಮಾಡಲು ನಮ್ಮ ದೇಶದಲ್ಲಿ ಬಹಳ ಒಳ್ಳೆಯ ವಾತಾವರಣವಿದೆ. ಅದರ ದುರುಪಯೋಗವನ್ನು ಕೆಲವು ರಾಜಕೀಯ ಶಕ್ತಿಗಳು ಮಾಡಿಕೊಳ್ಳುವುದರಲ್ಲೂ ನಿಪುಣವಾಗಿವೆ. ಜನರಲ್ಲಿ ಯಾದವೀ ಕಲಹ ಎಬ್ಬಿಸಿ, ತಾವು ಸುಲಭವಾಗಿ ಪಾರಾಗುತ್ತಾರೆ. ಅಮಾಯಕ ಜನರನ್ನು ಅವರ ಸಾವು, ನೋವುಗಳಿಗೆ ಕಾರಣರಾಗುತ್ತಾರೆ. ಇಂತಹ ಕುಹಕ ಶಕ್ತಿಗಳಿಂದ ಜನರನ್ನು ವಿಮೋಚನೆ ಮಾಡುವ ಕಾರ್ಯ ಸಾಧುಸಂತರಿಂದ ಆಗಬೇಕೆಂದು ನೀವು ನಿರೀಕ್ಷಿಸುತ್ತೀರಾ? ನಾವು ಜನರನ್ನು ವಿವೇಚನೆಯಿಂದ ವರ್ತಿಸಿ, ದುಷ್ಟ ಶಕ್ತಿಗಳ ಕುಯುಕ್ತಿಗೆ ಬಲಿಯಾಗಬೇಡಿ ಎಂದು ಹೇಳಬಹುದು ಅಷ್ಟೆ. ಇನ್ನು ಏನು ತಾನೆ ಮಾಡಲು ಸಾಧ್ಯ.

**ಇಂದು ಮಠಗಳು, ಸ್ವಾಮೀಜಿಗಳು ಸಾಮಾಜಿಕ ಮೌಲ್ಯ, ಗೌರವ, ಭಕ್ತಿ ಕಳೆದುಕೊಳ್ಳುತ್ತಿವೆ ಏಕೆ ?**

–ಇದಕ್ಕೆ ಕಾರಣಗಳು ಅನೇಕ ಇವೆ. ಕೆಲವನ್ನಿಲ್ಲಿ ಉಲ್ಲೇಖಿಸುತ್ತೇವೆ.

ಪಾಶ್ಚಾತ್ಯ ನಾಗರಿಕತೆಯ ಸುಳಿಯಲ್ಲಿ ಸಿಲುಕಿದ ಯುವಕರು, ಪಾಶ್ಚಾತ್ಯರನ್ನು ಅನುಕರಿಸಲು ಸರ್ವ ಪ್ರಯತ್ನ ಮಾಡುತ್ತಾರೆ. ಅವರಿಂದ ಉತ್ತಮ ಮೌಲ್ಯಗಳನ್ನು ಸ್ವೀಕರಿಸಿ ಅವುಗಳನ್ನು ಭಾರತೀಯ ಸಂಸ್ಕೃತಿಯಲ್ಲಿ ಅಳವಡಿಸಿಕೊಳ್ಳಲು ಮರೆತು ಅಲ್ಲಿಯ ಸಂಸ್ಕೃತಿಯನ್ನೇ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾರೆ. ಇಲ್ಲಿನ ಪ್ರಾಚೀನ ಸಭ್ಯತೆಯೆಲ್ಲಾ 'ಮೂಢನಂಬಿಕೆ' ಎಂಬ ವಿಕೃತ ಅಭಿಪ್ರಾಯ ಹೊಂದಿದ್ದಾರೆ. ಆದ್ದರಿಂದ ಸಹಜವಾಗಿಯೇ ನಮ್ಮ ಪ್ರಾಚೀನ ಶಾಸ್ತ್ರ, ಮಠಗಳನ್ನು ಕೀಳಾಗಿ ಕಾಣುತ್ತಾರೆ.

ಪಾಶ್ಚಾತ್ಯ ನಾಗರಿಕತೆಯಿಂದಾಗಿ ಭೌತಿಕ ಲಾಲಸೆ ತೀವ್ರವಾಗಿದೆ. ಭೋಗ ವಸ್ತುಗಳನ್ನು ಸಂಪಾದಿಸಲು ನ್ಯಾಯಸಮ್ಮತ ಮಾರ್ಗಗಳನ್ನು ಬಿಟ್ಟು ಅನ್ಯಾಯದ ಮಾರ್ಗಗಳನ್ನು ತುಳಿಯಲು ಹಿಂದೆ ಮುಂದೆ ನೋಡದಂತಹ ಪ್ರಲೋಭನೆಗೆ ಸಿಕ್ಕಿದ್ದಾರೆ. ಮಾನವ ಜೀವನ ಅಸ್ಥಿರ, ಆದ್ದರಿಂದ ಪಾರಲೌಕಿಕ ಸಾಧನೆಯನ್ನು ತ್ವರೆಯಿಂದ ಮಾಡಿಕೊಳ್ಳಿರಿ ಎಂದು ಸಾರುವ ನಮ್ಮ ಶಾಸ್ತ್ರಗಳು ಅವರಿಗೆ ರುಚಿಸಲು ಸಾಧ್ಯವೇ?

ಕೆಲವು ಸಾಧುಸಂತರು ರಾಜಕೀಯದಲ್ಲಿ ಪ್ರವೇಶಿಸಿ, ಮನೋ ನಿಗ್ರಹ ಸಾಲದೆ ಕೈಸೋತಿದ್ದಾರೆ. ಕೆಲವರಂತೂ ಗಂಭೀರ ಆರೋಪಗಳಿಗೆ ಈಡಾಗಿದ್ದಾರೆ.

ಅಗ್ಗದ ಪ್ರಚಾರಕ್ಕಾಗಿಯೇ ಹುಟ್ಟಿಕೊಂಡ ಕೆಲವು ಮಾಧ್ಯಮಗಳು ದುರುದ್ದೇಶಗಳಿಂದ ಪ್ರೇರಿತವಾಗಿ ಧರ್ಮಸಂಸ್ಥೆಗಳ ಬಗ್ಗೆ ಸುಳ್ಳು ಸುದ್ದಿ ಹಬ್ಬಿಸಿ, ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುತ್ತಿವೆ. ಆದರೆ ಸಮತೋಲನ ವಿಮರ್ಶೆಗೆ ಹೆಸರಾದ 'ತರಂಗ'ದಂತಹ ಪ್ರಚಾರ ಮಾಧ್ಯಮ ಶ್ರಮವಹಿಸಿದಲ್ಲಿ ಜನರ ನೈತಿಕ ಪುನರುತ್ಥಾನ ಮತ್ತು ಸಚ್ಚಾರಿತ್ರ್ಯದ ಮಟ್ಟ ಕಾಯ್ದುಕೊಳ್ಳುವ ಮಹಾಕಾರ್ಯದಲ್ಲಿ ಧಾರ್ಮಿಕ ಸಂಸ್ಥೆಗಳಿಗೆ ಅತ್ಯಂತ ಸಹಕಾರಿ ಆಗಬಹುದು ಎಂಬುದರಲ್ಲಿ ನಮಗೆ ಪೂರ್ಣ ಭರವಸೆ ಇದೆ. ಹೀಗೆ ಕಾರಣಗಳು ಹಲವು.

ನಿಮ್ಮ ಮಠಕ್ಕೆ ಶಿಷ್ಯ ಸ್ವಾಮಿ ಇನ್ನೂ ಏಕೆ ಬಂದಿಲ್ಲ?

– ಪ್ರಕೃತಿ ನಿಯಮದಂತೆ ಹಳತು ಹೊಸತಕ್ಕೆ ಜಾಗ ಮಾಡಿಕೊಡಬೇಕಾದ್ದೇ ಅಲ್ಲವೆ? ನಮ್ಮ ಮಠದಲ್ಲಿಯೂ ಉತ್ತರಾಧಿಕಾರಿಗಳು ಬರಲೇಬೇಕು. ದೇವರ ಚಿತ್ತಕ್ಕೆ ಬಂದಾಗ ಅವರು ಇಲ್ಲಿಗೆ ಬಂದೇ ಬರುತ್ತಾರೆ.

**ಇದನ್ನು ತರಂಗ ವಾರಪತ್ರಿಕೆಯ ಸೌಜನ್ಯದಿಂದ ಪ್ರಕಟಿಸಲಾಗಿದೆ**

**ಪರ್ಯಾಯಕ್ಕೆ ಕೋಟೇಶ್ವರದವರಿಂದ ಹೊರೆಕಾಣಿಕೆ**

ಪರ್ಯಾಯ ಹಿಂದಿನ ದಿನ ೧೭-೧-೧೯೯೬ನೇ ಬುಧವಾರ ಏಕಾದಶಿಯಂದು ಮಧ್ಯಾಹ್ನ ಉಡುಪಿ ಪರ್ಯಾಯಕ್ಕೆ ಕೋಟೇಶ್ವರದಿಂದ ೩೦ ವ್ಯಾನು ಹಾಗೂ ೫ ಬಸ್ಸುಗಳ ತುಂಬಾ ಹೊರೆಕಾಣಿಕೆ ಉಡುಪಿಯತ್ತ ಪ್ರಯಾಣಿಸಿದವು.

## ಶ್ರೀ ವಿಶ್ವೋತ್ತಮತೀರ್ಥರ ನಾಲ್ಕನೆಯ ಪರ್ಯಾಯದ ವರದಿ

• ಮೆರವಣಿಗೆಗೆ ಮುನ್ನ ಸ್ವಾಮಿಜಿಯವರು ಉಡುಪಿಯಿಂದ ಹತ್ತು ಕಿ.ಮೀ. ದೂರದಲ್ಲಿರುವ ಕಾಪು ಸಮೀಪದ ಪವಿತ್ರ ದಂಡತೀರ್ಥದಲ್ಲಿ ಸ್ನಾನಾದಿಗಳನ್ನು ಮುಗಿಸಿ ಉಡುಪಿಗಾಗಮಿಸಿದರು. ಪರ್ಯಾಯೋತ್ಸವದ ದಿನವಾದ ಜನವರಿ ೧೮ ಗುರುವಾರದಂದು ದ್ವಾದಶಿ ತಿಥಿ ಇದ್ದುದರಿಂದ ಈ ಸಂಬಂಧ ಉಡುಪಿಯ ಶ್ರೀಕೃಷ್ಣಮಠದಲ್ಲಿ ಬೆಳಗಿನ ಪೂಜೆಗಳು ಬೇಗನೆ ನಡೆಯಬೇಕಿದ್ದುದರಿಂದ ಈ ಬಾರಿ ಮೆರವಣಿಗೆಯನ್ನು ನಸುಕಿನಲ್ಲಿ ಎರಡು ಗಂಟೆಯ ಹೊತ್ತಿಗೆ ಆರಂಭಿಸಲು ನಿರ್ಧರಿಸಲಾಗಿತ್ತು. ೨-೧೫ರ ಹೊತ್ತಿಗೆ ಮೆವಣಿಗೆಯು ಜೋಡುಕಟ್ಟೆಯಿಂದ ಆರಂಭಗೊಂಡಿತು. ಭಕ್ತಾಭಿಮಾನಿಗಳು ಬುಧವಾರ ರಾತ್ರಿಯಿಂದಲೇ ಆಸಕ್ತಿ ಕುತೂಹಲದಿಂದ ಕಾದಿದ್ದರು.

ಉಡುಪಿ ಸ್ವಾಗತಮಂಟಪವನ್ನು ಪರ್ಯಾಯೋತ್ಸದ ಈ ಸಂದರ್ಭದಲ್ಲಿ ಅತ್ಯಾಕರ್ಷವಾಗಿ ವಿದ್ಯುದ್ದೀಪಗಳಿಂದ ಅಲಂಕರಿಸಲಾಗಿದ್ದು ಇಲ್ಲಿ ಹದಿನೆಂಟು ಚಿತ್ತಾಕರ್ಷಕ ಸ್ತಬ್ಧ ಚಿತ್ರಗಳನ್ನು ಪರ್ಯಾಯೋತ್ಸವದ ಮೆರವಣಿಗೆಯ ಭವ್ಯತೆಯನ್ನು ಹೆಚ್ಚಿಸಲು ಸಿದ್ಧಗೊಳಿಸಲಾಗಿತ್ತು.

ಯತಿವರ್ಯರ ಬಳಿಕ ಮೆರವಣಿಗೆಯಲ್ಲಿ ವೇಷಗಳು, ಅಂಬಾರಿಗಳಿಂದ ಅಲಂಕೃತಗೊಂಡ ಆನೆಗಳು ಸ್ತಬ್ಧಚಿತ್ರಗಳು ಕಾಣಿಸಿಕೊಂಡವು. ಪರ್ಯಾಯೋತ್ಸವದ ನಯನಮನೋಹರ ಸಂಭ್ರಮದ ಮೆರವಣಿಗೆಯನ್ನು ಕಾಣಲು ಉತ್ಸುಕತೆಯಿಂದ ಉಡುಪಿಗಾಗಮಿಸಿ, ಜೋಡುಕಟ್ಟೆಯಿಂದ ರಥಬೀದಿಯ ತನಕವೂ ಇಕ್ಕೆಲಗಳಲ್ಲಿ ನೆರದಿದ್ದ ಲಕ್ಷಾಂತರ ಯಾತ್ರಿಕರಿಗೆ ಈ ಬಾರಿ ಮೆರವಣಿಗೆ ಅಪಾರ ಆಕರ್ಷಣೀಯವೆನಿಸಿತು.

ಮೆರವಣಿಗೆಯ ಮೊದಲಲ್ಲಿ ಬಿರುದಾವಳಿಗಳು ಕಾಣಿಸಿಕೊಂಡರೆ ಅವುಗಳನ್ನು ಅನುಸರಿಸಿ ತಟ್ಟೀರಾಯರು; ಅನಂತರದಲ್ಲಿ ಬೃಹತ್ ಮುಖವಾಡವೇಷಗಳು, ಮರಕಾಲ ವೇಷಗಳು, ಕೀಲುಕುದುರೆ, ಜಾನಪದ ನೃತ್ಯಗಾರರ ತಂಡ, ಪಂಜಿನ ಕಸರತ್ತುಗಳು, ಡೊಳ್ಳು ಬಾರಿಸುವವರ ತಂಡ ಜಾಗಟೆ ಬಾರಿಸುವವರ ತಂಡ, ಕೋಲಾಟ ನೃತ್ಯ, ವೇದಘೋಷ ಪಠಿಸುವ ವಟುಗಳು,

ಕೊಂಬುಕಹಳೆ ಊದುವವರ ತಂಡ, ಚಂಡೆ ಮದ್ದಳೆಗಳನ್ನು ಬಾರಿಸುವವರು ಬೃಹತ್ ತಂಡ, ಯಕ್ಷಗಾನ ವೇಷಭೂಷಣದಲ್ಲಿ ಕಾಣಿಸಿಕೊಂಡ ತಂಡ, ಭಜನೆಗಳನ್ನು ಹಾಡುವ ಮಹಿಳೆಯರ ಸಮೂಹ ಬಾಲಕರ ನೃತ್ಯತಂಡ ಹೀಗೆ ನಿರಂತರವಾಗಿ ವಿವಿಧ ಬಗೆಯ ಕಲಾಮಾಧ್ಯಮದ ತಂಡಗಳು ಕಾಣಿಸಿಕೊಂಡವು.

**ಯತಿವರ್ಯರ ಮೇನೆಗಳು :** ಮೊದಲ ಪಾಲಕಿಯಲ್ಲಿ ಸೋದೆವಾದಿರಾಜ ಮಠದ ಪಟ್ಟದದೇವರಾದ ಶ್ರೀ ಭೂವರಾಹ ದೇವರನ್ನು ಅಲಂಕರಿಸಿಡಲಾಗಿತ್ತು. ಅನಂತರದಲ್ಲಿ ಸಾಲುಸಾಲಾಗಿ ಕಾಣಿಸಿಕೊಂಡ ಏಳು ಪಾಲಕಿಯಲ್ಲಿ ಪರ್ಯಾಯ ಪೀಠವೇರುವ ಶ್ರೀ ಸೋದೆವಾದಿರಾಜ ಮಠದ ಶ್ರೀ ವಿಶ್ವೋತ್ತಮ ಶ್ರೀ ಪಾದರು, ಕಾಣಿಯೂರು ಮಠದ ಶ್ರೀ ವಿದ್ಯಾವಾರಿನಿಧಿ ತೀರ್ಥರು, ಕೃಷ್ಣಾಪುರ ಮಠದ ಶ್ರೀ ವಿದ್ಯಾಸಾಗರತೀರ್ಥರು ಅದಮಾರು ಮಠದ ಕಿರಿಯ ಶ್ರೀಗಳಾದ ಶ್ರೀ ವಿಶ್ವಪ್ರಿಯತೀರ್ಥರು, ಪುತ್ತಿಗೆ ಮಠದ ಶ್ರೀ ಸುಗುಣೇಂದ್ರತೀರ್ಥರು, ಫಲಿಮಾರಮಠದ ಕಿರಿಯ ಶ್ರೀಗಳಾದ ಶ್ರೀ ವಿದ್ಯಾಧೀಶತೀರ್ಥರು, ಪೇಜಾವರಮಠದ ಕಿರಿಯ ಶ್ರೀಗಳಾದ ಶ್ರೀ ವಿಶ್ವಪ್ರಸನ್ನತೀರ್ಥರು ವಿರಾಜಮಾನರಾಗಿದ್ದರು.

**ಸ್ತಬ್ಧ ಚಿತ್ರಗಳು :** ಯತಿವರ್ಯರಿಂದ ಭೂಷಿತವಾದ ಈ ಪಾಲಕಿಗಳ ಬಳಿಕ ಸ್ತಬ್ಧ ಚಿತ್ರಗಳು ಕಾಣಿಸಿಕೊಂಡವು. ಈ ಸ್ತಬ್ಧಚಿತ್ರಗಳಲ್ಲಿ ಮೊತ್ತ ಮೊದಲು ಶ್ರೀ ಕೃಷ್ಣದೇವರ ಅತ್ಯಾಕರ್ಷಣ ಪ್ರತಿಕೃತಿ ಇತ್ತು. ಅನಂತರದಲ್ಲಿ ಶ್ರೀ ವಾದಿರಾಜ ಪ್ರತಿಷ್ಠಿತ ಶ್ರೀ ಮುಖ್ಯಪ್ರಾಣರ ರಂಗಪೂಜೆ ವೈಭವವನ್ನು ಸಾದರಪಡಿಸುವ ಟ್ಯಾಬ್ಲೋ ಬಳಿಕ ಶ್ರೀ ವಾದಿರಾಜರಿಂದ ಪ್ರತಿಷ್ಠಾಪನೆಗೊಂಡ ಗರುಡದೇವರ ಪ್ರತಿಕೃತಿ ಶ್ರೀ ವಾದಿರಾಜರಿಗೆ ಒಲಿದು ಬಂದ ಪಚ್ಚೆ ವಿಠಲನ ವಿಗ್ರಹ; ಶ್ರೀ ಅನಂತ ಪದ್ಮನಾಭ ದೇವರು; ಗರುಡವಾಹನನಾದ ಶ್ರೀಕರನಾರಾಯಣದೇವರು ಶ್ರೀ ವಾದಿರಾಜರಿಗೆ ಒಲಿದು ಬಂದ ಹಯಗ್ರೀವರೂಪಿ ಪರಮಾತ್ಮನನ್ನು ಬಿಂಬಿಸುವ ಸ್ತಬ್ಧಚಿತ್ರ ವಿಶೇಷವಾಗಿ ಆಕರ್ಷಿಸಿತು. ಹಾಗೆಯೇ ಶ್ರೀ ಮನ್ವಧ್ವಾಚಾರ್ಯ ಕರಾರ್ಚಿತ ಶ್ರೀಮಠದ ಪಟ್ಟದದೇವರಾದ ಶ್ರೀ ಭೂವರಾಹದೇವರ ಪ್ರತಿಕೃತಿ ಮತ್ತು ಪಾಜಕಕ್ಷೇತ್ರದಲ್ಲಿ ನೆಲೆನಿಂತ ಶ್ರೀ ಜಗದ್ಗುರು ಮಧ್ವಾಚಾರ್ಯರ ಪ್ರತಿಕೃತಿ ಮನಸೆಳೆಯಿತು. ಶ್ರೀ ವಾದಿರಾಜರ ಸೇವಕ ಹಾಗೂ ಕ್ಷೇತ್ರ ರಕ್ಷಕರಾದ ಶ್ರೀ ಭೂತರಾಯರಗುಡಿ ಕೂಡ ಆಕರ್ಷಣೆ ಪಡೆಯಿತು.

**ದೃಶ್ಯ ವೈಭವ :** ದೃಶ್ಯ ವೈಭವವನ್ನು ಬಿಂಬಿಸುವ ಸ್ತಬ್ಧಚಿತ್ರಗಳಲ್ಲಿ ಶ್ರೀ ವಿಶ್ವೋತ್ತಮತೀರ್ಥರ ಗುರುಗಳಾದ ಶ್ರೀ ವಿಶ್ವೇಂದ್ರತೀರ್ಥ ಶ್ರೀಪಾದರು ತಮ್ಮ ವಿದ್ಯಾ ಸಂಸ್ಥೆಗಳ ಹಿನ್ನೆಲೆಯಲ್ಲಿ ನಿಂತ ಚಿತ್ರಣ ಗಮನ ಸೆಳೆಯಿತು. ಹಾಗೆಯೇ ಸೋಂದಾ ಕ್ಷೇತ್ರದಲ್ಲಿನ ತಪೋವನದಲ್ಲಿ ನೆಲೆಸಿದ ಶ್ರೀವಾದಿರಾಜತೀರ್ಥರು; ಮಹಾಭಾರತ ಹೇಳುವ ವ್ಯಾಸ, ಬರೆದುಕೊಳ್ಳುತ್ತಿರುವ ಗಣಪತಿ; ಪುಷ್ಪಕವಿಮಾನದಲ್ಲಿ ಹಂಸವಾಹನದಲ್ಲಿ ವಿರಾಜಮಾನರಾದ ಶ್ರೀ ವಾದಿರಾಜರು, ಸೋದೆಕ್ಷೇತ್ರದಲ್ಲಿನ ಶ್ರೀ ರಮಾತ್ರಿವಿಕ್ರಮ ದೇವಸ್ಥಾನದ ಸ್ತಬ್ಧಚಿತ್ರಗಳು ಅತ್ಯಾಕರ್ಷಕವೆನಿಸಿದವು.

ಐತಿಹಾಸಿಕ ಘಟನೆಯನ್ನು ವಿವರಿಸುವ ಟ್ಯಾಬ್ಲೋಗಳಲ್ಲಿ ದಿಲ್ಲಿ ಬಾದಶಹನ ಮೃತ ಮಗನನ್ನು ಬದುಕಿಸಿ ಉದ್ಧರಿಸಿದ ಶ್ರೀ ವಾದಿರಾಜರನ್ನು ಕಾಣಿಸಿದ ಸ್ತಬ್ಧಚಿತ್ರವನ್ನು ಸೆರೆಹಿಡಿಯಿತು. ಸೋಂದಾ ಕ್ಷೇತ್ರದಲ್ಲಿನ ಪಂಚವೃಂದಾವನದಲ್ಲಿ ಶ್ರೀವಾದಿರಾಜರನ್ನು ಕಾಣಿಸುವ ಸ್ತಬ್ಧಚಿತ್ರ ಕೂಡ ಎಲ್ಲರ ಗಮನ ಸೆಳೆಯಿತು. ವೈಭವದ ಪರ್ಯಾಯೋತ್ಸವ ಮೆರವಣಿಗೆ ರಥಬೀದಿಯನ್ನು ೪-೩೦ರ ಸುಮಾರಿಗೆ ತಲುಪಿತು.

**ಕನಕನ ಕಿಂಡಿಯಿಂದ ದರ್ಶನ :** ರಥಬೀದಿಯಲ್ಲಿ ಮೇನೆಯಲ್ಲಿ ಬಂದ ಸ್ವಾಮೀಜಿಯವರು ನೆಲದ ಮೇಲೆ ಹಾಸಿದ ಬಟ್ಟೆಯ ಮೇಲೆ ಹೆಜ್ಜೆ ಹಾಕಿ ಕನಕನ ಕಿಂಡಿಯವರೆಗೆ ಬಂದು ಶ್ರೀಕೃಷ್ಣನ ದರ್ಶನ ಪಡೆದರು.

ಆ ಬಳಿಕ ಶ್ರೀ ಚಂದ್ರೇಶ್ವರ ಹಾಗೂ ಶ್ರೀ ಅನಂತೇಶ್ವರ ದೇವಳಗಳಿಗೆ ತೆರಳಿ ಅಲ್ಲಿ ಶ್ರೀ ದೇವರ ದರ್ಶನ ಪಡೆದು ಶ್ರೀಕೃಷ್ಣ ಮಠದ ಮುಂಬಾಲಿಗೆ ಬಂದಾಗ ಅಲ್ಲಿ ಪರ್ಯಾಯ ಪೀಠ ಬಿಟ್ಟೇಳುವ ಶಿರೂರುಮಠದ ಶ್ರೀಗಳಾದ ಲಕ್ಷ್ಮೀವರತೀರ್ಥರು ಪರ್ಯಾಯ ಪೀಠವೇರಲಿರುವ ಶ್ರೀ ವಿಶ್ವೋತ್ತಮ ತೀರ್ಥರನ್ನು ಹಾಗೂ ಅವರ ಪಟ್ಟದದೇವರನ್ನು ಶ್ರದ್ಧಾಭಕ್ತಿಯಿಂದ ಸ್ವಾಗತಿಸಿದರು.

ಅನಂತರ ಮಧ್ವಸರೋವರದಲ್ಲಿ ಪಾದ ಪ್ರಕ್ಷಾಳನ ನಡೆದು ಭಾಗೀರಥಿಗೆ ನಮಸ್ಕರಿಸಿ ಶ್ರೀ ಕೃಷ್ಣಮಠದ ಒಳಗೆ ಆಗಮಿಸಲು, ಮುಖಮಂಟಪದಲ್ಲಿ ಶ್ರೀ ವಿಶ್ವೋತ್ತಮ ತೀರ್ಥರ ಶ್ರೀಭೂವರಾಹ, ಪಟ್ಟದದೇವರನ್ನು ಇರಿಸಿ ಪೂಜೆ ನಡೆಸಲಾಯಿತು. ನಂತರ ನವಗ್ರಹ ಕಿಂಡಿಯ ಮೂಲಕ ಶ್ರೀ ಕೃಷ್ಣದರ್ಶನ ಪಡೆದರು.

ಶ್ರೀ ಮಧ್ವಾಚಾರ್ಯರ–ಮೂರ್ತಿಯ ಎದುರಿಗೆ ಪರ್ಯಾಯ ದೀಕ್ಷೆಯ ಪ್ರಧಾನ ಭಾಗವಾಗಿ ಸೋದೆ ಶ್ರೀಪಾದರು ಅಕ್ಷಯ ಪಾತ್ರೆ, ಪಾಕಸಟ್ಟುಗ, ಶ್ರೀಕೃಷ್ಣ ಮಠದ ಗರ್ಭಗುಡಿಯ ಕೀಲಿಕೈಗಳನ್ನು ಶ್ರೀರೂರು ಶ್ರೀ ಪಾದರಿಂದ ಸ್ವೀಕರಿಸಿದರು. ಪರ್ಯಾಯ ಬಿಟ್ಟೇಳುವ ಶೀರೂರು ಶ್ರೀಪಾದರು ಬಳಿಕ ಸೋದೆ ಶ್ರೀ ಪಾದರನ್ನು ಸರ್ವಜ್ಞ ಪೀಠದಲ್ಲಿ ಕುಳ್ಳಿರಿಸಿದರು. ಮುಂದಿನ ಹಂತವಾಗಿ ಬಡಗು ಮಾಳಿಗೆಯಲ್ಲಿ ಸಾಂಕೇತಿಕ ಅಧಿಕಾರ ಸ್ವೀಕಾರ, ಗಂಧೋಪಚಾರ, ಮಾಲಿಕೆ ಮಂಗಳಾರತಿ ಮುಂತಾದ ವಿಧಿವಿಧಾನಗಳು ಜರುಗಿದವು.

**ರಾಜಾಂಗಣದ ದರ್ಬಾರ ಹಾಲಿನಲ್ಲಿ :** ದೀಪಾಲಂಕಾರರತ್ನ ಶ್ರೀ ಎಂ. ದೇವರಾಜ್ ಅವರ ಮಾರ್ಗದರ್ಶನದಲ್ಲಿ ಶ್ರೀ ವಾದಿರಾಜ ಮಂಟಪವನ್ನು ಅತ್ಯಂತ ವಿಶಿಷ್ಟ ಶೈಲಿಯಲ್ಲಿ ವಿನ್ಯಾಸಗೊಳಿಸಲಾಗಿತ್ತು. ವೈಶಿಷ್ಟ್ಯಮಯ ಫಲಪುಷ್ಪಗಳೊಂದಿಗೆ ರೂಪಿಸಿದ ಮಂಟಪ ಆಕರ್ಷಕವಾಗಿತ್ತು. ರಾಜಾಂಗಣವು ಸಾವಿರಾರು ಜನರಿಂದ ತುಂಬಿ ಹೋಗಿತ್ತು. ಕಾರ್ಯಕ್ರಮ ಪ್ರಾರಂಭವಾಗುವದಕ್ಕಿಂತ ಮೊದಲು ನಾಗಸ್ವರ ವಿದ್ವಾನ್ ಶ್ರೀ ದೇವದಾಸ ಸುಬ್ರಮಣ್ಯ ಉಪ್ಪಿನಂಗಡಿ ಇದರಿಂದ ನಾಗಸ್ವರವಾದನ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶ್ರೀಮತಿ ಚೇತನಾ ವಿ. ಆಚಾರ್ಯ ಅವರಿಂದ ದಶಾವತಾರಸ್ತುತಿ, ಮಾಸ್ಟರ್ ಸನತ್ ಭಾಸ್ಕರ್‌ರಿಂದ ಭಕ್ತಿಗೀತೆ ಗಾಯನ ಜರುಗಿತು.

ಪರ್ಯಾಯ ಸ್ವಾಗತ ಸಮಿತಿಯ ಗೌರವಾಧ್ಯಕ್ಷ ಐ.ಸಿ.ಡಿ.ಎಸ್. ಅಧ್ಯಕ್ಷ ಶ್ರೀ ಕೆ.ಕೆ. ಪೈ ಸ್ವಾಗತಿಸಿದರು. ಅಪೂರ್ವ ಪರಂಪರೆಯ ಉಡುಪಿ ಶ್ರೀಕೃಷ್ಣ ಮಠದ ಪರ್ಯಾಯ ಉತ್ಸವ ಭಕ್ತಾಭಿಮಾನಿಗಳ ಉತ್ಸವವೇ ಆಗಿ ರೂಪಗೊಂಡಿದೆ ಎಂದರು.

ಸಭೆಯಲ್ಲಿ ಪೇಜಾವರ ಮಠದ ಹಿರಿಯ ಶ್ರೀ ಪಾದಂಗಳಾದ ಶ್ರೀ ವಿಶ್ವೇಶತೀರ್ಥರು, ಕಾಣಿಯೂರು ಮಠಾಧೀಶರಾದ ಶ್ರೀ ವಿದ್ಯಾವಾರಿನಿಧಿತೀರ್ಥ ಶ್ರೀ ಪಾದಂಗಳವರು, ಕೃಷ್ಣಾಪುರ ಮಠಾಧೀಶ ಶ್ರೀ ವಿದ್ಯಾಸಾಗರತೀರ್ಥರು, ಅದಮಾರು ಮಠದ ಕಿರಿಯ ಶ್ರೀಗಳಾದ ಶ್ರೀ ವಿಶ್ವಪ್ರಿಯ ತೀರ್ಥರು, ಶಿರೂರು ಮಠಾಧೀಶ ಶ್ರೀ ಲಕ್ಷ್ಮೀವರತೀರ್ಥರು, ಪುತ್ತಿಗೆ ಮಠಾಧೀಶರಾದ

ಶ್ರೀ ಸುಗುಣೇಂದ್ರತೀರ್ಥರು ಫಲಿಮಾರು ಮಠದ ಕಿರಿಯ ಶ್ರೀಗಳಾದ ಶ್ರೀ ವಿದ್ಯಾಧೀಶತೀರ್ಥರು. ಪೇಜಾವರ ಮಠದ ಕಿರಿಯ ಶ್ರೀ ಪಾದಂಗಳಾದ ಶ್ರೀ ವಿಶ್ವಪ್ರಸನ್ನ ತೀರ್ಥರು. ಆಸೀನರಾಗಿದ್ದರು ಪರ್ಯಾಯ ಶ್ರೀಗಳು ಮಠಾಧಿಪತಿಗಳಿಗೆ ಸಭಾಮರ್ಯಾದೆ ಸಲ್ಲಿಸಿಗೌರವಿಸಿದರು.

ಸರ್ವಶ್ರೀ ಡಾ|| ವಿ.ಎಸ್. ಆಚಾರ್ಯ, ಗುಜ್ಜಾಡಿ ಪ್ರಭಾಕರ ನಾಯಕ, ಹರಿದಾಸ ಉಪಾಧ್ಯ, ಎನ್.ಆರ್. ನಾರಾಯಣರಾವ್, ಎಂ. ರಘುನಾಥಶೇಟ್, ಗೋಪಾಲರಾವ್, ಯು.ಕೆ. ರಾಘವೇಂದ್ರರಾವ್, ಯು.ಆರ್. ಸಭಾಪತಿ, ಯು ರಮೇಶರಾವ್ ಇವರು ಹಾರಾರ್ಪಣೆ ಗೈದರು.

ಶ್ರೀ ಸೋದೆ ವಾದಿರಾಜ ಮಠದ ಶ್ರೀ ವಿಶ್ವೋತ್ತಮತೀರ್ಥರ ಪರ್ಯಾಯೋತ್ಸವದ ದರ್ಬಾರಿನಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನಗೈದು ನಾಡಿನ ಕೀರ್ತಿಯನ್ನು ಜಗದಗಲ ಬೆಳಗಿದ ಏಳು ಮಂದಿ ಸಾಧನಶೀಲ ವ್ಯಕ್ತಿಗಳನ್ನು ಪರ್ಯಾಯ ಸೋದೆ ಶ್ರೀಪಾದರು ಸನ್ಮಾನಿಸಿದರು.

೧. ಖ್ಯಾತ ಸಂಸ್ಕೃತ ಪಂಡಿತ ಹಾಗೂ ವೇದ ವಿದ್ಯಾಪಾರಂಗತರಾದ ಶ್ರೀ ಪಂಡಿತರಾಜ ಶ್ರೀ ಆತ್ಮಕೂರು ಆನಂದ ತೀರ್ಥಾಚಾರ್ಯರಿಗೆ 'ಶಬ್ಧಶಾಸ್ತ್ರ ವಿಚಕ್ಷಣ' ಎಂಬ ಬಿರುದನ್ನಿತ್ತು ಶಾಲುಹೊದಿಸಿ ಪ್ರಶಸ್ತಿಪತ್ರ ಹಾಗೂ ಸ್ಮರಣಿಕೆ ನೀಡಿ ಗೌರವಿಸಿದರು.

೨. ಖ್ಯಾತ ವಿಜ್ಞಾನಿ ಡಾ| ರಾಜಾರಾಮಣ್ಣ ಅವರಿಗೆ 'ವಿಜ್ಞಾನಭಾನು' ಎಂಬ ಪ್ರಶಸ್ತಿ ನೀಡಿ ಗೌರವಿಸಿದರು.

೩. ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದಿರುವ ಹಿರಿಯ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳ' ಅವರಿಗೆ 'ಗದ್ಯ ಭಾಸ್ಕರ' ವೆಂಬ ಪ್ರಶಸ್ತಿ ನೀಡಿ ಗೌರವಿಸಲಾಯಿತು.

೪. ವೈದ್ಯಕೀಯ ಶಿಕ್ಷಣಕ್ಷೇತ್ರದಲ್ಲಿ ದಕ್ಷ ಆಡಳಿತಗಾರನಾಗಿ ಹಾಗೂ ಸ್ವತಃ ತಜ್ಞ ವೈದ್ಯರಾಗಿ ಸಾಧನಗೈದಿರುವ ಡಾ| ರಾಮದಾಸ ಎಂ.ಪೈ ಅವರಿಗೆ 'ಚಿಕಿತ್ಸಾ ಧನ್ವಂತರಿ' ಎಂಬ ಬಿರುದು ನೀಡಿ ಪುರಸ್ಕರಿಸಲಾಯಿತು.

೫. ಕೊಲ್ಲಿಯಲ್ಲಿ ಅನೇಕ ಬೃಹತ್ ಉದ್ದಿಮೆ ನಡೆಸಿ ಯಶಸ್ವಿಯಾಗಿರುವ ಹಾಗೂ ಸಮಾಜ ಸೇವಕರಾಗಿ ದುಡಿಯುತ್ತಿರುವ 'ಶ್ರೀ ಬಾವಗುತ್ತು ರಘುರಾಮಶೆಟ್ಟಿ' ಅವರಿಗೆ 'ಸೇವಾಧುರೀಣ'ವೆಂಬ ಪ್ರಶಸ್ತಿ ನೀಡಿ ಗೌರವಿಸಲಾಯಿತು.

೬. ಕನ್ನಡ ಚಿತ್ರರಂಗದ ಪ್ರಖ್ಯಾತನಟ ಶ್ರೀ ವಿಷ್ಣುವರ್ಧನ್ ಅವರಿಗೆ 'ನಟ ಮಾರ್ತಾಂಡ'ನೆಂದು ಬಿರುದು ನೀಡಿ ಗೌರವಿಸಲಾಯಿತು.

೭. ಅಂತರಾಷ್ಟ್ರೀಯ ಖ್ಯಾತಿಯ ದೇಹದಾರ್ಢ್ಯ ಪಟು 'ಶ್ರೀ ರೇಮಂಡ ಡಿ.ಸೋಜಾ' ಅವರಿಗೆ ಶ್ರೀಗಳು 'ವ್ಯಾಯಾಮ ಪ್ರವೀಣ'ನೆಂಬ ಪ್ರಶಸ್ತಿ ನೀಡಿ ಪುರಸ್ಕರಿಸಿದರು.

ಪ್ರಶಸ್ತಿ ಹಾಗೂ ಗೌರವಗಳಿಗೆ ಕೃತಜ್ಞತೆ ಅರ್ಪಿಸಿ ಮಾತನಾಡಿದ ಶ್ರೀಆನಂದ ತೀರ್ಥಚಾರ್ಯರು ಈ ಗೌರವ ಜ್ಞಾನದೇವಿಗೆ ಸಂದ ಗೌರವವೆಂದು 'ಸರ್ವಧರ್ಮ ಸಮತಾಭಾವ'ದ ಸ್ವರಚನೆಯೊಂದನ್ನು ಸಾದರ ಪಡಿಸಿದರು.

ಶ್ರೀ ಶ್ರೀ ವಿಶ್ವೋತ್ತಮತೀರ್ಥರು / ೮೩

ಡಾ|| ರಾಜಾರಾಮಣ್ಣ ಈ ಗೌರವ ವಿಜ್ಞಾನಕ್ಷೇತ್ರಕ್ಕೆ ಸಂದಗೌರವವೆಂದರು. 'ಪರತತ್ವ ತಿಳಿದ ಪಂಡಿತ ನಾನಲ್ಲ; ಹರಿನಾಮ ಒಂದುಳಿದು ಬೇರೇನೂ ತಿಳಿದಿಲ್ಲ' ಎಂದು ಪರಿಚಯಿಸಿಕೊಂಡ ವಿಷ್ಣುವರ್ಧನ್, ನಿಮ್ಮೆಲ್ಲರ ಗೌರವ, ಪ್ರೀತಿ, ಶ್ರೀರಕ್ಷೆ ಇದೇ ರೀತಿ ಸಕಲ ಜೀವರಾಶಿಯ ಮೇಲಿರಲಿ ಎಂದು ಹಾರೈಸಿದರು.

**ವಿದ್ವಾಂಸರಿಗೆ ಸನ್ಮಾನ :** ಮಠದ ಆಸ್ಥಾನ ವಿದ್ವಾಂಸರುಗಳಾದ ಸರ್ವಶ್ರೀ ಪ್ರೊ|| ಹರಿದಾಸ ಉಪಾಧ್ಯ, ಹೆರ್ಗ ಸುಬ್ರಾಯ ಭಟ್, ಪಾಡಿಗಾರು ಗುರುರಾಜತಂತ್ರಿ, ಪ್ರೊ|| ಲಕ್ಷ್ಮೀನಾರಾಯಣಶರ್ಮಾ, ಪ್ರೊ|| ಎಂ. ರಾಜಗೋಪಾಲಾಚಾರ್ಯ, ಕಾಮ ಹಯಗ್ರೀವ ಆಚಾರ್ಯ, ಕಟ್ಟೆ ವಾದಿರಾಜಾಚಾರ್ಯ, ಪಾದೂರ ವೆಂಕಟರಮಣ ಐತಾಳ, ಕಲ್ಮಂಜೆ ಹಯವದನ ಆಚಾರ್ಯ, ಪಿ.ಕೆ. ರಾಮಕೃಷ್ಣ ಆಚಾರ್ಯ, ಕೊರಂಗ್ರಪಾಡಿ ಸೀತಾರಾಮಾಚಾರ್ಯ, ಗುರಗುಂಡಿ ವಾಸುದೇವಾಚಾರ್ಯ, ಚಿಪ್ಪಗಿರಿ ನಾಗೇಂದ್ರಾಚಾರ್ಯ, ಕೆ. ರಾಮನಾಥ ಆಚಾರ್ಯ, ಗಣಪತಿ ಆಚಾರ್ಯಭೀಮನಕಟ್ಟೆಮಠ, ನಿಪ್ಪಾಣಿ ಗುರುರಾಜಾಚಾರ್ಯ, ಮಾಧವಾಚಾರ್ಯ, ಬಿ.ಪಿ. ನಾಗಭೂಷಣರಾವ್ ಅವರನ್ನು ಪರ್ಯಾಯ ಶ್ರೀಗಳವರು ಸನ್ಮಾನಿಸಿದರು.

**ಗಣ್ಯರಿಗೆ ಗೌರವ :** ವಿವಿಧ ಕ್ಷೇತ್ರಗಳ ಗಣ್ಯರಾದ ಸರ್ವಶ್ರೀ ಆಸ್ಕರ ಪೆರ್ನಾಂಡಿಸ್, ವಿ. ಧನಂಜಯ ಕುಮಾರ್, ಯು.ಆರ್. ಸಭಾಪತಿ, ಎನ್ ಯೋಗಿಶ್ ಭಟ್, ಐ.ಎಂ. ಜಯರಾಮಶೆಟ್ಟಿ, ಕುಂಬ್ಳೆ ಸುಂದರರಾವ್, ಕೆ. ಜಯರಾಮಶೆಟ್ಟಿ, ಕೆ. ರಾಮ, ಭರತ್‌ಲಾಲ ಮೀನಾ, ಎ.ಎಂ. ಪ್ರಸಾದ, ಡಾ| ಎನ್.ಕೆ. ತಿಂಗಳಾಯ ಎಂ.ಎಸ್. ಕೃಷ್ಣಭಟ್, ಕೆ.ಕೆ.ಪೈ, ಟಿ. ನಾರಾಯಣ ಪೈ, ಡಿ.ಎಸ್. ಕೃಷ್ಣನ್, ಟಿ.ಜೆ.ಎ. ಗಾಣಿಗ, ಡಾ| ಪಂಚಮುಖಿ, ಶಶಿಧರ ಶೆಟ್ಟಿ ಎರ್ಮಾಳ್, ರಾಮಚಂದ್ರರಾವ್ ಪಡುಬಿದ್ರಿ, ಶ್ರೀಮತಿ ಮಂಜುಳಾ ಗುರುರಾಜ್, ರಾಮಚಂದ್ರರಾವ್, ಟಿ.ವಿ. ರಾವ್, ಶಂಕರರಾವ್, ಎ.ಜಿ. ಕೊಡ್ಗಿ, ಡಾ| ವಿ.ಎಸ್. ಆಚಾರ್ಯ, ಗುಜ್ಜಾಡಿ ಪ್ರಭಾಕರ ನಾಯಕ, ಬಿ. ಸುಧಾಕರ ಶೆಟ್ಟಿ ಮುಂತಾದವರನ್ನು ಶ್ರೀಪಾದರು ಸನ್ಮಾನಿಸಿದರು.

ಈ ಸಂದರ್ಭದಲ್ಲಿ ಮಂಗಳೂರಿನ ಶ್ರೀ ಕೆ.ಕೆ.ಆರ್. ಶೇಟ್ ಅವರು ಪಂಚಮುಖಿ ಸಾಲಿಗ್ರಾಮದ ಹಾರವನ್ನು ಶ್ರೀ ಪಾದರಿಗೆ ಅರ್ಪಿಸಿದರು. ದೈವಜ್ಞ ಬ್ರಾಹ್ಮಣ ಶಿಷ್ಯವೃಂದದ ಪರವಾಗಿ ದೇವಸ್ಥಾನದ ಪೂಜಾಕೈಂಕರ್ಯಗಳಿಗೆ ಐವತ್ತು ಸಾವಿರ ರೂಪಾಯಿಗಳನ್ನು ಶ್ರೀಪಾದರ ಮೂಲಕ ಮಂಗಳೂರಿನ ಶ್ರೀ ಎಂ. ರಘುನಾಥ ಶೇಟ್ ಮತ್ತು ಪದಾಧಿಕಾರಿಗಳು ಅರ್ಪಿಸಿದರು.

**ಭಾಷಣಗಳು :**

**ಡಾ| ಡಿ. ವೀರೇಂದ್ರ ಹೆಗ್ಗಡೆ :** ಸೋದೆ ಮತ್ತು ಧರ್ಮಸ್ಥಳಕ್ಕೆ ವಿಶಿಷ್ಟವಾದ ಸಂಬಂಧವಿದೆ. ಸೋದೆ ಶ್ರೀ ವಾದಿರಾಜ ಸ್ವಾಮಿಜಿಯವರು ನಿಯುಕ್ತಗೊಳಿಸಿದ ಶಿಷ್ಯರೇ ಅಲ್ಲಿನ ಪೂಜಾಕೈಂಕರ್ಯ ಈಗಲೂ ವಂಶಪಾರಂಪರ್ಯದಿಂದ ನಡೆಸುತ್ತಿದ್ದಾರೆ.

**ಬಿ.ಎಸ್. ಯಡಿಯೂರಪ್ಪನವರು :** ಪರ್ಯಾಯ ಪೀಠವನ್ನು ನಾಲ್ಕನೆಯ ಬಾರಿಯಾಗಿ ಅಲಂಕರಿಸಿರುವ ಸೋದೆ ಮಠಾಧೀಶರು ಐದನೆಯ ಸಲವೂ ಅಲಂಕರಿಸುವಂತಾಗಲಿ ಎಂದು ಹಾರೈಸುತ್ತೇನೆ ಎಂದು ನುಡಿದರು.

**ಕಾಣಿಯೂರುಮಠದ ಶ್ರೀ ವಿದ್ಯಾವಾರಿನಿಧಿ ಶ್ರೀಗಳು :** ಶ್ರೀ ಯಡಿಯೂರಪ್ಪ ಹಾರೈಕೆಯನ್ನು ಅನುಮೋದಿಸುತ್ತಾ ತಾವು ಕೂಡ ಇದನ್ನೇ ಹಾರೈಸಬೇಕೆಂದಿದ್ದೆವು. ಮುಂದಿನ ಪರ್ಯಾಯ ನಮ್ಮದು. ಈ ಆವರ್ತನದ ಬಳಿಕ ಸೋದೆ ಶ್ರೀಗಳು ಐದನೆಯ ಬಾರಿ ಪರ್ಯಾಯ ಸ್ವೀಕರಿಸಿದರೆ, ಎಲ್ಲರ ಹಂಬಲದಂತೆ ನಮಗೂ ಈ ರೀತಿಯ ಅವಕಾಶ ದೊರೆಯಬಹುದು. ನಮ್ಮ ನಂತರ ಪೇಜಾವರ ಮಠಾಧೀಶರ ಪರ್ಯಾಯ. ಅವರ ನಿರಂತರ ಪರ್ಯಾಯವೂ ಎಲ್ಲರ ಹಂಬಲವಾಗಿದೆ. ಹೀಗೆ ವೇದಿಕೆಯಲ್ಲೀಗ ಜೊತೆಯಲ್ಲಿರುವ ನಾವು ಮೂವರಿಗೂ ಐದನೆಯ ಪರ್ಯಾಯ ದೊರೆತರೆ ನಮಗೆಲ್ಲ ಹರ್ಷ ಎಂದು ಜನರ ಹರ್ಷೋದ್ಗಾರದ ನಡುವೆ ನುಡಿದರು. ಹಾಗೂ ಅತ್ಯಂತ ಘನತೆಯ ಧಾರ್ಮಿಕ ಕಾರ್ಯವಾದ ಪರ್ಯಾಯವು ಶ್ರೀಕೃಷ್ಣನ ಆರಾಧನೆಯಿಂದ ಭಕ್ತಾದಿಗಳು ಶಾಂತಿನೆಮ್ಮದಿ ಪಡೆಯುತ್ತಾರೆ. ಎಂಬುದಾಗಿ ಹೇಳಿದರು.

**ಶೀರೂರು ಮಠಾಧೀಶರಾದ ಶ್ರೀ ಲಕ್ಷ್ಮೀವರತೀರ್ಥ ಶ್ರೀಪಾದರು :** ಸರ್ವರ ನೆರವಿನಿಂದ ಪರ್ಯಾಯವನ್ನು ಯಶಸ್ವಿಯಾಗಿ ನಿರ್ವಹಿಸಿದ ಸಂತೃಪ್ತಿ ದೊರೆತಿದೆ. ಮಥುರಾ ಸಮುಚ್ಚಯದ ನಿರ್ಮಾಣಕ್ಕೆ ಡಾ। ಧರ್ಮಸ್ಥಳ ವೀರೇಂದ್ರ ಹೆಗ್ಗಡೆಯವರು ಅನನ್ಯ ಮಾರ್ಗದರ್ಶನ ನೀಡಿದರು ಎಂಬುದಾಗಿ ಸ್ಮರಿಸಿದರು.

**ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದರು :** "ಭೌತಿಕ ವ್ಯಾಮೋಹ ಬೇಡ; ಧಾರ್ಮಿಕ ಚಿಂತನೆಯ ಮೂಲಕ ಮಾನವೀಯ ಮೌಲ್ಯಗಳ ಜಾಗೃತಿಯಾಗಬೇಕು. ದ್ವೈತ-ಅದ್ವೈತದ ದ್ವಂದಗಳಿದ್ದಾಗ, ೫೦೦ ವರ್ಷಗಳ ಹಿಂದೆ ಶ್ರೀ ವಾದಿರಾಜರು 'ಭಿನ್ನ ಅಭಿಪ್ರಾಯಗಳಿದ್ದರೂ ನಾಸ್ತಿಕ್ಯದ ಸವಾಲು ಎದುರಿಸಲು ಎಲ್ಲರೂ ಜೊತೆಯಾಗುತ್ತಾರೆ' ಎಂದಿದ್ದರು ನಾಸ್ತಿಕ್ಯದ ವಿರುದ್ಧ ಜನ ಜಾಗೃತಿಗೆ ಈ ಅಪೂರ್ವ ಸಂದೇಶವನ್ನು ದಕ್ಷಿಣಕನ್ನಡ ಜಿಲ್ಲೆ ನೀಡಿದೆ. ಈಗ ಸಂಭ್ರಮೋಲ್ಲಾಸದಿಂದ ಜರುಗಿದ ಪರ್ಯಾಯವು ಹೊಸ ಧಾರ್ಮಿಕ ಯುಗವನ್ನು ಸ್ಥಾಪಿಸಿದೆಯೆಂದು ವಿಶ್ಲೇಷಿಸಿದರು.

ಹಾಗೂ, ಅಷ್ಟಮಠಾಧೀಶರ ಪೈಕಿ ಹಲವರಲ್ಲಿ ತಾತ್ವಿಕವಾದ ಭಿನ್ನಾಭಿಪ್ರಾಯಗಳು ಹಲವು ವಿಚಾರಗಳಲ್ಲಿ ಇದ್ದದ್ದು ನಿಜ. ಈ ಭಿನ್ನಾಭಿಪ್ರಾಯ ಅನ್ನುವದು "ಸಹೋದರರ ನಡುವಣ ಅಸಮಾನದ ಹಾಗೆ ಸಹೋದರರು ಒಂದು ಕ್ಷಣಕಾರಣವಿಲ್ಲದೆ ಪರಸ್ಪರ ಅಸಮಾಧಾನ ಹೊಂದುತ್ತಾರೆ, ಮರುಕ್ಷಣ ಅವರು ಒಂದಾಗುತ್ತಾರೆ. ಅಷ್ಟಮಠಗಳ ವಿಚಾರದಲ್ಲೂ ನಡೆದದ್ದು ಇಷ್ಟೇ. ಅಷ್ಟಮಠಗಳ ಪೈಕಿ ಹಲವು ಮಠಗಳು ವೈಯಕ್ತಿಕವಾಗಿ ಟ್ರಸ್ಟರೂಪಿಸಿರುವ ಕಟ್ಟಡ ಸಮುಚ್ಚಯಗಳನ್ನು ನಿರ್ಮಿಸಿರುವ ಬಗ್ಗೆ ಭಕ್ತಾಭಿಮಾನಿಗಳು ವಿವಿಧ ಅಭಿಪ್ರಾಯ ಹೊಂದಿದ್ದಾರೆ. ಈ ಕುರಿತು ಮುಂದೆ ಯಾವುದೇ ಸಮಸ್ಯೆ ಇರುವುದಿಲ್ಲ. ಶ್ರೀಕೃಷ್ಣನ ಸೇವೆಗೆ ಭಕ್ತರ ಒಳಿತಿಗೆ ನಾವೆಲ್ಲರೂ ಕಟಿಬದ್ಧರಾಗಿದ್ದೇವೆ. ಶ್ರೀಕೃಷ್ಣಮಠದ ಪರಿಸರದ ಸಮಗ್ರ ಅಭಿವೃದ್ಧಿಗೆ ಯೋಜನೆ ಹಮ್ಮಿಕೊಳ್ಳುತ್ತಿದ್ದೇವೆ. ಪ್ರತಿಷ್ಠಾನವು ಸಂಯುಕ್ತ ಕಾರ್ಯಾಚರಣೆಯ ಸಂಕಲ್ಪದ ಪ್ರತೀಕವಾಗಿದೆ. ತತ್ವಜ್ಞಾನ-ಧರ್ಮ ಪ್ರಸಾರಕ್ಕೆ ಬದ್ಧವಾಗಿದೆಯೆಂದು ಪೇಜಾವರ ಶ್ರೀಗಳವರು ತಿಳಿಸಿದಾಗ ಭಕ್ತಾಭಿಮಾನಿಗಳು ಪ್ರಚಂಡ ಕರತಾಡನದ ಮೂಲಕ ತಮ್ಮ ಸಂತಸವನ್ನು ವ್ಯಕ್ತಪಡಿಸಿದರು.

**ಶ್ರೀ ವಿಶ್ವೋತ್ತಮ ತೀರ್ಥರು :** "ಅಲಂಕಾರಪ್ರಿಯ ಶ್ರೀಕೃಷ್ಣನ ಪೂಜಾಕೈಂಕರ್ಯವನ್ನು ಶಿರೂರು ಮಠಾಧೀಶರು ಅನನ್ಯ ಶ್ರದ್ಧಾಭಕ್ತಿಗಳಿಂದ ಕಳೆದೆರಡು ವರ್ಷಗಳಲ್ಲಿ ನಡೆಸಿದ್ದಾರೆ.

ಲೋಕಕಲ್ಯಾಣಾರ್ಥ ನಿರಂತರವಾಗಿ ಉಡುಪಿಯ ಶ್ರೀಕೃಷ್ಣನನ್ನು ಪೂಜಿಸುತ್ತೇವೆ. ಶ್ರೀ ಕೃಷ್ಣಮಠದಲ್ಲಿ ತುಳಸಿವನವನ್ನು ನಿರ್ಮಿಸಲು ಹಂಬಲವಿದೆ. ಶ್ರೀಕೃಷ್ಣಮಠ ಪರಿಸರದ ಸಮಗ್ರ ಅಭಿವೃದ್ಧಿಗೆ ಅಷ್ಟಮಠಾಧೀಶರ ಟ್ರಸ್ಟ ಸ್ಥಾಪನೆಗೆ ತಮ್ಮೆಲ್ಲರ ಬೆಂಬಲವಿದೆ. ವಾದಿರಾಜರ ಶಿಷ್ಯಪರಂಪರೆಯ ಆದರ್ಶವನ್ನು ಪರಿಪೂರ್ಣವಾಗಿ ಪಾಲಿಸುತ್ತೇವೆ. ಭಕ್ತಾಭಿಮಾನಿಗಳ ಸಂಪೂರ್ಣ ಸಹಕಾರವನ್ನು ಕೋರುತ್ತೇವೆ" ಎಂದು ಹೇಳಿದರು.

ಕೋಟೇಶ್ವರದ ಶ್ರೀ ಶ್ರೀಧರ ಹತ್ವಾರರು ಸೋದೆ ಶ್ರೀಗಳ ಪರ್ಯಾಯದ ಎರಡು ವರ್ಷ ಅವಧಿಯಲ್ಲಿ ಪ್ರತಿದಿನವೂ ಬ್ರಹ್ಮೋತ್ಸವವನ್ನು ಕೋಟೇಶ್ವರ ಮಾಗಣೆಯವರು ನಡೆಸಿಕೊಡಲಿದ್ದಾರೆಯಂತ ಸಭೆಯಲ್ಲಿ ಪ್ರಕಟಿಸಿದರು.

ಕಬ್ಯಾಡಿ ಜಯರಾಮಾಚಾರ್ಯರು ಕಾರ್ಯಕ್ರಮ ನಿರ್ವಹಿಸಿದರು. ಸಮಿತಿಯ ಕಾರ್ಯಾಧ್ಯಕ್ಷ ಪ್ರೊ ಕೆ. ಹರಿದಾಸ ಉಪಾಧ್ಯಾಯ ವಂದಿಸಿದರು. ಈದಿನ ಮಧ್ಯಾಹ್ನ ಸಾವಿರಾರು ಜನರ ಅನ್ನ ಸಂತರ್ಪಣೆ ನಡೆಯಿತು. ಇದರ ವೆಚ್ಚವನ್ನು ಕೋಟೇಶ್ವರ ಮಾಗಣಿಯವರು ವಹಿಸಿಕೊಂಡಿದ್ದರು.

ರಾತ್ರೆ ಬ್ರಹ್ಮರಥೋತ್ಸವ ಸೇವೆಯೊಂದಿಗೆ ಪರ್ಯಾಯೋತ್ಸವ ಕೊನೆಗೊಂಡಿತು.

**ಅನ್ನಬ್ರಹ್ಮನಾದ ಶ್ರೀಕೃಷ್ಣನು ನಡೆಸುತ್ತಿರುವ ಖರ್ಚು ವೆಚ್ಚಗಳ ಬಗ್ಗೆ ಅವಲೋಕನ :**

ಅನ್ನದಾನಕ್ಕಿಂತಲೂ ಅನ್ಯದಾನವಿಲ್ಲ. ಅನ್ನದಾನವೇ ಈ ಕ್ಷೇತ್ರದಲ್ಲಿ ಶ್ರೀಕೃಷ್ಣನಿಗೆ ಸಲುವ ಬಹುದೊಡ್ಡ ಸೇವೆ.

೧. ಪ್ರತಿನಿತ್ಯ ಉಡುಪಿ ಸಮೀಪದ ಮೂವತ್ತಕ್ಕೂ ಹೆಚ್ಚು ಶಾಲಾ ಕಾಲೇಜಿನ ೨೦೦೦ಕ್ಕೂ ಹೆಚ್ಚು ಬಡವಿದ್ಯಾರ್ಥಿಗಳಿಗೆ ಅನ್ನದಾನ.

೨. ಪ್ರತಿನಿತ್ಯ ಆಗಮಿಸುವ ಪ್ರತಿಯೊಬ್ಬ ಯಾತ್ರಿಕನಿಗೆ ಅನ್ನದಾನ ವಿಶೇಷ ದಿನಗಳಲ್ಲಿ ಹತ್ತು ಸಾವಿರಕ್ಕೂ ಮಿಕ್ಕಿ ಅನ್ನದಾನ ನಡೆಯುತ್ತದೆ.

೩. ಉಡುಪಿಯ ಕಸ್ತೂರ್ಬಾ ಮೆಡಿಕಲ್ ಕಾಲೇಜ್ ಆಸ್ಪತ್ರೆಯ ಹಾಗೂ ಸರಕಾರಿ ಆಸ್ಪತ್ರೆಯ ಬಡರೋಗಿಗಳಿಗೆ ಮಧ್ಯಾಹ್ನ ಮತ್ತು ರಾತ್ರಿ ಊಟದ ಸರಬರಾಜು.

೪. ಅನೇಕ ಅನಾಥ, ವೃದ್ಧ, ವಿಧವೆಯರಿಗೆ ಉದ್ಯೋಗ, ಊಟ, ವಸತಿಯ ವ್ಯವಸ್ಥೆ.

೫. ಸನಾತನ ಧರ್ಮ ಸಂಸ್ಕೃತ, ಯೋಗ ವೇದಶಾಲೆಯ ವಿದ್ಯಾಥಿಗಳಿಗೆ ವಸತಿ ಮತ್ತು ಊಟದ ವ್ಯವಸ್ಥೆ.

೬. ನೂರಕ್ಕೂ ಹೆಚ್ಚು ಗೋವುಗಳ ಪೋಷಣೆ.

೭. ಶ್ರೀಕೃಷ್ಣ ಮಠ ಹಾಗೂ ಅಷ್ಟಮಠಗಳಲ್ಲಿ ಐನೂರಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಉಚಿತ ವಸತಿಯ ಸದುಪಯೋಗವನ್ನು ಗಳಿಸುತ್ತಿದ್ದಾರೆ.

೮. ಪ್ರತಿವರ್ಷ ನೂರಕ್ಕೂ ಮಿಕ್ಕಿದ ಕಲಾವಿದರಿಗೆ, ಕುಶಲ ಕರ್ಮಿಗಳಿಗೆ ವಿದ್ವಾಂಸರುಗಳಿಗೆ ಸನ್ಮಾನ, ಸಂಭಾವನೆ, ಗೌರವ.

**೪ನೇ ಪರ್ಯಾಯದ ಅವಧಿಯಲ್ಲಿ ನಡೆದ ಅಭಿವೃದ್ಧಿ ಕಾರ್ಯಗಳು :**

೧. ಬಡಗು ಮಾಳಿಗೆಯಲ್ಲಿ ದಿನಸಿ ಸಾಮಾನು ವಗೈರೆ ಇರಿಸಲು ಒಂದು ದೊಡ್ಡ ಸಂಗ್ರಹಿಸಿ ಇಡುವ ಕೋಣೆ.

೨. ಯಾತ್ರಿಕರು ತಂಗಲು ವಸತಿ ಸಮುಚ್ಚಯ ನಿರ್ಮಾಣ ವಸಂತ ಮಹಲಿನ ಹಿಂಭಾಗದಲ್ಲಿ.

೩. ಶ್ರೀಕೃಷ್ಣನ ಆಭರಣಗಳ ರಿಪೇರಿ.

೪. ಬ್ರಹ್ಮರಥದ ನಾಲ್ಕು ಬೃಹತ್ ಚಕ್ರಗಳ ರಿಪೇರಿ ಕಾರ್ಯ.

**ವಿದ್ಯಾದಾನ :** ಶ್ರೀ ವಿಶ್ವೋತ್ತಮತೀರ್ಥರು ಉಡುಪಿಯ ಕೃಷ್ಣಾಪುರ ಮಠಾಧೀಶರಾದ ಶ್ರೀ ವಿದ್ಯಾಸಾಗರತೀರ್ಥರಿಗೆ ತಮ್ಮ ತೃತೀಯ ಪರ್ಯಾಯದ ಸಮಯದಲ್ಲಿ (೧೯೮೦-೮೨) ಶ್ರೀ ಮದ್ವಾದಿರಾಜರ "ಗುರ್ವರ್ಥ ದೀಪಿಕಾ ಸಹಿತ ಶ್ರೀ ಮಾನ್ಯಾಯ ಸುಧೆ"ಯನ್ನೂಹಾಗೂ ತಮ್ಮ ಚತುರ್ಥ ಪಯಾರ್ಯೋತ್ಸವ (೧೯೯೬-೯೮ ಸಂದರ್ಭದಲ್ಲಿ ಶ್ರೀ ಸುರೋತ್ತಮತೀರ್ಥರ ವ್ಯಾಖ್ಯಾನ ಸಹಿತವಾದ ಶ್ರೀ ಮದ್ವಾದಿರಾಜರ "ಯುಕ್ತಿ ಮಲ್ಲಿಕಾ"ವನ್ನೂ ಉಪದೇಶಿಸಿ ಮಂಗಳ ಮಹೋತ್ಸವನ್ನು ನೆರವೇರಿಸಿರುವರು.

ಶ್ರೀ ವಿಶ್ವೋತ್ತಮತೀರ್ಥರಲ್ಲಿ ಶಿರೂರು ಮಠಾಧೀಶರಾದ ಶ್ರೀ ಲಕ್ಷ್ಮೀವರತೀರ್ಥರು ಪ್ರಮಾಣ ಪದ್ಧತ್ಯಾದಿ ಗ್ರಂಥಗಳನ್ನು ಅಭ್ಯಸಿಸಿರುತ್ತಾರೆ. ಕೆಲವು ಗೃಹಸ್ಥರೂ ಶ್ರೀಗಳ ಉಪದೇಶದಿಂದ ಉದ್ಧೃತರಾಗಿರುತ್ತಾರೆ.

**ಸ್ವಾಪ್ನ ವೃಂದಾವನಾಖ್ಯಾನ ಭವನ ನಿರ್ಮಾಣ**

ಶ್ರೀ ವಾದಿರಾಜ ಗುರುಸಾರ್ವಭೌಮರು ವೃಂದಾವನ ಪ್ರವೇಶಾನಂತರ ಏಡಮೂಕ ಬ್ರಾಹ್ಮಣನೊಬ್ಬನ ಕನಸಿನಲ್ಲಿ ಕಾಣಿಸಿಕೊಂಡು ತಮ್ಮ ಸ್ವರೂಪ ಮಹಿಮಾದಿಗಳನ್ನು ಅವನಿಗೆ ಬೋಧಿಸಿ ಪ್ರಾತಃಕಾಲದಲ್ಲಿ ಅವನಿಗೆ ವಾಕ್‌ಶಕ್ತಿಯನ್ನಿತ್ತು ಅವನಿಂದ ಸ್ವಪ್ನದಲ್ಲಿ ಉಪದೇಶಿದ ಶ್ಲೋಕಗಳನ್ನು ಹೇಳಿಸುತ್ತಿದ್ದರು. ಇದನ್ನು ಅಂದಿನ ಗುರುಗಳಾದ ಶ್ರೀವೇದನಿಧಿಗಳು ಬರೆಯಿಸಿಟ್ಟಿದ್ದಾರೆ. ಸುಮಾರು ೨೨೫೦ ಶ್ಲೋಕದಿಂದ ಯುಕ್ತವಾದ ಈ ಗ್ರಂಥವು ಸ್ವಾಪ್ನ ವೃಂದಾವನಾಖ್ಯನವೆಂದೇ ಪ್ರಸಿದ್ಧಿಯಾಗಿದೆ. ಶ್ರೀರಾಜರ ಆಜ್ಞೆಯ ಮೇರೆಗೆ ಶ್ರೀ ವೃಂದಾವನಾಖ್ಯಾನದಲ್ಲಿಯ ಸಾರಭೂತ ಶ್ಲೋಕಗಳನ್ನು ಸಂಗ್ರಹಿಸಿ ಶಿಲಾಲೇಖ ಮಾಡಿ ಶ್ರೀ ವೇದವೇದ್ಯರ ವೃಂದಾವನದ ಎದುರಿಗೆ ಬಲಭಾಗದಲ್ಲಿ ಸ್ಥಾಪನೆ ಮಾಡಿದ್ದಾರೆ. ಈ ಸ್ವಾಪ್ನ ವೃಂದಾವನಾಖ್ಯಾನ ಗ್ರಂಥವು ಗೂಡಾರ್ಥಗಳಿಂದ ಕೂಡಿದ್ದು, ಎಲ್ಲರಿಗೂ ಅರ್ಥವಾಗುವಂತಿರಲಿಲ್ಲ. ಬಹುಕಾಲ ಅಜ್ಞಾತವಾಗಿಯೇ ಉಳಿಯಿತು. ಸುಮಾರು ೨೦೦ ವರ್ಷಗಳ ನಂತರ ಈ ಏಡಮೂಕ ವಿಪ್ರನೇ ಶ್ರೀ ವಿಶ್ವಪ್ರಿಯತೀರ್ಥ (ವೃಂದಾವನಾಚಾರ್ಯ)ರಾಗಿ ಅವತರಿಸಿ ಶ್ರೀ ವಾದಿರಾಜರ ಪೀಠವನ್ನು ಅಲಂಕರಿಸಿದರು. ಅವರ ಮೂಲಕವೇ ಈ ಗ್ರಂಥವು ಪ್ರಕಾಶಕ್ಕೆ ಬಂದಿತು. ಈ ಗ್ರಂಥದ ಅಂತರಾರ್ಥದ ಪರಿಚಯವು ವಿದ್ವಾಂಸರಿಗೆ ಆದುದು ಆಗಲೇ ಎಂದು ಹೇಳಬಹುದು. ಈ ಗ್ರಂಥದಲ್ಲಿ ಮಹಾಪುರುಷರುಗಳಿಂದ ನೆರವೇರಬೇಕಾದ ಆಜ್ಞೆಗಳು ಅನೇಕವಿದೆ. ಅಂತಹ ಆಜ್ಞೆಗಳು ಭವಿಷತ್ ಕಾಲದಲ್ಲಿ ನಿರ್ದಿಷ್ಟ ಮಹನೀಯರುಗಳಿಂದ ನೆರವೇರಿದ ನಿದರ್ಶನಗಳಿವೆ. ಅದೇ ರೀತಿ ಸಮಸ್ತಕೃತಿಗಳನ್ನೂ

ಶಿಲಾಲಿಖಿತವನ್ನಾಗಿ ಮಾಡಿ ತಮ್ಮ ವೃಂದಾವನದ ಮುಂದೆ ಸ್ಥಾಪಿಸಬೇಕೆಂಬ ಆಜ್ಞೆಯು ಶ್ರೀ ಸ್ವಾಪ್ನ ವೃಂದಾವನಾಖ್ಯಾನ ಗ್ರಂಥದಲ್ಲಿದೆ. ಈ ಕಾರ್ಯವು ಶ್ರೀ ವಿಶ್ವೋತ್ತಮರ ಕಾಲದಲ್ಲಿ ನೆರವೇರಬೇಕಾಗಿದುದರಿಂದ ೨೦೦೦ನೇ ಇಸ್ವಿಯಲ್ಲಿ ಶ್ರೀ ಗುರುರಾಜರ ವೃಂದಾವನದ ಎದುರು ಭಾಗದಲ್ಲಿ ಒಂದು ಭವನವನ್ನು ನಿರ್ಮಿಸಿ, ಶ್ರೀ ಗುರುರಾಜರ ವೃಂದಾವನ ಪ್ರವೇಶದ ೪೦೦ನೇ ವರ್ಷದ ಸ್ಮಾರಕವಾಗಿ ಅದರಲ್ಲಿ ಪೂರ್ತಿ ಸ್ವಾಪ್ನವೃಂದಾವನಾಖ್ಯಾನವನ್ನು ಶಿಲಾಸ್ಥಗೊಳಿಸಲಾಯಿತು. ಅದು ಸ್ವಾಪ್ನವೃಂದಾವನಾಖ್ಯಾನ ಭವನ ಎಂದು ಕರೆಸಿಕೊಳ್ಳುತ್ತಿದೆ. ಇದು ಶ್ರೀ ವಿಶ್ವೋತ್ತಮರ ಕಾಲದಲ್ಲಾಗಬೇಕಿದ್ದ ಗುರುರಾಜರ ಆದೇಶ ಕಾರ್ಯಗತವಾದಂತಾಯಿತು.

## 'ತತ್ತ್ವಮಲ್ಲಿಕಾ" ಜ್ಞಾನಸತ್ರ ಉತ್ಸವ ಸಮಿತಿಯಿಂದ ಪ್ರಕಾಶಗೊಂಡ ಸ್ಮೃತಿ ಸಂಚಿಕೆಯಿಂದ ಉದ್ಧೃತ

ಶ್ರೀ ಭೂತರಾಜ ಸಂಸೇವಿತ ಶ್ರೀಗುರುರಾಜವರದ

॥ ಶ್ರೀ ಮಧ್ವೇಶ ಹಯವದನಾಯ ನಮಃ ॥

## ಭಾವಿಸಮೀರ ಶ್ರೀ ವಾದಿರಾಜ ಗುರುಸಾರ್ವಭೌಮರ ಆರಾಧನಾ ಚತುಃಶತಮಾನೋತ್ಸವ ಹಾಗೂ ಆಖ್ಯಾನ ಮಂದಿರ ಸಮರ್ಪಣೆಯ ಅಂಗವಾಗಿ ನಡೆದ ಜ್ಞಾನಸತ್ರ – ಉತ್ಸವದ ಸಂಕ್ಷಿಪ್ತ ವರದಿ

– ಮಾನಕರಿ ಶ್ರೀನಿವಾಸಾಚಾರ್ಯ, ಎಂ.ಎ.

ಶ್ರೀ ತ್ರಿವಿಕ್ರಮ ಕ್ಷೇತ್ರವಾದ ಸೋದೆಯ ಪುಣ್ಯಾರಣ್ಯದಲ್ಲಿ ಕಂಗೊಳಿಸುವ ಶುಭಧವಳಗಂಗೆಯ ಪರಿಸರದಲ್ಲಿ ಸಂಚರಿಸುತ್ತಾ "ಶ್ರೀಗುರುರಾಜವರದ ಹಯಗ್ರೀವಸ್ವಾಮಿಯೇ, ಪ್ರಸನ್ನನಾಗು !" ಎಂದು ಮೈಮರೆತು ಕೂಗುತ್ತಾ ಜ್ಞಾನಿಜನರ ಸಮಾಗಮದಿಂದ ಲಭಿಸುವ ಪರಮಾನಂದವನ್ನು ಹೊಂದಿ ಅನೇಕ ದಿನಗಳನ್ನು ಕೆಲವೇ ಧನ್ಯಕ್ಷಣಗಳೆಂಬಂತೆ ಕಳೆಯುವ ಸುಯೋಗ ನನಗೆ ಯಾವಾಗ ಒದಗೀತು !!! ..... ಎಂಬ ಶ್ರೀ ಸತ್ಯಧರ್ಮತೀರ್ಥ ವಿರಚಿತ ಶ್ರೀ ವಾದಿರಾಜಸ್ತೋತ್ರದ ಆದಿಪದ್ಯದ ಭಾವವನ್ನು ನೆನೆಯುತ್ತಾ ಸೋದಾಕ್ಷೇತ್ರವನ್ನು ಪ್ರವೇಶಿಸಿದಾಗ ನಯನಮನೋಹರವಾಗಿ ತಳಿರುತೋರಣಗಳಿಂದ ಅಲಂಕಾರಗೊಂಡು ನಿಂತ ಶ್ರೀವಾದಿರಾಜಮಠವನ್ನು ಕಂಡದ್ದೇ ಒಂದು ದಿವ್ಯಾನುಭವ.

ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ, ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮುಖ್ಯಸಂಸ್ಥಾನ, ಉಡುಪಿ ಶ್ರೀಸೋದೆ ವಾದಿರಾಜ ಮಠದ ಪೀಠಾಧೀಶರಾದ ಪರಮಪೂಜ್ಯರಾದ ಶ್ರೀ ಶ್ರೀ ೧೦೦೮ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ ನೇತೃತ್ವದಲ್ಲಿ ಶ್ರೀವಿಕ್ರಮ ಸಂವತ್ಸರ ಚೈತ್ರ ಕೃಷ್ಣ ಪ್ರತಿಪದೆ, ದ್ವಿತೀಯಾ ಹಾಗೂ ತೃತೀಯಾ (೨೦೦೦ ಇಸವಿ ಏಪ್ರಿಲ್ ೧೯, ೨೦ ಮತ್ತು ೨೧) ಈ ದಿನತ್ರಯಗಳಲ್ಲಿ ಜ್ಞಾನಸತ್ರ – ಉತ್ಸವ ಸಮಾರಂಭವು ನೆರವೇರಿತು. ಉತ್ಸವಸಮಿತಿಯ ಪದಾಧಿಕಾರಿಗಳು, ಶ್ರೀಮಠದ ಪರಿವಾರದವರು, ವಿವಿಧ ಸ್ಥಳಗಳಿಂದ ಆಗಮಿಸಿದ ಸೋದಾಮಠದ ಶಿಷ್ಯರು ಹಾಗೂ ಅಸಂಖ್ಯಾತ ಗುರುರಾಜರಭಕ್ತರ ಶ್ರದ್ಧೆ ಹಾಗೂ ಸಮರ್ಪಣಾಮನೋಭಾವಗಳಿಂದ ಈ ಉತ್ಸವವು ಸುವ್ಯವಸ್ಥಿತವಾಗಿ, ಯಶಸ್ವಿಯಾಗಿ ನೆರವೇರಿತು.

ಈ ದಿನತ್ರಯದಲ್ಲಿ ಸಂಸ್ಥಾನದ ಆರಾಧ್ಯ ದೇವರು, ಶ್ರೀರಮಾತ್ರಿವಿಕ್ರಮದೇವರು, ಶ್ರೀರಾಜರು ಹಾಗೂ ಶ್ರೀಭೂತರಾಜರ ಸನ್ನಿಧಿಗಳಲ್ಲಿ ವಿಶೇಷ ಪೂಜೆ, ಅಲಂಕಾರ, ನೈವೇದ್ಯಗಳು ಮತ್ತು ಪ್ರತಿದಿನ ಸಕಾಲಕ್ಕೆ ಸಹಸ್ರಾರು ಬ್ರಾಹ್ಮಣ ಸುವಾಸಿನಿಯರಿಗೆ ವಿಶೇಷ ಭಕ್ಷ್ಯಗಳ ಸಂತರ್ಪಣೆ ಜರುಗಿದವು.

'ಹಯಗ್ರೀವ ವಿದ್ಯೆ' ಎಂದು ಖ್ಯಾತವಾದ, ಪುರುಷಸೂಕ್ತಕ್ಕೆ ಸಮವಾದ ಆಖ್ಯಾನ ಶ್ಲೋಕಗಳಿಂದ ಶ್ರೀವಾದಿರಾಜರ ಹೃತ್ಕಮಲವಾಸಿ ಹಯಶೀರ್ಷನಿಗೆ ಆಹುತಿ ಅರ್ಪಿಸುವ

ಶ್ರೀಮತ್ಸ್ವಾಪ್ನವೃಂದಾವನಾಖ್ಯಾನಹೋಮವು ಶ್ರೀ ತ್ರಿವಿಕ್ರಮ ದೇವಸ್ಥಾನದ ಒಳಾಂಗಣ ಪ್ರಾಕಾರದ ಬಲಭಾಗದಲ್ಲಿ ದಿನಾಂಕ ೧೯ ಹಾಗೂ ೨೦ರಂದು ಪ್ರಾತಃಕಾಲ ಜರುಗಿ ಶ್ರೀ ಶ್ರೀಗಳವರ ಸಮ್ಮುಖದಲ್ಲಿ ಹೋಮದ ಪೂರ್ಣಾಹುತಿ ನೆರವೇರಿತು. ಹಳೇಹುಬ್ಬಳ್ಳಿಯ ಶ್ರೀಸತ್ಯಬೋಧರಾಯರ ಮಠದ ವಾದಿರಾಜಾಚಾರ್ಯಗಣಾಚಾರಿ, ಬೆಳಗಾವಿಯ ವಿಶ್ವಪ್ರಿಯಾಚಾರ್ಯ ನಿಪ್ಪಾಣಿವಾಳ್ವೇಕರ್ ಸಂಜೀವಾಚಾರ್ಯ ಹಾಗೂ ಉಡುಪಿಯ ಗೋಪಾಲಕೃಷ್ಣ ಉಪಾಧ್ಯಾಯ ಮೊದಲಾದವರು ಈ ಕಾರ್ಯದಲ್ಲಿ ಭಾಗವಹಿಸಿದ್ದರು. ನೂರಾರು ಜನ ಶ್ರದ್ಧಾಳುಗಳು ಈ ಸಂದರ್ಭದಲ್ಲಿ ಆಖ್ಯಾನ ಪಾರಾಯಣ ಗೈದರು.

ಸೋದೆಯ ರಾಜಾಂಗಣದಲ್ಲಿ ನಿರ್ಮಿಸಿದ "ಸದನುಗ್ರಹ ಮಂಟಪ"ದಲ್ಲಿ ಶ್ರೀಹರಿಃಸರ್ವೋತ್ತಮ ॥ ಶ್ರೀವಾಯುಃಜೀವೋತ್ತಮಃ ॥ ಶ್ರೀವಾದಿರಾಜೋಽಪಿ ಜೀವೋತ್ತಮಃ ॥ ಎಂಬ ಫಲಕಗಳು ಶೋಭಿಸುತ್ತಿದ್ದವು. ೧೯-೦೪-೨೦೦೦ದಂದು ಬೆಳಿಗ್ಗೆ ೧೦.೩೦ಕ್ಕೆ ಆರಂಭವಾದ ಉದ್ಘಾಟನಾ ಸಭೆಯಲ್ಲಿ ಶ್ರೀರಾಘವೇಂದ್ರಾಚಾರ್, ಶ್ರೀ ಸುಬ್ರಮಣ್ಯಾಚಾರ್ಯ, ಶ್ರೀಲಕ್ಷ್ಮೀನಾರಾಯಣಾಚಾರ್ಯರು ವೇದಘೋಷ ಮಾಡಿದರು. ಚಿತ್ರದುರ್ಗದ ಕೆ. ಮುಕುಂದ ಪ್ರಾರ್ಥನೆ ಹಾಡಿದರೆ ಅವರ ಸೋದರ ಕೆ. ವಾದಿರಾಜ ಕಾರ್ಯಕ್ರಮವನ್ನು ನಿರೂಪಿಸಿದರು.

ಬೆಂಗಳೂರಿನ ಬಿ.ಎಸ್. ನಾಗರಾಜಧನ್ಯ ಇವರು ಸ್ವಾಗತಿಸುತ್ತಾ "ನಮ್ಮ ಜೀವಿತಕಾಲದಲ್ಲಿ ಶ್ರೀಗುರುರಾಜರ ಆರಾಧನಾ ತ್ರಿಶತಮಾನೋತ್ಸವವನ್ನು ಕಂಡಿಲ್ಲ. ಪಂಚಶತಮಾನೋತ್ಸವವನ್ನು ಕಾಣಲು ಸಾಧ್ಯವಿಲ್ಲ. ಆದ್ದರಿಂದ ಈಗ ಒದಗಿರುವ ಚತುಃಶತಮಾನೋತ್ಸವವು ನಮ್ಮ ಜೀವಿತದ ಪರಮಪರ್ವಕಾಲ ಎಂದು ಉದ್ಗಾರವೆತ್ತಿದರು. ಈ ಸಂದರ್ಭದಲ್ಲಿ ಅವರು ಪ್ರಸಕ್ತ ಉತ್ಸವಕ್ಕೆ ವಿಶೇಷ ಪ್ರೇರಕ ಶಕ್ತಿಯಾಗಿ, ಯೋಜನೆ ಮಾರ್ಗದರ್ಶನಗಳನ್ನು ಅನುಗ್ರಹಿಸಿದ ಉಡುಪಿ ಶ್ರೀಕೃಷ್ಣಾಪುರ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀವಿದ್ಯಾಸಾಗರತೀರ್ಥ ಶ್ರೀಪಾದಂಗಳವರಿಗೆ ಕೃತಜ್ಞತಾಪೂರ್ವಕ ಪ್ರಣಾಮಗಳನ್ನು ಸಲ್ಲಿಸಿದರು.

ಡಾ॥ ಗುರುರಾಜಾಚಾರ್ಯ, ಕೃ. ನಿಪ್ಪಾಣಿಯವರು ಪ್ರಾಸ್ತಾವಿಕ ಭಾಷಣ ಮಾಡಿದರು. 'ಶತಾನಂದ' ಶಬ್ದವಾಚ್ಯತ್ವ, ಶತಪತ್ರಾಸೀನತ್ವ ಹಂಸಾರೂಢತ್ವ, ಶ್ವಾಸನಿಯಾಮಕತ್ವಾದಿ ಮಹಿಮೋಪೇತ ಋಜುಪುಂಗವರಾದ ಶ್ರೀಗುರುರಾಜರ ಶತಮಾನೋತ್ಸವದಲ್ಲಿ ಅವರ ಋಜುಮಹಿಮೆ ಹಾಗೂ ಗ್ರಂಥವೈಭವಗಳನ್ನು ಮನನ ಮಾಡುವುದು ಅವಶ್ಯ ಕರ್ತವ್ಯವಾಗಿದೆ. ಉಡುಪಿ ಶ್ರೀಕೃಷ್ಣದೇವರ ಚತುರ್ಥಪೂಜಾಪರ್ಯಾಯ ಮಹೋತ್ಸವವನ್ನು ಪೂರ್ಣಗೊಳಿಸಿ "ಯದುಚಕ್ರವರ್ತಿ" ಎಂಬ ಬಿರುದಿಗೆ ಪಾತ್ರರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥಶ್ರೀಪಾದಂಗಳವರು ಶ್ರೀರಾಜರ ಚತುಃಶತಮಾನೋತ್ಸವವನ್ನು ತಮ್ಮ ಚತುರ್ಥ ಪರ್ಯಾಯಕಾಲದಲ್ಲಿ ಸಂಕಲ್ಪಿಸಿ ಇಂದು ನೆರವೇರಿಸುತ್ತಿದ್ದಾರೆ.

ಸ್ವಾಪ್ನವೃಂದಾವನಾಖ್ಯಾನದಲ್ಲಿ ಉಕ್ತವಾದ ಆಜ್ಞೆಗಳು ಕಾಲಕ್ರಮದಲ್ಲಿ ನಿರ್ದಿಷ್ಟ ಮಹನೀಯರಿಂದ ನೆರವೇರಿದ ನಿದರ್ಶನಗಳು ಇತಿಹಾಸ ಪ್ರಸಿದ್ಧವಾಗಿವೆ. ಶ್ರೀ ವೇದನಿಧಿಗಳ ಕಾಲದಲ್ಲಿ ಅಣುವೃಂದಾವನಾಖ್ಯಾನ ಶಿಲಾಲೇಖ, ಅದಕ್ಕೆ ಪ್ರತಿಮಾತ್ವೇನ ನಿತ್ಯಪೂಜೆ, ಶ್ರೀಹಂಸವಾಹನಾರೂಢರಾಜರ ಪ್ರತಿಮಾಯುಕ್ತ ಧ್ವಜಸ್ತಂಭ ಸ್ಥಾಪನೆ, ಆಖ್ಯಾನದ ಅಧ್ಯಾಯ ವಿಭಾಗೀಕರಣ ಇತ್ಯಾದಿಗಳು ನಡೆದಿವೆ.

ಶ್ರೀವೃಂದಾವನಾಚಾರ್ಯರಿಗೆ ವಿಪ್ರಜನ್ಮದಲ್ಲಿ ಸ್ವಪ್ನಮುಖೇನ ಶ್ರವಣ, ಶ್ರೀವೃಂದಾವನಾಚಾರ್ಯರಾದಾಗ ಶ್ರೀರಾಜರಿಂದಲೇ ಉಪದೇಶ, ಆಖ್ಯಾನದಲ್ಲಿ ಪ್ರಕರಣಗಳ ವ್ಯವಸ್ಥೆ, ಪ್ರಚಾರ ಹಾಗೂ ವ್ಯಾಖ್ಯಾನ ಮತ್ತು ಪ್ರಾಮಾಣ್ಯ ಸಮರ್ಥಕ ಗ್ರಂಥಗಳನ್ನು ರಚನೆ ಮಾಡಿಸುವಿಕೆ, ವ್ಯಾಸಾನಯನ ಇತ್ಯಾದಿಗಳು ಕಂಡುಬಂದಿವೆ.

ಶ್ರೀವೃಂದಾವನಾಚಾರ್ಯರಿಂದ ೧೩೫ ವರ್ಷಗಳ ನಂತರ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ ಪರ್ಯಾಯ ಕಾಲದಲ್ಲಿ ಆಖ್ಯಾನದ ಪುನರ್ಮುದ್ರಣ ಪೂರ್ಣಗೊಂಡು ಶಿಲಾಲೇಖದ ಸಂಕಲ್ಪ ನೆರವೇರಿದ್ದು ಈಗ –

> ಇಮಾಂ ಕೃತಿಂ ಶಿಲಾಯಾಂ ತು ಲೇಖಯಿತ್ವಾ ಮಮಾಗ್ರತಃ ।
> ಸ್ಥಾಪಯೇದತ್ರ ತಾಂ ದೃಷ್ಟ್ವಾ ಸಂತಃಸಂತೋಷಮಾಪ್ನುಯುಃ ॥ (೧೦ನೇ ಅಧ್ಯಾಯ ೭೫ನೇ ಶ್ಲೋಕ) ಎಂಬಂತೆ.

ಅಖ್ಯಾನವನ್ನು ಸಂಪೂರ್ಣವಾಗಿ ಶಿಲೆಯಲ್ಲಿ ಬರೆಸಿ ನನ್ನ ಎದುರಿಗೆ ಸ್ಥಾಪಿಸಬೇಕು ಎಂಬ ಶ್ರೀರಾಜರ ಆಜ್ಞೆ ಪೂರ್ಣಗೊಂಡಿದೆ. ಆಖ್ಯಾನದ ಮಾತುಗಳು ಯೋಗ್ಯವ್ಯಕ್ತಿಗಳಿಂದ ಕಾಲಕ್ರಮದಲ್ಲಿ ಸತ್ಯವಾಗುತ್ತವೆ ಎಂಬುದಕ್ಕೆ ಆಖ್ಯಾನಮಂದಿರ ರಚನೆ ಒಂದು ಉತ್ತಮ ನಿದರ್ಶನವಾಗಿದೆ. ಆಖ್ಯಾನಮಂದಿರವೂ ಶ್ರೀರಾಜರ ವೃಂದಾವನದಂತೆಯೇ ಅವರ ಅಚಲ ಪ್ರತಿಮೆಯಾಗಿ ಪೂಜಾರ್ಹವಾಗಿದೆ, ಮುಂತಾದ ವಿಚಾರಗಳನ್ನು ತಿಳಿಸಿದರು.

ಪರಮಪೂಜ್ಯ ಶ್ರೀಶ್ರೀಗಳವರು ಜ್ಯೋತಿ ಬೆಳಗುವ ಮೂಲಕ ಜ್ಞಾನಸತ್ರ ಉತ್ಸವವನ್ನು ಉದ್ಘಾಟಿಸಿದರು.

ಪ್ರವಚನ ಮಾಲಿಕೆಯ ಆರಂಭದಲ್ಲಿ ವಿದ್ವಾನ್ ಬಿ.ಪಿ. ನಾಗಭೂಷಣರಾಯರು, ತುಮಕೂರು ಇವರು ಸ್ವಾಪ್ನವೃಂದಾವನಾಖ್ಯಾನದ ಬಗ್ಗೆ ಉಪನ್ಯಾಸ ನೀಡಿದರು. ೨೨ ಅಧ್ಯಾಯಗಳಲ್ಲಿ ೨೨೫೮ ಶ್ಲೋಕಗಳಲ್ಲಿ ವೇದಗಳ ಸಾರರೂಪವಾಧ ಸರ್ವಸಿದ್ಧಿಪ್ರದವಾದ ಆಖ್ಯಾನವು ವೃಂದಾವನ ಪ್ರವೇಶಾ ನಂತರ ಶ್ರೀರಾಜರಿಂದಲೇ ರಚಿತವಾದುದು. ಇದರಲ್ಲಿ ಭಜನಪರ್ವ (ದೇವತಾಸ್ತೋತ್ರಗಳು, ದೇವತೆಗಳಿಂದಾದ ಸನ್ಮಾನಗಳು, ಧವಲಗಂಗಾ ಹಾಗೂ ವೃಂದಾವನಾದಿ ಮಹಿಮೆಗಳು), ವೈಭವಪರ್ವ (ಭೌಮ, ದಿವ್ಯ, ಭಾಕ್ತ, ಭಾಗವತ), ನಿದರ್ಶನಪರ್ವ (ವಿವಿಧ ಭಕ್ತರಿಗೆ ಉಪದೇಶ, ಭವಿಷ್ಯ ಸೂಚನೆ) ಎಂಬ ಮೂರುಪರ್ವಗಳಿದ್ದು ಅವುಗಳಲ್ಲಿ ಪರಸ್ಪರ ಸಂಬಂಧವಿದೆ. ಆಖ್ಯಾನದ ಪ್ರಾಮಾಣ್ಯವು ಆಖ್ಯಾನದಲ್ಲೇ ಇದೆ. ಏಕೆಂದರೆ ನಿದರ್ಶನವೇ ಪ್ರಬಲ ಪ್ರಮಾಣವಾಗಿದೆ.

"ಸಮಗ್ರ ವೃಂದಾವನಾಖ್ಯಾನವನ್ನು ಶಿಲೆಯಲ್ಲಿ ಕೆತ್ತಿಸಿ ನನ್ನ ವೃಂದಾವನದ ಮುಂದೆ ಪ್ರತಿಷ್ಠಾಪಿಸಬೇಕು" ಎಂಬುದು ಆಖ್ಯಾನಗತ ಆಜ್ಞೆ, ಇದನ್ನು ಅನುಸರಿಸಿಯೇ ಆಖ್ಯಾನಮಂದಿರ ನಿರ್ಮಾಣ ನಡೆದಿದೆ. ಆಖ್ಯಾನಗತ ಸ್ವರ್ಣವರ್ಣ ಎಂಬ ಪದ ಶ್ರೀ "ವಿಶ್ವೋತ್ತಮ" ಎಂಬ ಅರ್ಥವನ್ನೇ ಸೂಚಿಸುತ್ತದೆ ಎಂದು ಅವರು ವಿವರಿಸಿದರು.

ಉದ್ಘಾಟನೆಯ ಅಂಗವಾಗಿ ಶ್ರೀಶ್ರೀಗಳವರು ಅನುಗ್ರಹ ಭಾಷಣ ಮಾಡುತ್ತಾ "ಶ್ರೀರಾಜರ– ಆಚಾರ್ಯಮಧ್ವರ ಹಯಗ್ರೀವದೇವರ ಆರಾಧನೆ ಪ್ರತಿದಿನವೂ, ಪ್ರತಿಕ್ಷಣವೂ ನಡೆಯಬೇಕಾದುದು.

ಜ್ಞಾನಕಾರ್ಯಕ್ಕೆ ಹೆಚ್ಚಿನ ಸಮಯ ಒದಗಿಸಲು ಶ್ರೀರಾಜರ ಆರಾಧನೆಯ ನಂತರ ಒಂದು ತಿಂಗಳಿಗೆ ಸರಿಯಾಗಿ ಈ ಉತ್ಸವವನ್ನು ನೆರವೇರಿಸಿದ್ದೇವೆ. ಇದರ ಕೀರ್ತಿ ನಿಮಗೆ, ನಾವು ಸಂತೋಷಪಡುವವರು ಮಾತ್ರ" ಎಂದು ಹರಸಿದರು.

"ನ ವ್ಯುತ್ಪತ್ತ್ಯಾ ನ ಟೀಕಯಾ" ಎಂಬಂತೆ ಆಖ್ಯಾನಗ್ರಂಥ ಕೇವಲ ಪಾಂಡಿತ್ಯದಿಂದ ತಿಳಿಯದು. ಅದನ್ನು ಅರಿಯಲು ಶ್ರೀರಾಜರ ಅನುಗ್ರಹವೂ ಅಗತ್ಯ ಎಂದು ಅಭಿಪ್ರಾಯಪಟ್ಟರು.

೧೯-೪-೨೦೦೦ ಮಧ್ಯಾಹ್ನದ ಪ್ರವಚನ ಕಾರ್ಯದಲ್ಲಿ ವಿದ್ವಾನ್ ಸಂಜೀವಮೂರ್ತಿದಾಸರು, ಚಿಕ್ಕೇರಹಳ್ಳಿ, ಇವರು ಕಲ್ಯಾವೇಶರಹಿತರಾದ, ಸ್ವಯಂಸಂಶಯರಹಿತರಾದ, ಭಕ್ತಸಂಶಯನಿವಾರಕರಾದ, ಋಜುಗಣಸ್ಥರಾದ, ಆಖ್ಯಾನಕರ್ತರಾದ, ಶ್ರೀ ಗುರುರಾಜರು ರಚಿಸಿದ 'ಚಿಂತಾಖಂಡನ' ಸ್ತೋತ್ರ ಹಾಗೂ 'ಧೀಶುದ್ಧಿಸ್ತೋತ್ರಗಳ' ಬಗ್ಗೆ ವಿವರಿಸಿದರು. ಭಗವಂತ ಸ್ವತಂತ್ರಕರ್ತ. ನಮ್ಮ ಕರ್ಮಕ್ಷಯಕ್ಕಾಗಿ ನಮ್ಮ ಕರ್ಮಾನುಸಾರ ಸುಖದುಃಖಗಳನ್ನು ನೀಡುತ್ತಾನೆ. ಅತಿಮಹತ್ವಾಕಾಂಕ್ಷೆ ವಿನಾಶಕ್ಕೆ ಕಾರಣವಾದೀತು – ಇತ್ಯಾದಿ ವಿಚಾರಗಳನ್ನು ನಿರೂಪಿಸಿದರು.

ವಿದ್ವಾನ್ ಆನಂದ ತೀರ್ಥಾಚಾರ್ಯ, ಆತ್ಮಾಕೂರು ಇವರು "ಶ್ರೀವಾದಿರಾಜಋಜುತ್ವತತ್ವಸಮರ್ಥನೆಯ" ಉಪನ್ಯಾಸ ನೀಡಿದರು. "ಸೀತಾಸೀತೇ" ಎಂಬ ಶ್ರುತಿ, ಬೃಹತ್ಸಂಹಿತೆ, ನಾರಾಯಣಸಂಹಿತೆ, ಪ್ರಕಾಶಸಂಹಿತೆ, ಲಕ್ಷ್ಮೀಸಂಹಿತೆ, ಪ್ರಣವೋಪನಿಷತ್ತು, ಸ್ವಾಪ್ನವೃಂದಾವನಾಖ್ಯಾನ, ಶ್ರೀವಿಜಯದಾಸರ ಉಕ್ತಿ ಹಾಗೂ ಜಂಬುಖಂಡೀವಾದಿರಾಜಾಚಾರ್ಯರು ನೀಡಿರುವ ಪ್ರಮಾಣಗಳನ್ನು ಉದಾಹರಿಸಿದ್ದು ಜಿಜ್ಞಾಸುಗಳಿಗೆ ಹಾಗೂ ಶ್ರೀರಾಜರ ಋಜುತ್ವೋಪಾಸಕರಿಗೆ ಉಪಕಾರವಾಗಿತ್ತು.

ವಿದ್ವಾನ್ ಬಾಟ್ನಿ ರಾಮಚಂದ್ರರಾವ್, ತುಮಕೂರು, ಇವರು "ಶ್ರೀರಾಜರ ವ್ಯಕ್ತಗ್ರಂಥಗಳಲ್ಲಿಯ ಅದ್ಭುತತತ್ವ ತನ್ಮುಖೇನ ಮಧ್ವಸಾದೃಶ್ಯ (ಋಜುತ್ವ)" ಎಂಬ ವಿಷಯವಾಗಿ ಮಾತನಾಡಿ ಶ್ರೀಮದಾಚಾರ್ಯರ ಹಾಗೂ ಶ್ರೀಗುರುರಾಜರ ಗ್ರಂಥಗಳಲ್ಲಿ ಕಂಡುಬರುವ ಸಾದೃಶ್ಯಾಂಶಗಳನ್ನು ವಿವರಿಸಿದರು. ಆಚಾರ್ಯರು ಇಷ್ಟಸಿದ್ಧಿಯ ಆದಿಪದ್ಯದಲ್ಲೇ ೩೨ ದೋಷಗಳನ್ನು ತೋರಿಸಿದ ರೀತಿಯಲ್ಲಿ ಶ್ರೀರಾಜರು ತಮ್ಮ "ವಿವರಣ ವ್ರಣ" ಎಂಬ ಗ್ರಂಥದಲ್ಲಿ 'ವಿವರಣ' ಎಂಬ ಜೈನಮತಗ್ರಂಥದ ಆದಿಪದ್ಯದ ಅಸಂಬದ್ಧತೆಯನ್ನು ತೋರಿಸಿಕೊಟ್ಟ ಬಗೆಯನ್ನು ಮನೋಜ್ಞವಾಗಿ ನಿರೂಪಿಸಿದರು.

ಮ॥ಶಾ॥ಸಂ॥ ಹರಿನಾರಾಯಣದಾಸರು (ಹನುಮಂತರಾಯರು) ಹೈದರಾಬಾದ್ ಇವರು ಪಂಚವೃಂದಾವನ ಸನ್ನಿಧಿ, ಧವಲಗಂಗಾತೀರ್ಥ ಹಾಗೂ ಸ್ವಾಪ್ನವೃಂದಾವನಾಖ್ಯಾನ ಹೋಮಗಳ ಮಹತ್ವ ಹಾಗೂ ಅಲ್ಲಿ ಮಾಡಬೇಕಾದ ಅನುಸಂಧಾನವನ್ನು ವಿವರಿಸಿದರು. ಶ್ರೀಗುರುರಾಜರ ಪೀಠದಲ್ಲಿ ಕಂಗೊಳಿಸುತ್ತಿರುವ ಶ್ರೀಶ್ರೀಗಳವರಲ್ಲಿ ನಾವು ಭಕ್ತಿ ಸಲ್ಲಿಸಬೇಕಾದ ಕ್ರಮ ಹಾಗೂ ಅದರಿಂದ ಉಂಟಾಗುವ ಅನುಗ್ರಹವನ್ನು ತಿಳಿಸಿದರು.

ವಿದ್ವಾನ್ ಖೇಡ ವೇದವ್ಯಾಸಾಚಾರ್ಯ, ಬೆಂಗಳೂರು, ಇವರು ಶ್ರೀರಾಜರ 'ಶ್ರೀರುಕ್ಮಿಣೀಶವಿಜಯ'ದ ಹಿರಿಮೆಯನ್ನು ಹೊಗಳಿ, 'ಸರಸಭಾರತೀವಿಲಾಸ'ದ ಭೀಮಸೇನದೇವರ ಋಜುತ್ವ ಪ್ರತಿಪಾದನೆಯ ಘಟ್ಟವನ್ನು ಶ್ರೀಮನ್ಮಹಾಭಾರತ ಸಭಾಪರ್ವದ ಕಥಾನಕದೊಂದಿಗೆ ವಿವರಿಸಿದರು. ಉದ್ವೇಗಾದಿದೋಷರಹಿತರಾದ ಶ್ರೀಭೀಮಸೇನದೇವರು ಅವಮಾನ ಆದಂತೆ

ಕಾಣುವ ಪ್ರಸಂಗ ಬಂದಾಗಲೂ ಶ್ರೀಹರಿಯಚಿತ್ತವನ್ನು ಅರಿತೇ ಸುಮ್ಮನಿದ್ದರು ಎಂಬ ತತ್ವವನ್ನು ಒತ್ತಿ ಹೇಳಿದರು.

ಸರಸಭಾರತೀವಿಲಾಸದಲ್ಲಿ ಕಲ್ಪಾಂತರದ ಛಾಂದೋಗ್ಯದ ಮಾತನ್ನು ಉದಾಹರಿಸಿರುವ ಕಾರ್ಯವು ಶ್ರೀರಾಜರ ಋಜುತ್ವಕ್ಕೆ ಅರ್ಥಾಂತರ ಕಲ್ಪನೆಗೆ ಅವಕಾಶವಿಲ್ಲದ ನಿರವಕಾಶ ಪ್ರಬಲ ಪ್ರಮಾಣವಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ತಮ್ಮ ತಂದೆಯವರು ಆಖ್ಯಾನಪಾರಾಯಣ ಮಾಡುತ್ತಿದ್ದುದನ್ನು ಸ್ಮರಿಸಿದ ಅವರು "ಋಜುಗಳನ್ನು ಋಜುಗಳೆಂದು ಹೇಳಲು ಕಷ್ಟವಿರುವ ಕಾಲದಲ್ಲಿ ನಾವು ಮಾಡುವ ತಪ್ಪನ್ನು ರಾಜರು ಕ್ಷಮಿಸಲಿ" ಎಂದು ಉದ್ಗಾರವೆತ್ತಿದರು.

ತೀರ್ಥ ಪ್ರಬಂಧದಲ್ಲಿ 'ಕ್ರೋಡನಾರಾಯಣ' ಕ್ಷೇತ್ರದ ಬಗ್ಗೆ ಹೇಳುವಾಗ ಶ್ರೀರಾಜರು 'ಜೀವೇಶಭೇದ' ಹಾಗೂ 'ಹರಿಸರ್ವೋತ್ತಮತ್ವ'ವನ್ನು ಸಮರ್ಥಿಸಿದ ಬಗೆಯನ್ನು ತಿಳಿಸಿದರು.

'ಶ್ರೀ ವಾದಿರಾಜರ ಕೃತಿಗಳು' ಧ್ವನಿಸುರುಳಿ ಮಾಲಿಕೆಯ ಮೂಲಕ ಶ್ರೀರಾಜರ ಭಕ್ತರಿಗೆ ಚಿರಪರಿಚಿತರಾಗಿರುವ ಬೆಂಗಳೂರಿನ ಶಾರದಾ ಕಲಾಕೇಂದ್ರದ ವಿದ್ವಾನ್ ಆರ್.ಕೆ. ಪದ್ಮನಾಭ ಹಾಗೂ ವಿದ್ವಾನ್ ಡಿ.ವಿ. ನಾಗರಾಜನ್ ಇವರು ಗುರುರಾಜರ ಕೆಲವು ಕನ್ನಡ ಕೀರ್ತನೆಗಳು ಸುಶ್ರಾವ್ಯಗಾಯನ ಮಾಡಿದರು. ಈ ಸಂದರ್ಭದಲ್ಲಿ ಶ್ರೀ ಶ್ರೀಗಳವರು ವಿದ್ವಾನ್ ॥ ಆರ್.ಕೆ. ಪದ್ಮನಾಭ ಇವರಿಗೆ "ಶ್ರೀವಾದಿರಾಜ ಕೃತಿರತ್ನ ಗಾನವಿಶಾರದ" ಎಂಬ ಬಿರುದನ್ನು ನೀಡಿ ಸನ್ಮಾನಿಸಿದರು. ಬೆಂಗಳೂರಿನ ಮತ್ತೊಬ್ಬ ವಿಖ್ಯಾತ ಸಂಗೀತಗಾರರಾದ ವಿದ್ವಾನ್ ಕೃಷ್ಣಮೂರ್ತಿ ಇವರಿಗೆ "ಸಂಗೀತಶಾಸ್ತ್ರರತ್ನಾಕರ" ಎಂಬ ಬಿರುದನ್ನು ನೀಡಿ ಸನ್ಮಾನಿಸಿದರು.

೨೦-೪-೨೦೦೦ ಪ್ರಾತಃಕಾಲ - ಆಖ್ಯಾನ ಹೋಮದ ಪೂರ್ಣಾಹುತಿ ಕಾರ್ಯಕ್ರಮವು ಪೂಜ್ಯ ಶ್ರೀಗಳವರ ದಿವ್ಯಉಪಸ್ಥಿತಿಯಲ್ಲಿ ಹಾಗೂ ಸಹಸ್ರಾರು ಭಕ್ತರು ಸಮ್ಮುಖದಲ್ಲಿ ನಡೆದು ಪೂರ್ಣಫಲಪ್ರದಯವಾಯಿತು. ಆಖ್ಯಾನಮಂದಿರದ ಸಮರ್ಪಣೆಯ ಕಾರ್ಯವು ಪರಮಪೂಜ್ಯ ಶ್ರೀಗಳವರಕರಕಂಜದಿಂದ ಪೂಜಾವಿಧಾನರೂಪೇಣ ಅತ್ಯಂತ ವೈಭವದಿಂದ ನೆರವೇರಿತು. ತುಮಕೂರಿನ ಬಿ.ಪಿ. ನಾಗಭೂಷಣರಾವ್ ಇವರು ಶ್ರೀ ಹಯಗ್ರೀವದೇವರು ಹಾಗೂ ಶ್ರೀಗುರುರಾಜರಿಗೆ ಶ್ರೀಶ್ರೀಗಳವರ ಮೂಲಕ ಸಮರ್ಪಿಸಿ ಪಡೆದ ಹವಳ, ಮುತ್ತು ಇತ್ಯಾದಿಗಳಿಂದ ಆಖ್ಯಾನಮಂದಿರ ಸಮರ್ಪಣೆಯ ಮಹೋತ್ಸವದ ಅಂಗವಾಗಿ ಶ್ರೀಸೋದಾಮಠಾಧೀಶರಾದ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರಿಗೆ "ರತ್ನಾಭಿಷೇಕ" ಮಹೋತ್ಸವವನ್ನು ನೆರವೇರಿಸಿ, ಪೀತಾಂಬರ ಹಾಗೂ ಫಲಪುಷ್ಪಗಳನ್ನು ಸಮರ್ಪಿಸಿದರು. ಈ ದೃಶ್ಯ ಭಕ್ತಜನರ ಕಣ್ಮನಗಳನ್ನು ತಣಿಸಿ ಧನ್ಯರನ್ನಾಗಿಸಿತು.

ಮಧ್ಯಾಹ್ನ ತೀರ್ಥಪ್ರಸಾದ ನಂತರ ಆಬಾಲವೃದ್ಧರೂ, ಶ್ರೀಗುರುರಾಜರ ಭಕ್ತರಾದ ಹೆಜಮಾಡಿ ಶ್ರೀನಿವಾಸರಾವ್ ಹಾಗೂ ಅವರ ಪುತ್ರರಾದ ಹೆಜಮಾಡಿ ರಮೇಶರಾಯರು ಹೆಲಿಕಾಪ್ಟರ್ ಮೂಲಕ ನಡೆಸಿದ ಪುಷ್ಪವೃಷ್ಟಿಯ ವಿಶೇಷ ಸೇವೆಯನ್ನು ವೀಕ್ಷಿಸಲು ಸಡಗರ ಸಂಭ್ರಮಗಳಿಂದ ಸಿದ್ಧರಾಗಿದ್ದರು. ವಾದ್ಯಘೋಷ, ವೇದಪಾರಾಯಣ, ದೇವರನಾಮಗಳ ಗಾಯನ ನಡೆಯುತ್ತಿರಲು ಅಲಂಕೃತ ರಜತಪಲ್ಲಕ್ಕಿಯಲ್ಲಿ ಸರ್ವಮೂಲ ಹಾಗೂ ಆಖ್ಯಾನಾದಿ ಗ್ರಂಥಗಳನ್ನಿರಿಸಿ ಶ್ರೀರಮಾತ್ರಿವಿಕ್ರಮದೇವಸ್ಥಾನ, ಶ್ರೀಭೂವರಾಹ-ಹಯಗ್ರೀವ-

ವೇದವ್ಯಾಸದೇವರುಗಳ ಪೂಜಾಮಂದಿರ, ಧವಳಗಂಗಾ, ಶ್ರೀರಾಜರ ಪಂಚವೃಂದಾವನ ಸನ್ನಿಧಾನ ಹಾಗೂ ಆಖ್ಯಾನಮಂದಿರಗಳ ಸುತ್ತ ಶ್ರೀಶ್ರೀಗಳವರ ನೇತೃತ್ವದಲ್ಲಿ ಪ್ರಾಕಾರೋತ್ಸವ ನಡೆಯುತ್ತಿರುವಾಗ ಶ್ರೀಶ್ರೀಗಳವರ ಅಪ್ಪಣೆಯ ಮೇರೆಗೆ ಮೇಲೆ ಹೆಲಿಕ್ಯಾಪ್ಟರ್‌ನಲ್ಲಿ ವಿದ್ವಾನ್ ಆತ್ಮಕೂರು ಆನಂದತೀರ್ಥಾಚಾರ್ಯರು ಹಾಗೂ ವಿದ್ವಾನ್ ಕೆ.ಎಲ್. ಪುಷ್ಕರಾಚಾರ್ಯರು ಆಖ್ಯಾನ ಪಾರಾಯಣ ಮಾಡುತ್ತಿರುವಾಗ ಸೇವಾಕರ್ತರಾದ ಹೆಜಮಾಡಿ ಬಂಧುಗಳು ಆರುಸುತ್ತಿನಲ್ಲಿ ಪುಷ್ಪವೃಷ್ಟಿ ಮಾಡಿದರು. ಸೋದೆಯ ಪರಿಸರವೆಲ್ಲ ಸೇವಂತಿಗೆ, ಮಲ್ಲಿಗೆ, ಗುಲಾಬಿ ಹಾಗೂ ಮರುಗಗಳಿಂದ ವ್ಯಾಪಿಸಿ ಕಂಪೇರಿತು. ಇದೊಂದು ಅವಿಸ್ಮರಣೀಯ ಭವ್ಯ ದೃಶ್ಯವಾಗಿತ್ತು.

ಶ್ರೀ ಶ್ರೀಗಳವರು ಅನುಗ್ರಹಭಾಷಣ ಮಾಡುತ್ತಾ "ದೈವಾನುಗ್ರಹದಿಂದ ಶ್ರೀರಾಜರ ಚಿತ್ತದಂತೆ ಆಖ್ಯಾನದ ಪಾಠಶೋಧನೆ, ಪುನರ್ಮುದ್ರಣ ಹಾಗೂ ಶಿಲಾಲೇಖಕಾರ್ಯಗಳು ನಿರಾಯಾಸವಾಗಿ ನೆರವೇರಿದ ಬಗ್ಗೆ ತೃಪ್ತಿ ವ್ಯಕ್ತಪಡಿಸಿದರು. ಈ ಎಲ್ಲ ಕಾರ್ಯಗಳಲ್ಲಿ ಶ್ರೀಕೃಷ್ಣಾಪುರ ಶ್ರೀಗಳವರ ತುಂಬ ಶ್ರಮವಹಿಸಿದ್ದಾರೆ. ಆತ್ಮಕೂರು ಆನಂದತೀರ್ಥಾಚಾರ್ಯರು, ನಿಪ್ಪಾಣಿ ಗುರುರಾಜಾಚಾರ್ಯರು, ಸೋದೆಯ ಅರಣ್ಯಪ್ರದೇಶದಲ್ಲಿ ಕಷ್ಟಸಾಧ್ಯವಾದ ಆಖ್ಯಾನಮಂದಿರದ ರಚನೆ ಹಾಗೂ ಶಿಲಾಲೇಖನಗಳಲ್ಲಿ ತಪಸ್ಸಿನಂತೆ ದೀಕ್ಷಾಬದ್ಧರಾಗಿ ಕಾರ್ಯನಿರ್ವಹಿಸಿದ್ದಾರೆ.

ಸ್ಮರಣಸಂಚಿಕೆ ಕೇವಲ ತಾತ್ಕಾಲಿಕವಾಗದಂತೆ, ಶಾಶ್ವತಸಂಗ್ರಹಯೋಗ್ಯವಾಗುವಂತಾಗಲು ನಾಗರಾಜ ಧನ್ಯ, ನಿಪ್ಪಾಣಿ ಗುರುರಾಜಾಚಾರ್ಯ, ಬೆಂಗಳೂರಿನ ಹರಿಸರ್ವೋತ್ತಮ ಹಾಗೂ ಪ್ರಿಂಟ್ ಮೀಡಿಯಾದ ಸಹೋದರರರೆಲ್ಲರೂ ನಿರ್ವಹಿಸಿದ ಕಾರ್ಯ ವಿಶೇಷವಾದುದು.

ಶ್ರೀ ಗುರುರಾಜರ ಆರಾಧನಾ ಚತುಃಶತಮಾನೋತ್ಸವದಲ್ಲಿ ಅನೇಕ ಋಜುತ್ವ ಸಮರ್ಥಕ ಪ್ರಮಾಣಗಳು ದೊರೆತಿರುವುದು ಒಂದು ಯೋಗಾಯೋಗ. ಜಂಬುಖಂಡೀ ವಾದಿರಾಜಚಾರ್ಯರ ಸಂಗ್ರಹ ನಿಪ್ಪಾಣಿ ಆಚಾರ್ಯರ ಮೂಲಕವೂ, ಮೈಸೂರಿನ ಕಾಶಿ ರಾಘವೇಂದ್ರಾಚಾರ್ಯರು ಸಂಗ್ರಹ ಪುಷ್ಕರಾಚಾರ್ಯರ ಮೂಲಕವೂ ಹಾಗು ಶ್ರುತಿ, ಸ್ಮೃತಿ, ಪುರಾಣಾದಿ ಸಂಬಂಧಿ ಶತಾಧಿಕ ಪ್ರಮಾಣಗಳು ಆತ್ಮಕೂರಿನ ಆನಂದತೀರ್ಥಾಚಾರ್ಯರ ಮೂಲಕವೂ ಬೆಳಕಿಗೆ ಬಂದಿವೆ. ಇದು ಶ್ರೀರಾಜರ ಚಿತ್ತ ! ಎಂದು ಶ್ರೀಶ್ರೀಗಳವರು ಅಪ್ಪಣೆ ಕೊಡಿಸಿದರು.

ಡಾ॥ ಹೆಚ್.ಜಿ. ಲೋಕೂರ, ಬೆಳಗಾವಿ ಇವರು ಶ್ರೀವಾದಿರಾಜರ ಕನ್ನಡ ಕೃತಿಗಳನ್ನು ಕುರಿತಂತೆ ಸಂಶೋಧನಾತ್ಮಕವಾಗಿ ಮಾತನಾಡಿದರು. ಶ್ರೀಕೃಷ್ಣಬಾಲಲೀಲೆ ಹಾಗೂ ಅವತಾರತ್ರಯ ಸುವ್ವಾಲಿಯ ಬಗ್ಗೆ ವಿವರಿಸಿದರು. ಸೋದೆಯ ರಮಾತ್ರಿವಿಕ್ರಮ ದೇವಾಲಯದ ಮುಂಭಾಗದಲ್ಲಿರುವ ಧ್ವಜಸ್ತಂಭಸ್ಥ ಶ್ರೀರಾಜರ ಹಂಸವಾಹನಾರೂಢ ಪ್ರತಿಮೆಯ ಮಹಿಮೆಯ ಪ್ರಸ್ತಾಪವು ಮುಂಬಯಿ ಗೆಜೆಟಿಯರ್ ನಲ್ಲಿರುವುದಾಗಿ ತಿಳಿಸಿದರು. ಶ್ರೀರಾಜರ ಸಮಗ್ರ ಸಂಸ್ಕೃತ ಕೃತಿಗಳನ್ನು 'ಸರ್ವಮೂಲ'ದಂತೆ ಏಕಗಾತ್ರದ ಸಂಪುಟಗಳನ್ನಾಗಿ ಹೊರತರಲು ಸಲಹೆ ನೀಡಿದರು.

ವಿದ್ವಾನ್ ಕೆ. ಹರಿದಾಸ ಉಪಾಧ್ಯಾಯ ಉಡುಪಿ, ಇವರು ಆಖ್ಯಾನುಗ್ರಂಥದ ಪ್ರಾಮಾಣ್ಯ ವಿಚಾರದಲ್ಲಿ 'ಸ್ವಪ್ನಸತ್ಯತ್ವ' ವನ್ನು ಸಮರ್ಥಿಸಿದ ಮುಖ್ಯಾಂಶಗಳು ಹೀಗಿವೆ : ಸ್ವಪ್ನವು ಭ್ರಾಂತಿಗೆ ಕಾರಣವಲ್ಲವೆ ? ಒಂದೊಮ್ಮೆ ಸತ್ಯವಾದರೆ ಅನಾದಿಯೋ ? ನಿತ್ಯವೋ ? ಸ್ವಪ್ನ ಮನಸ್ಸಿನ ಒಳಗೋ ? ಹೊರಗೋ ? ಇತ್ಯಾದಿ ಪೂರ್ವಪಕ್ಷಗಳು ಹಾಗೂ ಅವುಗಳಿಂದ ಮೂಡುವ ಉಪಪ್ರಶ್ನೆಗಳನ್ನು ವಿಶ್ಲೇಷಿಸಿ ಸಮಾಧಾನ ನೀಡಿದರು.

ಸ್ವಪ್ನ ಆದ್ಯಂತವುಳ್ಳದ್ದಾದರೂ ಸತ್ಯ. ವಿದ್ಯುತ್ತಿನಂತೆ. "ಜೀವಿಯ ಮನೋಗತ ಸಂಸ್ಕಾರಗಳನ್ನು ಪರಮೇಶ್ವರನು ಸ್ವೇಚ್ಛೆಯಿಂದ ಪ್ರದರ್ಶಿಸುವುದೇ ಸ್ವಪ್ನ" ಎಂದು ಶ್ರೀರಾಯರು ಸ್ವಪ್ನಕ್ಕೆ ವ್ಯಾಖ್ಯೆ ನೀಡಿದ್ದಾರೆ. ಮನಸ್ಸು ಅನಾದಿ, ಸಂಸ್ಕಾರ ಅನಾದಿ. ಆದ್ದರಿಂದ ಈ ಜನ್ಮದಲ್ಲಿ ಕಾಣದ, ಕೇಳದ ವಸ್ತುವಿಷಯಗಳನ್ನು ಸ್ವಪ್ನದಲ್ಲಿ ಕಾಣಲು ಸಾಧ್ಯವಿದೆ. ಅದು ಮಿಥ್ಯೆಯಲ್ಲ. ಸತ್ಯಭೂತವಾದುದು. ಉದಾ : ರಾಮಾಯಣದಲ್ಲಿ ತ್ರಿಜಟೆಯ ಸ್ವಪ್ನ ಸತ್ಯವಾಗಿದೆ. ಆದ್ದರಿಂದ ಸ್ವಾಪ್ನವೃಂದಾವನಾಖ್ಯಾನವು ಶ್ರೀರಾಜರಿಂದಲೇ ರಚಿತವಾಗಿದೆ. ಮಂತ್ರತುಲ್ಯವಾಗಿದೆ. ಪರಮಪ್ರಮಾಣವಾಗಿದೆ. ಶ್ರೀರಾಜರ ಮಹಾತ್ಮ್ಯಜ್ಞಾನಪ್ರದಾಯಕ ಗ್ರಂಥವಾಗಿದೆ.

ವಿದ್ವಾನ್ ರಾಮಾಚಾರ್ಯ ಮಾಳಿಗಿ, ಮೈಸೂರು ಇವರು ಸಮಾರಂಭದ ಮಹತ್ವ ಹಾಗೂ ಇದರಲ್ಲಿ ಭಾಗವಹಿಸುತ್ತಿರುವ ಸುಯೋಗಕ್ಕಾಗಿ ಉಂಟಾದ ಆನಂದದಿಂದ, ಭಾವೋದ್ರೇಕದಿಂದ ಆನಂದಭಾಷ್ಪ ಸುರಿಸಿದರು. ಶ್ರೀಗುರುರಾಜರ 'ತತ್ವಪ್ರಕಾಶಿಕಾಗು ವರ್ಥದೀಪಿಕೆ'ಯ ತೃತೀಯಾಧ್ಯಾಯದ ವೈರಾಗ್ಯಪಾದ, ಭಕ್ತಿಪಾದ, ಉಪಾಸನಾಪಾದ ಹಾಗೂ ಜ್ಞಾನಪಾದಗಳನ್ನು ವಿವರಿಸಿದರು. ಶ್ರೀರಾಜರು ಈ ಗ್ರಂಥದಲ್ಲಿ ಟೀಕೆಗೆ, ಭಾಷ್ಯಕ್ಕೆ ವ್ಯಾಖ್ಯಾನ ರಚಿಸಿದ್ದಲ್ಲದೆ ಬ್ರಹ್ಮಸೂತ್ರಕ್ಕೂ ನೇರ ಅರ್ಥ ತಿಳಿಸಿ, ಹೊಸಹೊಸ ವಿಷಯಗಳನ್ನು ಔಚಿತ್ಯಪೂರ್ಣವಾಗಿ ಪ್ರತಿಪಾದಿಸಿರುವುದನ್ನು ಮನವರಿಕೆ ಮಾಡಿಕೊಟ್ಟರು.

ವಿದ್ವಾನ್ ಸಿ.ಆರ್. ರಘುನಂದನಾಚಾರ್ಯರು ಶ್ರೀವಾದಿರಾಜಗುರುವರೇಣ್ಯರ 'ತಲವಕಾರೋಪನಿಷದ್ಭಾಷ್ಯಟೀಕಾ'ದ ವೈಶಿಷ್ಟ್ಯ, ಅದರಲ್ಲಿ ಶ್ರೀಹರಿಯ ಸರ್ವೋತ್ತಮತ್ವ, ಶ್ರೀಮುಖ್ಯಪ್ರಾಣದೇವರ ಜೀವೋತ್ತಮತ್ವದ ಬಗ್ಗೆ ತಿಳಿಸಿದರು. ಶ್ರೀವಿಜಯದಾಸರು ಉದಾಹರಿಸಿದ ಬ್ರಹ್ಮಾಂಡಪುರಾಣದ ಪ್ರಮಾಣವನ್ನು ತಾವು ಶೋಧಿಸಿರುವುದಾಗಿ, ಆ ಬಗೆಗಿನ ಶ್ಲೋಕಗಳನ್ನು ಹೇಳಿದರು.

ವಿದ್ವಾನ್ ಎಸ್.ವಿ. ರಮೇಶಾಚಾರ್ಯ, ತುಮಕೂರು ಇವರು ಆಖ್ಯಾನದ ಪ್ರಥಮಶ್ಲೋಕವನ್ನು ಸಂಸ್ಥಾನದ ಅರ್ಚಾಮೂರ್ತಿಗಳ ಪರವಾಗಿ, ವಾಸುದೇವಾದಿ ರೂಪಚತುಷ್ಟಯಗಳ ಪರವಾಗಿ, ಆಖ್ಯಾನಗ್ರಂಥದ ಲಕ್ಷಣವಾಗಿ ವಿನೂತನ ರೀತಿಯಲ್ಲಿ ವ್ಯಾಖ್ಯಾನಿಸಿ ಸಭಿಕರನ್ನು ಪುಳಕಿತಗೊಳಿಸಿದರು. ಸರ್ವಾಧಿಷ್ಠಾನಗಳಲ್ಲಿ ನಮನವು ಋಜುತ್ವಕ್ಕೆ ಬಾಧಕವಲ್ಲ ಎಂಬುದನ್ನು ಶ್ರುತಿಪ್ರಮಾಣದಿಂದ ವಿವರಿಸಿದರು. 'ಲಾತವ್ಯೋಗೋತ್ರಃ' ಎಂಬ ಋಕ್ಕನ್ನ ತಿಳಿಸಿ ಸರ್ವಗೋತ್ರಪ್ರವರ್ತಕರಾದ ಋಷಿಗಳಿಗೆ ಶ್ರೀರಾಜರು ನಿಯಾಮಕರಾಗಿದ್ದಾರೆ. ಲಾತವ್ಯರ ಉಪಾಸನೆ ಸಾಧಕನಿಗೆ ಅತ್ಯಗತ್ಯವೆಂದರು.

ಅಂದು ಸಂಜೆ, ರಾಜ್ಯೋತ್ಸವ ಪ್ರಶಸ್ತಿವಿಜೇತರಾದ ಗರ್ತಿಕೆರೆ ರಾಘಣ್ಣ (ರಾಘವೇಂದ್ರರಾವ್) ಇವರು ಶ್ರೀವಾದಿರಾಜರ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡಿದರು. ಶ್ರೀಯುತರಿಗೆ "ಸಂಗೀತಶಾಸ್ತ್ರಕಲಾನಿಧಿ" ಎಂಬ ಬಿರುದನ್ನು ಕೊಟ್ಟು ಪೂಜ್ಯಶ್ರೀಗಳವರು ಆಶೀರ್ವದಿಸಿದರು.

ರಾತ್ರಿ ೭.೩೦ಕ್ಕೆ ಅಲಂಕೃತ ರಥದಲ್ಲಿ ಶ್ರೀಮದಾಚಾರ್ಯರ ಸೂತ್ರಭಾಷ್ಯಾದಿ ಗ್ರಂಥಗಳ ಹಾಗೂ ಶ್ರೀಗುರುರಾಜರ ಆಖ್ಯಾನಾದಿ ಗ್ರಂಥಗಳ ವೈಭವದ ರಥೋತ್ಸವ, ಕೋಟೇಶ್ವರ ಮಾಗಣೆ ಭಕ್ತರಿಂದ ಅಖಂಡಭಜನೆ ನಡೆದವು. ಈ ಸಂದರ್ಭದಲ್ಲಿ ವರ್ಣರಂಜಿತ ಬಿರುಸು ಹಾಗೂ ಪಟಾಕಿಗಳ ವೈಭವ ವರ್ಣನಾತೀತ.

೨೧.೪.೨೦೦೦ರಂದು ಬೆಳಿಗ್ಗೆ ಬೇಲೂರಿನ ಕೆ. ಶ್ರೀಧರ ಹತ್ವಾರರವರು ಪೂರೈಸಿದ ಶ್ರೀರಾಮಮಂತ್ರಲೇಖನ ಯಜ್ಞದ ಉದ್ಯಾಪನಾಹೋಮ ಹಾಗೂ ಪೂರ್ಣಾಹುತಿಗಳು ನೆರವೇರಿದವು.

ನಂತರ, ಮಾನಕರಿ ಶ್ರೀನಿವಾಸಾಚಾರ್ಯ, ಬಳ್ಳಾರಿ, ಇವರು 'ಲಕ್ಷ್ಮೀಶೋಭಾನೆ'ಯ ಬಗ್ಗೆ ಮಾತನಾಡಿ ಶ್ರೀಮದ್ಭಾಗವತ ಅಷ್ಟಮಸ್ಕಂಧದ 'ಲಕ್ಷ್ಮೀಕಲ್ಯಾಣ' ಪ್ರಸಂಗದೊಂದಿಗೆ ಹೋಲಿಸಿ, ಕವಿಕುಲತಿಲಕರಾದ ಶ್ರೀರಾಜರು ಪ್ರಬಲ ಸದಾಗಮ ಸಹಕೃತ ಸದ್ಯುಕ್ತಿಗಳಿಂದ ಶ್ರೀಮನ್ನಾರಾಯಣನ ನಿರನಿಷ್ಟತ್ವ-ನಿರವದ್ಯತ್ವಗಳನ್ನು ಕನ್ನಡೀಕರಿಸಿರುವುದಕ್ಕೆ ಒಂದೆರಡು ಉದಾಹರಣೆ ನೀಡಿದರು. ಮಂಗಳಾಚರಣೆ ಹಾಗೂ ಸಮರ್ಪಣಾ ಪದ್ಯಗಳಲ್ಲಿ ನೇರವಾಗಿ ಕೇವಲ ರಮಾನಾರಾಯಣರಿಗೆ ಮಾತ್ರ ನಮಿಸುವಿಕೆ, 'ಲಕ್ಷ್ಮೀಕಾಂತನಕಂ' ಎಂಬ ಪ್ರಯೋಗ- ಇವು ಋಜುತ್ವಬೋಧಕಗಳಾಗಿವೆ ಎಂದರು.

ಡಾ|| ಗುರುರಾಜಾಚಾರ್ಯ ಕೆ. ನಿಪ್ಪಾಣಿಯವರು ಆಖ್ಯಾನದ ದ್ವಿತೀಯ ಶ್ಲೋಕಕ್ಕೆ ಶ್ರೀವಾಯುದೇವರ ಅವತಾರತ್ರಯ ಪರವಾಗಿ ಅರ್ಥವನ್ನು ಹೇಳಿದರು. ಪದ್ಯಾಖ್ಯಸೂತ್ರಬದ್ಧವಾದ 'ಯುಕ್ತಿಮಲ್ಲಿಕಾ' ಫಲಸೌರಭದಲ್ಲಿಯ ಅತಃಶುಭಗುಣಾಂಭೋಧಿಃ ಶುದ್ಧಃ ಸರ್ವವಿಲಕ್ಷಣಃ। ಸತ್ಯವಿಶ್ವಾಶ್ರಯೋ ಮುಕ್ತಾಮುಕ್ತೇಶೋ ಜಯತಿ ಪ್ರಭುಃ ॥

ಎಂಬ ಶ್ಲೋಕವು ಯುಕ್ತಿಮಲ್ಲಿಕೆಯ ಸಾರಸಂಗ್ರಹ ರೂಪದಲ್ಲಿದ್ದು ಎಲ್ಲ ಸೌರಭಗಳ ವಿಷಯಸೂಚಕವಾಗಿದೆ ಎಂಬುದನ್ನು ನಿರೂಪಿಸಿದರು.

ವಿದ್ವಾನ್ ರಾಘವೇಂದ್ರ ಪುರಾಣಿಕ, ಉಡುಪಿ ಇವರು ಆಖ್ಯಾನದ ಮಹತ್ವದ ಬಗ್ಗೆ ಶ್ರೀರಘುಪ್ರವೀರತೀರ್ಥರು ಬರೆದ 'ಶ್ರೀಸ್ವಾಪ್ನವೃಂದಾವನಾಖ್ಯಾನ ಪ್ರಾಮಾಣ್ಯಬೋಧಿನೀ'ಯನ್ನು ಆಧರಿಸಿ ಅನೇಕ ಶ್ಲೋಕಗಳಿಗೆ ವಿಶೇಷಾರ್ಥವನ್ನು ಹೇಳುವ ಮೂಲಕ ಉಪನ್ಯಾಸನೀಡಿದರು.

ವಿದ್ವಾನ್ ಕೆ.ಎಲ್. ಪುಷ್ಕರಾಚಾರ್ಯ, ತುಮಕೂರು ಇವರು ಆಖ್ಯಾನೋಕ್ತ ವೈಭವವು ಶ್ರುತಿಪ್ರತಿಪಾದ್ಯ ಋಜುಮಹಿಮೆಯೇ ಆಗಿದೆ ಎಂಬುದನ್ನು ವೇದಋಕ್ಕುಗಳ ಅರ್ಥವಿವರಣೆ ಯೊಂದಿಗೆ ಸ್ಥಾಪಿಸಿದರು. ಮೂಲ ಆಖ್ಯಾನವು ಇಪ್ಪತ್ತೆರಡು ಲಕ್ಷಕ್ಕೂ ಮಿಗಿಲಾದ ಗ್ರಂಥಾತ್ಮಕ ವಾಗಿದ್ದು ಭೂಲೋಕಕ್ಕೆ ಇಂದು ಒದಗಿದ ಆಖ್ಯಾನವು ಇಪ್ಪತ್ತೆರಡು ಸಾವಿರದ ಇನ್ನೂರರಷ್ಟು ಶ್ಲೋಕಗಳು ಮಾತ್ರ ಎಂಬುದನ್ನು 'ಮಮೈಕೋಕ್ತಿಃ ಶತೋಕ್ತಿಕಾ' ಇತ್ಯಾದಿ ವಾಕ್ಯಗಳಿಂದ ನಿರೂಪಿಸಿದರು. ಆಖ್ಯಾನವೂ ಪರಂಪರೆಯಿಂದ ಗುರುಮುಖೇನ ಅಭ್ಯಾಸ ಮಾಡಬೇಕಾದ ಗ್ರಂಥವಾಗಿದೆ. ಸ್ವತಃ ಓದಿಕೊಂಡರೆ ರಹಸ್ಯಾರ್ಥಗಳು ತಿಳಿಯಲಾರವೆಂಬ ಅಂಶವನ್ನು ಒತ್ತಿ ಹೇಳಿದರು.

ಪರಮಪೂಜ್ಯ ಶ್ರೀಶ್ರೀಪಾದಂಗಳವರು ಶ್ರೀಗುರುರಾಜರ ವಾಙ್ಮಯವನ್ನು ಯಥಾವತ್ತಾಗಿ ಪರಿಚಯಿಸುವ ಸಮಾರಂಭದ ಸ್ಮರಣಸಂಚಿಕೆಯಾದ 'ತತ್ತ್ವಮಲ್ಲಿಕಾ' ಎಂಬ ಶೀರ್ಷಿಕೆಯ ಗ್ರಂಥವನ್ನು ಬಿಡುಗಡೆ ಮಾಡಿದರು. ಉಡುಪಿಯ ಶ್ರೀ ವ್ಯಾಸಾಚಾರ್ಯರು ಜ್ಞಾನಸತ್ರ -

ಉತ್ಸವ ಸಮಿತಿಯು ಪರವಾಗಿ ಶ್ರೀಶ್ರೀಗಳವರಿಗೆ ವಸ್ತ್ರಫಲಪುಷ್ಪಕಾಣಿಕೆಗಳನ್ನು ಸಮರ್ಪಿಸಿದರು.

ಶ್ರೀಶ್ರೀಗಳವರು ಅನುಗ್ರಹ ಭಾಷಣದಲ್ಲಿ ಹಂಸವಾಹನ ಪ್ರಕಾಶನದ ಎನ್.ವಿ. ಕುಲಕರ್ಣಿ, ಜ್ಞಾನಯಜ್ಞಕ್ಕೆ ವಿಶೇಷ ಸೇವೆ ಸಲ್ಲಿಸಿದ ಕೆ.ಎಲ್. ಉಪಾಧ್ಯಾಯರು, ಅವರ ಸೋದರ ರಾಘವೇಂದ್ರ ಉಪಾಧ್ಯಾಯರು, ಸ್ಮರಣಸಂಚಿಕೆಯನ್ನು ಮುದ್ರಿಸಿದ ಪ್ರಿಂಟ್ ಮೀಡಿಯಾದ ಅರುಣ, ರವಿ ಸಹೋದರರನ್ನು ಹಾಗೂ ಸಮಾರಂಭದ ನೆನಪಿನ ಕಾಣಿಕೆಗಳನ್ನು ನಿರ್ಮಿಸಿದ (ಮೊಮೆಂಟೋ) ಹರಿಸರ್ವೋತ್ತಮ ಕೆ.ಆರ್. ಇವರನ್ನೂ ಆಶೀರ್ವದಿಸಿದರು.

ಶ್ರೀರಾಜರ ಎಲ್ಲ ಸಂಸ್ಕೃತ, ಕನ್ನಡ ಕೃತಿಗಳ ಪ್ರಕಟಣೆ ಹಾಗೂ ಅವುಗಳ ಬಗ್ಗೆ ಪ್ರವಚನಗಳು ನಡೆಯಬೇಕಾದ ಅಗತ್ಯವನ್ನು ತಿಳಿಸಿ, ದಿನತ್ರಯದ ಈ ಉತ್ಸವವನ್ನು ದೇವರಲ್ಲಿ ಸಮರ್ಪಿಸಿ ಸರ್ವರಿಗೂ ಶ್ರೇಯಸ್ಸನ್ನು ಹಾರೈಸಿದರು. ಪರಂಪರೆಯಿಂದ ಶ್ರೀಗುರುರಾಜರ ಋಜುತ್ವದೀಕ್ಷಾ ಸಂಪನ್ನರಾಗಿ ಶ್ರದ್ಧಾಭಕ್ತಿಗಳಿಂದ ಸೇವೆಸಲ್ಲಿಸಿಕೊಂಡು ಬಂದಿರುವ ಅನೇಕ ಮಹನೀಯರಿಗೆ ವಿಶೇಷ ಫಲಮಂತ್ರಾಕ್ಷತೆ ನೀಡಿ ಅನುಗ್ರಹಿಸಿದರು.

೧. ಬೆಳಗಾವಿಯ ಹಂಸವಾಹನ ಪ್ರಕಾಶನದ ಪ್ರಕಟಣೆಯಾದ ಶ್ರೀರಘುನಾಥಾಚಾರ್ಯ ವಿರಚಿತ "ವೃತ್ತರತ್ನಸಂಗ್ರಹ"

೨. ಶ್ರೀಮತಿ ಸತ್ಯವತಿ ಹರಿಕೃಷ್ಣ ಅವರು ರಚಿಸಿದ "ಸುಜ್ಞಾನ" ಎಂಬ ಪುಸ್ತಕ ಹಾಗೂ

೩. ಬೆಂಗಳೂರಿನ ಭಾವಿಸಮೀರ ಪ್ರಕಾಶನದ ಅಣುವೃಂದಾವನಾಖ್ಯಾನದ ಕನ್ನಡ ಅನುವಾದ; ಇವುಗಳನ್ನು ಶ್ರೀಶ್ರೀಗಳವರು ಬಿಡುಗಡೆ ಮಾಡಿದರು. ಬಿ.ಎಸ್. ನಾಗರಾಜಧನ್ಯ ಅವರು ಈ ಕಾರ್ಯಕ್ರಮದ ಯಶಸ್ಸಿನಲ್ಲಿ ಭಾಗಿಗಳಾದವರನ್ನು ಭಾಗವಹಿಸಿದ ವಿದ್ವಾಂಸರನ್ನು ಸಂಸ್ಮರಿಸಿ, ವಿಶೇಷವಾಗಿ ಸಹಕರಿಸಿದ ಶ್ರೀಮಠದ ವ್ಯವಸ್ಥಾಪಕವರ್ಗದವರನ್ನು ಹಾಗೂ ಶ್ರೀಶ್ರೀಗಳವರ ಪರಿವಾರವರ್ಗದವರನ್ನು ಅಭಿನಂದಿಸುತ್ತಾ ವಂದನಾರ್ಪಣೆ ಮಾಡಿದರು. ಮಾನಕರಿ ಶ್ರೀನಿವಾಸಾಚಾರ್ಯ ಕಾರ್ಯಕ್ರಮ ನಿರೂಪಿಸಿದರು.

ಹೀಗೆ ಭಾವಿಸಮೀರ ಶ್ರೀವಾದಿರಾಜ ಗುರುಸಾರ್ವಭೌಮರ ಆರಾಧನಾ ಚತುಃಶತಮಾನೋತ್ಸವವು ವೈಭವಪೂರ್ಣವಾಗಿ, ಸಾತ್ವಿಕವಾಗಿ, ಶ್ರೀಹರಿವಾಯುಗುರುರಾಜರ ಪ್ರೀತಿಜನಕವಾಗುವಂತೆ ಯಶಸ್ವಿಯಾಗಿ ನೆರವೇರಿತು. ಶ್ರೀರಾಜರ ಭಕ್ತರಿಗೆ ಇದೊಂದು ಚಿರಸ್ಮರಣೀಯ ಪುಣ್ಯಾನುಭವ ಎಂಬುದರಲ್ಲಿ ಸಂದೇಹವಿಲ್ಲ.

**ಸೋದೆಮಠಕ್ಕೆ ದೈವಜ್ಞ ಸಮಾಜದವರ ಕೊಡುಗೆ**

ದೈವಜ್ಞ ಸಮಾಜದ ಅನೇಕ ಶಿಷ್ಯರು ಶ್ರೀಪಾದಂಗಳವರ ಅನುಗ್ರಹದಿಂದ ತಮ್ಮ ಇಷ್ಟಾರ್ಥ ಪಡೆದಿರುತ್ತಾರೆ.

ರಾಜ್ಯದ ದೈವಜ್ಞ ಸಮಾಜದ ಶಿಷ್ಯ ವರ್ಗದವರನ್ನು ಮಠದ ಮತ್ತು ಶ್ರೀಕೃಷ್ಣ ಪರಮಾತ್ಮನ ಸೇವೆಯಲ್ಲಿ ನಿಕಟ ಸಂಪರ್ಕವನ್ನು ಹೊಂದಿ ವಿವಿಧ ರೀತಿಯಲ್ಲಿ ಈ ಕೆಳಗಿನ ರಚನಾತ್ಮಕ ಸಾಧನೆಗಳನ್ನು ಮಾಡಿ ತೋರಿಸಿರುವರು. ಅವರ ಸೋದೆ ವಾದಿರಾಜ ಮಠದ ಮೇಲಿನ ಅಭಿಮಾನ ಹಾಗೂ ಗುರುಗಳ ಮೇಲಿನ ನಿಷ್ಠೆ ಪ್ರಶಂಸನೀಯವಾಗಿದೆ.

೧. ೧೯೮೦ರಲ್ಲಿ ಜರುಗಿದ ಮದ್ವಾದಿರಾಜರ ಪಂಚಶತಾಬ್ಧಿ ಪರ್ಯಾಯೋತ್ಸವ ಸಮಾರಂಭದ ವೇಳೆಯಲ್ಲಿ ದೈವಜ್ಞ ಬ್ರಾಹ್ಮಣ ಶಿಷ್ಯ ವರ್ಗದವರು ಸುಮಾರು ೨ ಲಕ್ಷ ರೂಪಾಯಿ ಸ್ಮಾರಕ ನಿಧಿಯನ್ನು ಸಂಗ್ರಹಿಸಿ ಶ್ರೀ ಸೋದಾಕ್ಷೇತ್ರದಲ್ಲಿ ನಡೆಯುವ ಶ್ರೀವಾದಿರಾಜರ ಆರಾಧನೋತ್ಸವಕ್ಕೆ ಉಪಯೋಗಿಸಲು ಶಾಶ್ವತನಿಧಿಯ ಟ್ರಸ್ಟರಚಿಸಿ ಅರ್ಪಿಸಿರುವರು.

೨. ೧೯೮೦ರಲ್ಲಿ ಪರ್ಯಾಯೋತ್ಸವ ಸಂದರ್ಭದಲ್ಲಿ ದೈವಜ್ಞ ಬ್ರಾಹ್ಮಣ ಸಮಾಜದ ಶಿಷ್ಯ ವರ್ಗದವರು ಶ್ರೀ ಗುರುವಾದಿರಾಜರ ದಿವ್ಯ ಮೂರ್ತಿಗೆ ಮೆರವಣಿಗೆಯ ವೇಳೆಯಲ್ಲಿ ಹೆಲಿಕ್ಯಾಪ್ಟರ್ ಮೇಲಿಂದ ಮೂರ್ತಿಗಳ ಮೇಲೆ ಪುಷ್ಪವೃಷ್ಟಿಯನ್ನೇ ಸಮರ್ಪಿಸಿದ ಸವಿನೆನಪು ಇಂದಿಗೂ ಇದೆ.

೩. ೧೯೮೧ರಲ್ಲಿ ಸೋದಾಕ್ಷೇತ್ರದಲ್ಲಿ ಶ್ರೀ ವಾದಿರಾಜ ಬುರ್ಡೆ, ಗಂಗಾವತಿ, ಅವರು ಯಾತ್ರಾರ್ಥಿಗಳಿಗೆ ವಸತಿ ನಿರ್ಮಿಸಿ ಅರ್ಪಿಸಿರುವರು.

೪. ೧೯೯೧ರಲ್ಲಿ ದೈವಜ್ಞ ಬ್ರಾಹ್ಮಣ ಶಿಷ್ಯವರ್ಗದವರು ಸೋದೆ ಮಠದ ಭೂತರಾಜರ ಗುಡಿಯ ಜೀರ್ಣೋದ್ಧಾರ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುತ್ತಾರೆ.

೫. ೧೯೯೨ರಲ್ಲಿ ಗೌರಿಗದ್ದೆ ಎಂಬ ಪ್ರಸಿದ್ಧವಾದ ಶ್ರೀ ವಾದಿರಾಜರ ಅವತಾರ ಭೂಮಿಯಾದ ಹೂವಿನಕೆರೆಯಲ್ಲಿ ದೈವಜ್ಞ ಬ್ರಾಹ್ಮಣ ಶಿಷ್ಯವರ್ಗದವರಿಂದ ಪೂಜಾ ಮಂಟಪವನ್ನು ಹಾಗೂ ಸುಂದರ ದಕ್ಷಿಣಭಾಗದ ಪೌಳಿಯನ್ನು ಕಟ್ಟಿಸಿರುತ್ತಾರೆ.

೬. ೧೯೯೩ರಲ್ಲಿ ಶ್ರೀಪಾದಂಗಳವರಿಂದ ಸ್ಥಾಪಿತವಾದ ಇನ್ನಂಜೆಯ ಪದವಿ ಪೂರ್ವಕಾಲೇಜಿನ ಕಟ್ಟಡಕ್ಕೆ ದೈವಜ್ಞ ಬ್ರಾಹ್ಮಣ ಶಿಷ್ಯವರ್ಗದವರಿಂದ ಒಂದು ಲಕ್ಷ ಇಪ್ಪತ್ತೈದು ಸಾವಿರ ದೇಣಿಗೆ ಸಲ್ಲಿಸಲಾಗಿದೆ.

೭. ಶ್ರೀ ಕೆ.ಕೆ.ಆರ್. ಶೆಟ್ ಅವರ ಮುಂದಾಳುತನದಲ್ಲಿ ಹೂವಿನಕೆರೆ ಮಠದಲ್ಲಿ ಶಾಶ್ವತ ದಿನನಿತ್ಯ ತ್ರಿಕಾಲ ಪೂಜಾವ್ಯವಸ್ಥೆ ಮಾಡಲಾಗಿದೆ.

೮. ಶ್ರೀ ಎಸ್. ಸುರೇಶಶೇಟ್ ಕದ್ರಿ, ಮಂಗಳೂರು ಇವರು ೧೯೯೫ರಲ್ಲಿ ಅತ್ಯಂತ ಸುಂದರ ವಿನ್ಯಾಸದಿಂದ ಕೂಡಿದ ಉಡುಪಿಯ ಶ್ರೀಮಠದ ಮುಖಮಂಟಪವನ್ನು ನಿರ್ಮಾಣ ಮಾಡಿಸಿ ಶ್ರೀ ಭೂವರಾಹ, ಶ್ರೀ ಹಯಗ್ರೀವ ಹಾಗೂ ಶ್ರೀ ವೇದವ್ಯಾಸರ ಶಿಲಾಮೂರ್ತಿಗಳನ್ನು ಪ್ರತಿಷ್ಠಾಪಿಸಿ ಒಪ್ಪಿಸಿರುವರು.

**ಜೀರ್ಣೋದ್ಧಾರ ಮತ್ತು ಅಭಿವೃದ್ಧಿ ಕಾರ್ಯಗಳು :**

**೧. ಉಡುಪಿ ಸೋದೆಮಠ :** ಶ್ರೀವಾದಿರಾಜರು ಪ್ರತಿಷ್ಠಾಪಿಸಿದ ಭೂತರಾಜರ ಗುಡಿಯನ್ನು ಶ್ರೀ ವಿಶ್ವೋತ್ತಮತೀರ್ಥರು ನವೀಕರಣಗೊಳಿಸಿದ್ದಾರೆ. ಹಾಗೂ ಮಠದ ಎದುರಿಗೆ ಭೂವರಾಹ ಕಟ್ಟಡ ಸಮುಚ್ಚಯ ಕಟ್ಟಿಸಿ ಮಠದ ಆದಾಯ ಹೆಚ್ಚುವಂತೆ ಮಾಡಿರುವರು.

**೨. ಕುಂಭಾಶಿಮಠ :** ಶ್ರೀವಾದಿರಾಜರ ಅವತಾರಕ್ಕಿಂತ ಪೂರ್ವದಲ್ಲಿ ಶ್ರೀ ವಿಷ್ಣುತೀರ್ಥರ ಪರಂಪರೆಯ ಈ ಮಠವು ಕುಂಭಾಶಿಮಠವೆಂದೇ ಕರೆಯಲ್ಪಡುತ್ತಿತ್ತು. ಇಲ್ಲಿ ಶ್ರೀ ವಾದಿರಾಜಗುರುಗಳ ಪರಮಗುರುಗಳಾದ ಶ್ರೀ ವರದರಾಜತೀರ್ಥರು (೧). ಶ್ರೀವೇದವೇದ್ಯರ

ಶಿಷ್ಯ ಶ್ರೀ ವಿದ್ಯಾನಿಧಿಗಳ ಹಾಗೂ ಶ್ರೀ ವಾದಿರಾಜರ ವಿದ್ಯಾಗುರುಗಳಾದ ವಿದ್ಯಾನಿಧಿಗಳ ಮೂಲವೃಂದಾವನಗಳಿವೆ. ಈ ವೃಂದಾವನ ಸನ್ನಿಧಿ ಕಟ್ಟಡವನ್ನು ೧೯೬೬ರಲ್ಲಿ ಕಟ್ಟಿಸಿದ್ದಾರೆ. ಮಠದ ಕಟ್ಟಡ ಪೂರ್ತಿ ಶಿಥಿಲವಾದ ಕಾರಣ ಕ್ರಿ.ಶ. ೨೦೦೦ದಲ್ಲಿ ಪುನಃ ಹೊಸದಾಗಿ ಕಟ್ಟಿಸಿರುವರು.

**೩. ಹೂವಿನಕೆರೆ ಮಠ :** ಶ್ರೀವಾದಿರಾಜರ ಜನ್ಮಭೂಮಿಯಾದ ಹೂವಿನಕೆರೆಯಲ್ಲಿ ಹಳೆಯಮಠವು ಜೀರ್ಣವಾದ ಕಾರಣ ಭಕ್ತರ ಸಹಾಯದಿಂದ ಶ್ರೀ ವಿಶ್ವೋತ್ತಮತೀರ್ಥರು ಹೊಸದಾಗಿ ಮಾಡಿರುವರು. ಹಾಗೂ ಶ್ರೀ ವಾದಿರಾಜರು ಹುಟ್ಟಿದ ಗೌರಿಗದ್ದೆಯಲ್ಲಿರುವ ಶ್ರೀವಾದಿರಾಜರ ಗುಡಿಯನ್ನು ನವೀಕರಿಸಿರುವರು. ಮಠದ ಪಕ್ಕದಲ್ಲಿರುವ ಹೂವಿನಕೆರೆಯೆಂದೇ ಪ್ರಸಿದ್ಧವಾದ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಮೆಟ್ಟಲುಗಳನ್ನು ಕಟ್ಟಲಾಗಿದೆ. ಹಾಗೂ ಶ್ರೀ ವಿಶ್ವೋತ್ತಮತೀರ್ಥರು ಗೋರಕ್ಷಣಾಕೇಂದ್ರ ಸ್ಥಾಪಿಸಿರುವರು.

**೪. ಉಂಡಾರು (ಇನ್ನಂಜೆಗ್ರಾಮ) :** ಇಲ್ಲಿ ಪರಂಪರೆಯಲ್ಲಿ ಬಂದ ಸೋದಾ ಮಠಾಧೀಶರಾಗಿದ್ದ ಶ್ರೀ ವಿಶ್ವಾಧೀಶ್ವರತೀರ್ಥರ ಹಾಗೂ ಶ್ರೀ ವಿಶ್ವನಿಧಿತೀರ್ಥರ ವೃಂದಾವನಗಳಿವೆ. ಹಾಗೂ ಭೂತರಾಜರ ಸನ್ನಿಧಾನವಿದೆ. ಈ ಮಠದ ಜೀರ್ಣೋದ್ಧಾರವನ್ನು ಶ್ರೀ ವಿಶ್ವೋತ್ತಮತೀರ್ಥರು ಮಾಡಿಸಿದ್ದಾರೆ.

**೫. ನಾರಳಮಠ :** ಪ್ರಾಕೃತಿಕ ಸೌಂದರ್ಯದ ಮಡಿಲಲ್ಲಿರುವ ರಮಣೀಯವೂ ಅಪಾರ ಮಹಿಮೋಪೇತವಾಗಿರುವ ನಾರಳಕ್ಷೇತ್ರವು ಭೂತರಾಜರ ಜನ್ಮಸ್ಥಾನ ಹಾಗೂ ಶ್ರೀರತ್ನಗರ್ಭತೀರ್ಥರ ವೃಂದಾವನ ಹಾಗೂ ಭೂವರಾಹ ತೀರ್ಥವಿರುವ ಸ್ಥಳ. ಇಲ್ಲಿಯಮಠವನ್ನು ಶ್ರೀ ವಿಶ್ವೋತ್ತಮ ತೀರ್ಥರು ಜೀರ್ಣೋದ್ಧಾರ ಕಾರ್ಯವನ್ನು ಮಾಡಿ ಶ್ರೀ ಭೂತರಾಜರ ಗುಡಿ ನಿರ್ಮಾಣ ಮಾಡಿರುವರು.

**೬. ಉದ್ಯಾವರ ಮಠ :** ಉಡುಪಿಗೆ ೬ಕಿ.ಎಂ. ದೂರವಿರುವ ಈ ಮಠವೂ ಶ್ರೀ ವೃಂದಾವನಾಚಾರ್ಯರ ಕಾಲದಲ್ಲಿ ನಿರ್ಮಾಣವಾಗಿದೆ. ಶ್ರೀ ವಿಶ್ವೋತ್ತಮತೀರ್ಥರ ಆಶ್ರಮಗುರುಗಳಾದ ಶ್ರೀ ವಿಶ್ವೇಂದ್ರತೀರ್ಥರ ಮೂಲವೃಂದಾವನ ಹಾಗೂ ವೃಂದಾವನಾಚಾರ್ಯರ ಗೃಹಸ್ಥಶಿಷ್ಯ ಸನ್ಯಾಸಿಗಳಾದ ಶ್ರೀವರಾಹತೀರ್ಥರ ಮಠದ ಜೀರ್ಣೋದ್ಧಾರ ಮತ್ತು ಗೋಶಾಲಾ ನಿರ್ಮಾಣವು ೧೯೮೮ರಲ್ಲಿ ಶ್ರೀ ವಿಶ್ವೋತ್ತಮತೀರ್ಥರಿಂದ ನೆರವೇರಿದೆ.

**೭. ರಂಜಾಳ ಸೋದೆವಾದಿರಾಜ ಮಠ :** ಶ್ರೀವಾದಿರಾಜರ ಪೂರ್ವಾಶ್ರಮ ತಾಯಿ ಗೌರಿದೇವಿಯರ ತವರು ಮನೆಯು ಮಠವಾಗಿದೆ. ಇಲ್ಲಿ ಗೋಪಾಲಕೃಷ್ಣ ರಾಮಚಂದ್ರದೇವರೇ ಮೊದಲಾದ ಅನೇಕ ಪ್ರತಿಮೆಗಳಿವೆ. ಇಲ್ಲಿಯ ಮಠವನ್ನು ಶ್ರೀ ವಿಶ್ವೋತ್ತಮತೀರ್ಥರು ನವೀಕರಿಸಿದ್ದಾರೆ.

**೮. ಕೆಂಚಗಾರು ಮಠ :** ಹೊನ್ನಾವರಕ್ಕೆ ಸಮೀಪದಲ್ಲಿರುವ ಕೆಂಚಗಾರಿನಲ್ಲಿ ಪರಂಪರೆಗೆ ಸೇರಿದ ಮೂವತ್ತೊಂದನೆಯ ಯತಿಗಳಾದ ಶ್ರೀ ವಿಶ್ವೇಶತೀರ್ಥರ ಮೂಲ ವೃಂದಾವನವಿರುವ ಸ್ಥಳ. ಇದನ್ನು ಶ್ರೀ ವಿಶ್ವೋತ್ತಮತೀರ್ಥರು ಜೀರ್ಣೋದ್ಧಾರ ಮಾಡಿರುವರು.

೯. ಮಧ್ಯವಾಟ (ನಡ್ಯಂತಾಡಿ) ಮಠ : ಶ್ರೀ ಮಧ್ವಾಚಾರ್ಯರ ಕಾಲದಲ್ಲಿದ್ದ ಮಠ. ಮುಂಚೆ ವ್ಯಾಸಮುಷ್ಟಿ ಇಲ್ಲೇ ಇತ್ತು. ಈ ಮಠವು ಮೂರು ಹಂತದಲ್ಲಿ ಜೀರ್ಣೋದ್ಧಾರವಾಗಿದೆಯಂತ ತಿಳಿದುಬರುತ್ತದೆ. ಮೊದಲು ಶ್ರೀ ವಾದಿರಾಜರ ಕಾಲದಲ್ಲಿ ನಂತರ ವೃಂದಾವನಾಚಾರ್ಯರ ಕಾಲದಲ್ಲಿ ಹಾಗೂ ಪ್ರಕೃತ ಶ್ರೀ ವಿಶ್ವೋತ್ತಮತೀರ್ಥರ ಕಾಲದಲ್ಲಿ ಜೀರ್ಣೋದ್ಧಾರವಾಗಿದೆ.

೧೦. ಬೀಳಗಿ ಮಠ : ಸಿದ್ಧಾಪುರ ತಾಲೂಕಿನಲ್ಲಿರುವ ಬೀಳಗಿಯೆಂಬಲ್ಲಿ ಸೋದಾಮಠದ ಪರಂಪರೆಯ ಶ್ರೀವಾದಿರಾಜರಕ್ಕಿಂತಲೂ ಏಳು ತಲೆಮಾರು ಹಿಂದೆ ಇದ್ದ ಶ್ರೀ ವೇದಾಂಗತೀರ್ಥರ ಮೂಲ ವೃಂದಾವನವಿರುವ ಸ್ಥಳ. ಇಲ್ಲಿ ಶ್ರೀಲಕ್ಷ್ಮೀನಾರಾಯಣರ ಪ್ರತಿಮೆಯಿತ್ತು. ಈಗಿಲ್ಲ. ಇಲ್ಲಿ ಶ್ರೀ ವಾದಿರಾಜರು ತಾವು ರಚಿಸಿದ ಗ್ರಂಥಗಳನ್ನು ಭೂಗತಮಾಡಿ ಮೇಲೆ ದೇವರ ಪ್ರತಿಮೆ ಸ್ಥಾಪಿಸಿದ್ದರು. ಎಂತ ತಿಳಿದು ಬರುತ್ತದೆ. ಈ ಮಠವನ್ನು ಶ್ರೀವಿಶ್ವೋತ್ತಮತೀರ್ಥರು ಜೀರ್ಣೋದ್ಧಾರ ಮಾಡಿರುವರು.

೧೧. ಗೋಕರ್ಣದ ಮಠ : ಗೋಕರ್ಣದ ಕೋಟಿತೀರ್ಥದ ದಡದಲ್ಲಿರುವ ಸ್ಥಳ ಸೋದಾಮಠಕ್ಕೆ ಸೇರಿದ್ದು ಎಂದು ಶ್ರೀ ವಿಶ್ವೋತ್ತಮತೀರ್ಥರು ಪತ್ತೆಮಾಡಿ ಅಲ್ಲಿ ಹೊಸದಾಗಿ ಮಠ ಕಟ್ಟಿಸಿ ವೈಷ್ಣವ ಭಕ್ತಾದಿಗಳಿಗೆ ಕ್ಷೇತ್ರವಿಧಿ ಮಾಡಲು ಅನುಕೂಲ ಮಾಡಿಕೊಟ್ಟಿರುವರು.

೧೨. ಅರಿತೋಡು ನಾಗಾಲಯ ನವೀಕರಣ : ಎರಡು ಸಾವಿರ ವರ್ಷಗಳ ಹಿಂದೆ ಉಡುಪಿಯಲ್ಲಿ ರಾಮಭೋಜ ಅರಸನು ನಿರ್ಮಿಸಿದ್ದ ನಾಲ್ಕು ಪ್ರಮುಖ ನಾಗಾಲಯಗಳಲ್ಲಿ ಒಂದಾದ ಅರಿತೋಡು ನಾಗಾಲಯವು ಜೀರ್ಣಾವಸ್ಥೆಯಲ್ಲಿದ್ದಾಗ ಅದನ್ನು ಸಂಪೂರ್ಣವಾಗಿ ನವೀಕರಿಸಿದರು. ಹಾಗೂ ಮದ್ರಾಸಿನ ಟಿ.ನಗರ, ಕೇರಳದ ತ್ರಿಚೂರ್‌ನಲ್ಲಿರುವ ಮಠಗಳನ್ನು ಸುವ್ಯವಸ್ಥಿತಗೊಳಿಸಿದ್ದಾರೆ.

**ಶಿಕ್ಷಣಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳು :**

ಶ್ರೀ ವಿಶ್ವೋತ್ತಮತೀರ್ಥರು ಕೇವಲ ಆಧ್ಯಾತ್ಮಿಕ ಶಿಕ್ಷಣವಲ್ಲದೆ ಲೌಕಿಕ ಶಿಕ್ಷಣ ಕ್ಷೇತ್ರಕ್ಕೂ ಅಪಾರ ಕೊಡುಗೆ ನೀಡಿದ್ದಾರೆ. ಶ್ರೀ ಪಾದಂಗಳವರು ಆಶ್ರಮ ಸ್ವೀಕರಿಸಿದಾಗ ಇವರ ಗುರುಗಳು ಇನ್ನಂಜೆಯಲ್ಲಿ ಶಾಲೆ ಪ್ರಾರಂಭಿಸಿ ಕೇವಲ ಮೂರು ತಿಂಗಳಾಗಿತ್ತು. ಅದನ್ನು ತಮ್ಮ ಜೀವಿತ ಅವಧಿಯಲ್ಲಿ ಬೆಳೆಸಿ ಅದರ ಸರ್ವತೋಮುಖ ಅಭಿವೃದ್ಧಿಗೆ ಕಾರಣ ಕರ್ತರಾಗಿದ್ದಾರೆ. ಇನ್ನಂಜೆ ಶಾಲೆ ಪದವಿ ಪೂರ್ವ ಕಾಲೇಜಾಗಿ ಭಡ್ತಿಯನ್ನು ಹೊಂದುವುದರಲ್ಲಿಯೂ ಶ್ರೀಗಳು ಬಹುವಾಗಿ ಶ್ರಮಿಸಿದ್ದಾರೆ. ಆ ಸಮಯದಲ್ಲಿ ಐದು ಜನ ಅಧ್ಯಾಪಕರಾಗಿ ಎರಡು ವರ್ಷಗಳ ಕಾಲ ತಾವೇ ಸಂಬಳ ನೀಡಿರುವರು. ಹೀಗೆ ಹಲವಾರು ಸಂದರ್ಭದಲ್ಲಿ ಆರ್ಥಿಕ ಸಹಾಯ ನಿರಂತರ ಪ್ರೋತ್ಸಾಹ ನೀಡಿರುವರು. ವಿದ್ಯಾರ್ಥಿಗಳಿಂದ ಯಾವುದೇ ಡೊನೇಷನ್‌ಗಳನ್ನು ಸ್ವೀಕರಿಸದಂತೆ ಶ್ರೀಗಳವರು ಆಡಳಿತ ಮಂಡಳಿಗೆ ನಿರ್ದೇಶಿಸಿದ್ದರು.

ಉತ್ತಮ ಪ್ರಯೋಗಶಾಲೆ, ಆಟದ ಬಯಲು ಪುಸ್ತಕ ಭಂಡಾರ, ರಂಗ ಮಂಟಪ, ವಿಶಾಲವಾದ ಸಭಾಭವನ ಮತ್ತು ಕಂಪ್ಯೂಟರ ಶಿಕ್ಷಣ ಸೌಕರ್ಯಗಳನ್ನು ಹೊಂದಿರುವ ವಿದ್ಯಾಮಂದಿರ ಊಟವನ್ನು ವಿದ್ಯೆಯನ್ನೂ ಕೊಟ್ಟ ಈ ಸಂಸ್ಥೆಯನ್ನೂ, ಶ್ರೀಗಳವರನ್ನೂ

ನೆನೆಯದ ಹಳೆ ವಿದ್ಯಾರ್ಥಿಗಳಿಲ್ಲ. ಪ್ರಸ್ತುತ ಸಾವಿರದಷ್ಟು ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿರುವರು.

ಉಡುಪಿಯ ಹತ್ತಿರದ ಇಂದ್ರಾಳಿಯಲ್ಲಿ ಪ್ರತಿಷ್ಠಿತ ಸಂಸ್ಥೆಯಾಗಿ ಬೆಳೆದ ಎಂ.ಜಿ.ಎಂ. ಕಾಲೇಜಿನ ಸುತ್ತಮುತ್ತಲಿನ ಅಪಾರ ಪ್ರಮಾಣದ ಎಕರೆಗಟ್ಟಲೆ ಜಾಗವನ್ನು ವಿದ್ಯಾಸಂಸ್ಥೆಗೆ ಧಾರೆಯೆರೆದ ಶ್ರೀಗಳವರ ವಿದ್ಯಾಪ್ರೇಮ ಅಪಾರವಾದುದು. ಯಕ್ಷಗಾನ ಕಲಾಕೇಂದ್ರವಿರುವ ಪ್ರದೇಶವನ್ನು ಆ ಕೇಂದ್ರಕ್ಕೆ ದಾನ ನೀಡಿದ ಶ್ರೀಗಳವರ ಕಲಾಪ್ರೇಮ ಶ್ಲಾಘನೀಯವಾದುದು.

ಮಣಿಪಾಲದ ಶಿಲ್ಪಿ ದಿ. ಮಾಧವ ಪೈಗಳು ಮಣಿಪಾಲದಲ್ಲಿ ಕಸ್ತೂರ್ಬಾ ಮೆಡಿಕಲ್ ಕಾಲೇಜ್ ಆಸ್ಪತ್ರೆಯನ್ನು ನಿರ್ಮಿಸುವ ಸಂದರ್ಭದಲ್ಲಿ ಶ್ರೀ ಶ್ರೀವಿಶ್ವೋತ್ತಮ ಶ್ರೀಪಾದರು ಐವತ್ತು ಸಾವಿರ ರೂಪಾಯಿ ದೇಣಿಗೆಯಾಗಿ ನೀಡಿ ಇಂದಿನ ಮಣಿಪಾಲದ ವೈಭವಕ್ಕೆ ಕಾರಣೀಭೂತರಾಗಿದ್ದಾರೆ. ಅರವತ್ತು ವರ್ಷಗಳ ಹಿಂದೆ ಜಗತ್ತು ತೀವ್ರ ಹಣದುಬ್ಬರ ಎದುರಿಸುತ್ತಿದ್ದ ಸಂದರ್ಭದಲ್ಲಿ ಈ ಅಮೂಲ್ಯ ಕೊಡುಗೆ ಶ್ರೀ ಮಠದಿಂದ ಹರಿದು ಬಂದಿದೆ ಎಂಬುದು ಗಮನಾರ್ಹ.

**ಶ್ರೀ ವಿಶ್ವೋತ್ತಮರ ವಿಶೇಷತೆಗಳು :**

ಶ್ರೀ ವಿಶ್ವೋತ್ತಮ ತೀರ್ಥರು ಶಿಷ್ಯರ ವಿತ್ತಾಪಹಾರಕರಲ್ಲ. ಚಿತ್ತಾಪಹಾರಕರು.

೧. ತಮ್ಮ ಮಠದ ಅಭಿವೃದ್ಧಿಕಾರ್ಯದ ಬಗ್ಗೆ ಅವರು ದೇಣಿಗೆ ನೀಡುವಂತೆ ಯಾರನ್ನೂ ಕೇಳುತ್ತಿರಲಿಲ್ಲ. ಅವರಿಗೆ ಯಾರಾದರೂ ಕಾಣಿಕೆ ಅರ್ಪಿಸಿದರೆ ಆವಾಗ ಕೊಟ್ಟಿದ್ದರಲ್ಲ. ಪುನಃ ಮತ್ತೇಕೆ ? ಎಂತ ಹೇಳುತ್ತಿದ್ದರು.

೨. ಅವರು ಜೀವನದಲ್ಲಿ ಒಮ್ಮೆಯೂ ಫೋನನ್ನು ಬಳಸಲಿಲ್ಲ. ಎಲ್ಲಾದರೂ ನೆಲದ ಮೇಲೆ ತುಳಸಿ ಬಿದ್ದದ್ದು ಅವರಿಗೆ ಗೋಚರಿಸಿದರೆ ಅದನ್ನು ಯಾರೂ ತುಳಿಯದ ಸ್ಥಳಕ್ಕೆ ಸ್ವತಃ ಒಯ್ದಿಡುತ್ತಿದ್ದರು.

೩. ಅವರು ಯಾರ ಮೇಲೆ ಕೋಪಿಸಿಕೊಳ್ಳುತ್ತಿರಲಿಲ್ಲ. ಎಲ್ಲರೊಂದಿಗೆ ಮೃದುವಾಗಿ ಮೆಲ್ಲಗೆ ಮಾತನಾಡುತ್ತಿದ್ದರು.

ಶ್ರೀ ವಿಶ್ವೋತ್ತಮ ಗುರುವರ್ಯರು ಶ್ರೀ ಮಧ್ವಾಚಾರ್ಯರು ಹಾಗೂ ಶ್ರೀ ವಾದಿರಾಜ ಗುರುಗಳು ಹಾಕಿಕೊಟ್ಟ ಸತ್ಸಂಪ್ರದಾಯದ ಉಲ್ಲಂಘನೆ ಸಹಿಸುತ್ತಿರಲಿಲ್ಲ. ಅದನ್ನು ವಿರೋಧಿಸುತ್ತಿದ್ದರು.

೧. ಶ್ರೀ ವಾದಿರಾಜರ ಋಜುತ್ವ ವಿಷಯದಲ್ಲಿ ಅಚಲವಾದ ನಂಬಿಗೆಯುಳ್ಳವರಾಗಿದ್ದರು. ಅದನ್ನು ವಿರೋಧಿಸಿ ಕೆಲವರು ಲೇಖನಾದಿಗಳನ್ನು ಬರೆದಾಗ ಶ್ರೀ ಹೆಚ್. ಸುಬ್ಬರಾವ್ ಮೊದಲಾದ ಪಂಡಿತೋತ್ತಮರಿಂದ ಪುಸ್ತಕಾದಿಗಳನ್ನು ಬರೆಸಿ ಪ್ರಕಟಿಸುವ ಮೂಲಕ ತಮ್ಮ ನಿಲುವು ಸಮರ್ಥಿಸುತ್ತಿದ್ದರು.

೨. ಶ್ರೀ ಮಧ್ವಾಚಾರ್ಯ ಹಾಗೂ ಶ್ರೀ ವಾದಿರಾಜರು ಆರ್ಯಭಟ್ ಸಿದ್ಧಾಂತದಂತೆ ಏಕಾದಶಿ ತಿಥಿಯನ್ನು ಆಚರಿಸುತ್ತಿದ್ದುದನ್ನು ಬದಲಾಯಿಸಿ ದೃಕ್ಸಿದ್ಧಾಂತದಂತೆ ಏಕಾದಶಿ ಆಚರಿಸಬೇಕೆಂದು ಹೇಳಿ ಆಚರಣೆ ತಂದ ಶ್ರೀ ವಿದ್ಯಾಮಾನ್ಯರ ಅಭಿಪ್ರಾಯವನ್ನು ಒಪ್ಪದೆ

ಹಿಂದಿನ ಸಂಪ್ರದಾಯದಂತೆ ಏಕಾದಶಿ ತಿಥಿ ಆಚರಿಸುವುದೇ ಸರಿಯಾದುದು ಎಂದು ಸಮರ್ಥಿಸಿ, ಅದನ್ನು ಆಚರಿಸುತ್ತಿದ್ದರು.

೩. ಪುತ್ತಿಗೆ ಶ್ರೀಗಳವರ ವಿದೇಶಯಾನ ಶಾಸ್ತ್ರ ವಿರೋಧಿಯೆಂಬ ಕಾರಣದಿಂದ ಬೆಂಬಲಿಸಲಿಲ್ಲ.

**ಯಾತ್ರೆ :** ಶ್ರೀ ವಿಶ್ವೋತ್ತಮತೀರ್ಥರು ಭಾರತದ ಪ್ರಮುಖ ತೀರ್ಥ ಕ್ಷೇತ್ರಗಳಾದ ಬದರಿಯನ್ನು ಎರಡು ಬಾರಿ ಯಾತ್ರೆ ಮಾಡಿದ್ದರು. ಪ್ರಯಾಗ, ಕಾಶಿ, ತಿರುಪತಿ, ಘಟಿಕಾಚಲ, ರಾಮೇಶ್ವರ, ಗಂಡಕಿ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿ ಕ್ಷೇತ್ರಸ್ಥರಿಂದ ಅನುಗ್ರಹಿತರಾಗಿದ್ದರು.

ಇಷ್ಟೇ ಅಲ್ಲದೆ ಪ್ರಸಿದ್ಧ ದಾಸಕ್ಷೇತ್ರಗಳಾದ ಮಂತ್ರಾಲಯ, ವಿಜಯದಾಸರ ಕಟ್ಟೆಯಿರುವ ಚಿಪ್ಪಗಿರಿ, ಗೋಪಾಲದಾಸರ ಉತ್ತನೂರು, ಜಗನ್ನಾಥದಾಸರ ಮಾನವಿ, ಶ್ರೀ ವಿಷ್ಣುತೀರ್ಥರ ಮಾದನೂರು ಮುಂತಾದ ಕ್ಷೇತ್ರಗಳಲ್ಲಿರುವ ದಾಸರ ಸನ್ನಿಧಾನ ಸಂದರ್ಶಿಸಿರುವರು.

**ಶಿಷ್ಯ ಸ್ವೀಕಾರ :** ನಾಲ್ಕನೆಯ ಪರ್ಯಾಯದ ನಂತರ ಭಗವತ್ಸಂಕಲ್ಪವನ್ನರಿತ ಶ್ರೀಗಳವರು ಯೋಗ್ಯ ಉತ್ತರಾಧಿಕಾರಿಯನ್ನು ಹುಡುಕಲಾರಂಭಿಸಿದರು. ವಟುವಿನ ಜಾತಕ ಪರಿಶೀಲನೆಯಾದ ಬಳಿಕ ಶ್ರೀ ಭೂತರಾಜರ ಪ್ರಸಾದದ ನಂತರ ಶಿಷ್ಯನನ್ನು ಸ್ವೀಕಾರ ಮಾಡುವುದೆಂದು ಶ್ರೀ ವಿಶ್ವೋತ್ತಮ ತೀರ್ಥರು ಹಲವಾರು ವರ್ಷ ಸಾಕಷ್ಟು ಪ್ರಯತ್ನ ಮಾಡಿದ ಬಳಿಕ ಯೋಗ್ಯ ವಟು ದೊರಕಿದರು.

ಉಡುಪಿಯಿಂದ ಐದು ಕಿ.ಮೀ. ದೂರದಲ್ಲಿರುವ ಪಾಡಿಗಾರು ಎಂಬ ಊರಲ್ಲಿ ಶ್ರೀನಿವಾಸ ತಂತ್ರಿ ಮತ್ತು ವೇದಾವತಿ ಎಂಬ ಸಾತ್ವಿಕರಾದ ಭಗವದ್ಭಕ್ತ ದಂಪತಿಗಳು ವಾಸವಾಗಿದ್ದರು. ಶ್ರೀನಿವಾಸ ತಂತ್ರಿಗಳು ಕೃಷ್ಣಾಪುರ ಮಠದ ಆಸ್ಥಾನ ಪುರೋಹಿತರು. ಪೌರೋಹಿತ್ಯ ವೃತ್ತಿಯಿಂದ ಜೀವನ ಸಾಗಿಸುತ್ತಿದ್ದರು. ಇವರಿಗೆ ಮೂವರು ಪುತ್ರರು ಮೊದಲನೆಯವರು ಮಧ್ವೇಶ, ಮಧ್ಯದವರು ರಾಘವ ಹಾಗೂ ಕೊನೆಯವರು ತ್ರಿವಿಕ್ರಮರೆಂಬುವವರು. ಈ ದಂಪತಿಗಳ ಮಧ್ಯಮ ಪುತ್ರ ರಾಘವ ತಂತ್ರಿಯ ಜಾತಕ ಸೂಕ್ತ ಎಂದು ಕಂಡುಬಂದ ಬಳಿಕ ಭೂತರಾಜರ ಬಳಿ ಪ್ರಸಾದ ಕೇಳಿದಾಗ 'ಆಗಬಹುದು' ಎಂಬ ಉತ್ತರ ಬಂದಿತು. ಶ್ರೀನಿವಾಸ ತಂತ್ರಿ ದಂಪತಿಗಳು ತಮ್ಮ ಮಗನನ್ನು ಸಂತೋಷದಿಂದ ವೇದಾಂತ ಸಾಮ್ರಾಜ್ಯಕ್ಕೆ ನೀಡಲು ಮುಂದಾದರು.

ಎಸ್.ಎಸ್.ಎಲ್.ಸಿ.ವರೆಗೂ ಲೌಕಿಕ ಶಿಕ್ಷಣ ಓದಿದ್ದ ರಾಘವ ತಂತ್ರಿಗೆ ಧಾರ್ಮಿಕ, ಆಧ್ಯಾತ್ಮ ಹಾಗೂ ವೇದಾಂತದಲ್ಲಿಯೂ ಆಸಕ್ತಿಯಿತ್ತು.

**ಸನ್ಯಾಸದ ವಿಧಿವಿಧಾನಗಳು :**

ತಾ|| ೧೧-೬-೨೦೦೬ನೇ ಭಾನುವಾರ ದಿನದಂದು ಯತ್ಯಾಶ್ರಮ ಸ್ವೀಕರಿಸುವ ರಾಘವತಂತ್ರಿಗಳು ಪಾಡಿಗಾರುನಲ್ಲಿರುವ ತಮ್ಮ ಗೃಹದಲ್ಲಿ ತಂದೆತಾಯಿ ಸಹೋದರರೊಂದಿಗೆ ತಮ್ಮ ಮನೆಯ ದೇವರಲ್ಲಿ ಪ್ರಾರ್ಥನೆ ಮಾಡಿ ಬೆಳಿಗ್ಗೆ ಹನ್ನೊಂದು ಘಂಟೆ ಸಮಯದಲ್ಲಿ ವ್ಯಾನಿನಲ್ಲಿ ಹೊರಟು ಸಾಯಂಕಾಲ ಸೋದೆ ತಲ್ಪಿದರು. ಅಲ್ಲಿ ಶ್ರೀ ವಿಶ್ವೋತ್ತಮತೀರ್ಥರು ದೇವರಿಗೆ ಶ್ರೀ ವಾದಿರಾಜರಿಗೆ ಹಾಗೂ ಭೂತರಾಜರಿಗೆ ಪೂಜೆ ಮಾಡಿದ ನಂತರ ವಟು ಶ್ರೀ

ರಾಘವತಂತ್ರಿಗಳು ತಾಯಿ ತಂದೆ, ಸಹೋದರರ ಹಾಗೂ ಬಂಧು ಬಳಗದವರೊಂದಿಗೆ ದೇವರಿಗೆ ಪ್ರಾರ್ಥನೆ ಸಲ್ಲಿಸಿದರು.

**೧೨-೬-೨೦೦೬ ಸೋಮವಾರ :**

೧. ಪುಣ್ಯಾಹ ವಾಚನ ೨. ಆಚಾರ್ಯರಿಂದ ಋತ್ವಿಗ್ ಪಠಣ

೩. ಪವಮಾನ ಹೋಮ ನಡೆದವು. ಹಾಗೂ

ಪ್ರಾಯಶ್ಚಿತ್ತತೆಗಾಗಿ ೧. ಸರ್ವಪ್ರಾಯಶ್ಚಿತ್ತ ತಿಲಯಾಗ ೨. ಪಂಚಗವ್ಯ ಹೋಮ ೩. ಸರ್ವಪ್ರಾಯಶ್ಚಿತ್ತ ಕೂಷ್ಮಾಂಡಯಾಗ ೪. ಗಣಯಾಗಗಳು ನಡೆದವು.

**೧೩-೬-೨೦೦೬ನೇ ಮಂಗಳವಾರ :**

ಸನ್ಯಾಸಾಶ್ರಮಕ್ಕೆ ಅಂಗಭೂತವಾಗಿ ನವಶ್ರಾದ್ಧ, ಷೋಡಶ ಶ್ರಾದ್ಧ ಹಾಗೂ ಜೀವಶ್ರಾದ್ಧಗಳನ್ನು ಮಾಡಿಸಿದ ನಂತರ ತಿರುಗಿ ಸ್ನಾನ ಮಾಡಿ ಪ್ರಾಯಶ್ಚಿತರೂಪವಾಗಿ ಗೋದಾನ ದಶದಾನಾದಿಗಳನ್ನು ಕೊಡಲಾಯಿತು. ನಂತರ ಸನ್ಯಾಸ ಸ್ವೀಕಾರಕ್ಕೆ ಯೋಗ್ಯತೆ ಸಿದ್ಧಿಗಾಗಿ ಕೃಚ್ಛ್ರಾಚರಣೆ ಹಿರಣ್ಯಾದಿ ದಾನಗಳನ್ನು ಮಾಡಲಾಯಿತು. ನಂತರ ಏಳು ಕೂದಲನ್ನು ಉಳಿಸಿ ವಪನ ಮಾಡಿಸಿಕೊಂಡು ಸ್ನಾನ ಮಾಡಿದ ನಂತರ ಗೋಮಯ, ಮೃತ್ತಿಕಾ ಸ್ನಾನ ಮಾಡಿ ವಿಧಿಪೂರ್ವಕ ಸಂಕಲ್ಪ ಮಾಡಿ ೧೦೮ ಸಲ ಮುಳುಗಿ ಸ್ನಾನ ಮಾಡಿದರು.

ಇಂದು ಸಾಯಂಕಾಲ ಪುಣ್ಯಾಹವಾಚನ, ದಧಿಸಕ್ತು ಪ್ರಾಶನ, ಪಂಚಗವ್ಯ ಪ್ರಾಶನ, ಶಾಕಲ ಹೋಮ ನಡೆಸಲಾಯಿತು. ನಂತರ ಪಟ್ಟಾಭಿಷೇಕದ ಕಲಶ ಸ್ಥಾಪನೆ ಮಾಡಲಾಯಿತು.

**೧೪-೬-೨೦೦೬ನೇ ಬುಧವಾರ :**

ಬೆಳಿಗ್ಗೆ ನಿತ್ಯಾನ್ಹಿಕ ಮಾಡಿದ ನಂತರ ಪುರುಷಸೂಕ್ತ ಹೋಮ, ವಿರಜಾ ಹೋಮ, ಅಷ್ಟಾಕ್ಷರ ಹೋಮಗಳನ್ನು ಮಾಡಲಾಯಿತು. ನಂತರ ಶಾಸ್ತ್ರೋಕ್ತರೀತಿಯಿಂದ ಏಳು ಕೇಶವನ್ನು ಕೈಯಿಂದ ಕೀಳುತ್ತಾ ಸ್ನಾನ ಮಾಡಿದರು. ನಂತರ ಮೂರು ಸಲ ಮುಳುಗಿ ಶಿಖಾಯಜ್ಞೋಪವಿತ, ಉತ್ತರೀಯ ವಸ್ತ್ರಗಳನ್ನು ನೀರಿನಲ್ಲಿ ವಿಸರ್ಜಿಸಿದರು. ಆಮೇಲೆ ಗೃಹಸ್ಥಾಶ್ರಮಿಗಳು ಕೊಟ್ಟ ಕಟಿಸೂತ್ರ, ಕೌಪೀನ, ಎರಡು ಕಾವಿ ಶಾಟಿಗಳನ್ನು ಧರಿಸಿ ದಂಡ ಸ್ವೀಕರಿಸಿದರು. ನಂತರ ಋತ್ವಿಕರಿಂದ ಕಲಶ ಮಾರ್ಜನೆ ನಡೆಯಿತು. ಗೃಹಸ್ಥರು ನೀಡಿದ ಕಮಂಡಲು ಸ್ವೀಕರಿಸಿ ಜಪಮಾಲಿಕಾಧಾರಣೆ ಮಾಡಿದರು. ನಂತರ ಅಜಿನ ನೀಡಿದ್ದನ್ನು ಸ್ವೀಕರಿಸಿದರು.

ನಂತರ ನೂತನ ಯತಿಗಳು ಪ್ರಾಣದೇವರಿಗೆ ಪ್ರದಕ್ಷಿಣೆ ಮಾಡಿ ಶ್ರೀ ತ್ರಿವಿಕ್ರಮದೇವರಿಗೆ ಪ್ರದಕ್ಷಿಣೆ ಬಂದು ಮಧ್ವದ ಗುಡಿಗೆ ಬಂದರು. ಅಲ್ಲಿದ್ದ ಶ್ರೀ ವಿಶ್ವೋತ್ತಮತೀರ್ಥರು ನವಗ್ರಹ ಧಾನ್ಯ ದಾನ ಮಾಡಿದರು. ಆಮೇಲೆ ಪಟ್ಟಾಭಿಷೇಕ ಕಾರ್ಯಕ್ರಮ ನಡೆಯಿತು. ಚೆನ್ನಾಗಿ ಪೂಜಿಸಲ್ಪಟ್ಟ ಪಟ್ಟಾಭಿಷೇಕ ಕಲಶ ತೀರ್ಥವನ್ನು ಶಂಖದಲ್ಲಿ ತುಂಬಿಸಿ ಆ ಶಂಖವನ್ನು ಹನ್ನೆರಡು ಬಾರಿ ಪ್ರಣವ ಮಂತ್ರಗಳಿಂದ ಅಭಿಮಂತ್ರಿಸಿ ಶಂ.ನ ಸೂಕ್ತ ಪುರುಷ ಸೂಕ್ತ ಮಂತ್ರಗಳಿಂದ ಶಿಷ್ಯನಿಗೆ ಪ್ರೋಕ್ಷಿಸಿ, ವೇದಾಂತವಿದ್ಯೆಯನ್ನು ಪರಿಪಾಲಿಸುವುದಕ್ಕಾಗಿ ಪಟ್ಟಾಭಿಷೇಕದ ಅಂಗವಾಗಿ ಪೂರ್ಣಕಲಶವನ್ನು ಅಭಿಷೇಕ ಮಾಡಿದರು. ನಂತರ ನೂತನ ಯತಿಗಳಿಗೆ "ಶ್ರೀವಿಶ್ವವಲ್ಲಭ ತೀರ್ಥರು" ಎಂಬುದಾಗಿ ನಾಮಕರಣ ಮಾಡಿದರು.

ನಂತರ ಉಭಯ ಶ್ರೀಪಾದಂಗಳವರು ಪಂಚವೃಂದಾವನ ಗುಡಿ ಪ್ರವೇಶಿಸಿ, ಶ್ರೀ ವೇದವ್ಯಾಸದೇವರ, ಶ್ರೀ ವಾದಿರಾಜ ಗುರುಗಳ, ಶ್ರೀ ವೇದವೇದ್ಯರ ಹಾಗೂ ಭೂತರಾಜರ ದರ್ಶನ ಪಡೆದರು. ನಂತರ ವಾದಿರಾಜರ ವೃಂದಾವನದ ಎದುರು, ಗುರುಗಳು ಶಿಷ್ಯನ ಬಲಗಿವಿಯಲ್ಲಿ ಮೂರು ಬಾರಿ ಪ್ರಣವ ಮಂತ್ರವನ್ನು ಉಚ್ಚರಿಸಿ ಅದರ ಋಷಿದೇವತೆ, ಛಂದಸ್ಸುಗಳನ್ನು ಉಪದೇಶಿಸಿದರು. ಶಿಷ್ಯನಿಂದ ಮೂರು ಪ್ರತಿಜ್ಞೆ ಮಾಡಿಸಿದರು.

ನಂತರ ಶಿಷ್ಯನ ತಲೆಯ ಮೇಲೆ ಕೈಯಿಟ್ಟು ರಹಸ್ಯ ಉಪದೇಶ ಮಾಡಿದರು. ಹಾಗೂ ಪ್ರತಿದಿನವೂ ವಿಚ್ಛತ್ತಿಯಿಲ್ಲದೆ ಪರಮಾತ್ಮನ ಪೂಜೆ, ಪ್ರಣವ ಮಂತ್ರಾದಿ ಜಪ ಧ್ಯಾನ ಮತ್ತು ಸರ್ವಕರ್ಮ ಸಮರ್ಪಣೆ ಮಾಡಬೇಕು. (ಯತಿಗಳಿಗೆ ಒಂದು ಸಾವಿರ ಪ್ರಣವ ಜಪವು ಕನಿಷ್ಟ, ಮೂರು ಸಾವಿರ ಮಂತ್ರ ಜಪವು ಮಧ್ಯಮ, ಅದಕ್ಕಿಂತ ಅಧಿಕ ಜಪ ಉತ್ತಮವು)

ಶಿಷ್ಯನಿಗೆ ಉಪದೇಶಿಸಿದ ಪ್ರಮುಖವಾದವುಗಳೆಂದರೆ "ವಿಷ್ಣು ಸರ್ವೋತ್ತಮತ್ವ ಪ್ರತಿಪಾದುಕವಾದ ಶಾಸ್ತ್ರವನ್ನು ಸರ್ವದಾ ಕೇಳು; ವೇದಾರ್ಥ ಚಿಂತನ ಶೀಲನಾಗಿ ಉಪನಿಷತ್ತುಗಳನ್ನು, ವೇದಗಳನ್ನೂ ಶ್ರವಣ ಮಾಡು; ಇತಿಹಾಸ ಪುರಾಣ ಪಂಚರಾತ್ರಾದಿಗಳನ್ನು ಅಧ್ಯಯನ ಮಾಡಿ ಅವುತಗಳ ಅರ್ಥವನ್ನು ಬ್ರಹ್ಮಸೂತ್ರದ ಮೂಲಕ ದೃಢ ಪಡಿಸಿಕೊಂಡು ವಿಷ್ಣು ಸರ್ವೋತ್ತಮತ್ವವನ್ನು ಸರ್ವದಾ ಪ್ರತಿಪಾದಿಸು".

ನಂತರ ಉಭಯ ಶ್ರೀಗಳೂ ಧವಳಗಂಗೆಯಲ್ಲಿ ದಂಡೋದಕ ತರ್ಪಣವಿತ್ತರು.

ಮಧ್ಯಾಹ್ನ ಸಾವಿರಾರು ಭಕ್ತರಿಗೆ ಅನ್ನ ಸಂತರ್ಪಣೆಯಾಯಿತು.

ಮಧ್ಯಾಹ್ನ ನಾಲ್ಕು ಘಂಟೆಗೆ ಭಕ್ತರಿಂದ ನೂತನ ಶ್ರೀಗಳವರಿಗೆ ಮಾಲಾರ್ಪಣೆ ಕಾಣಿಕೆ ಸಮರ್ಪಣೆ ನಡೆಯಿತು. ನಿಪ್ಪಾಣಿ ಗುರುರಾಜಾಚಾರ್ಯರಿಂದ ಶುಭಾಸಂಶನೆ ಹಾಗೂ ಶ್ರೀ ವಿಶ್ವೋತ್ತಮತೀರ್ಥರು ಅನುಗ್ರಹ ಭಾಷಣ ಮಾಡಿದರು.

ನೂತನ ಯತಿಗಳನ್ನು ಶಾಸ್ತ್ರಾಧ್ಯಯನಕ್ಕಾಗಿ ತಮ್ಮ ವಿದ್ಯಾಶಿಷ್ಯರಾದ ಕೃಷ್ಣಾಪುರ ಮಠಾಧೀಶರಾದ ಶ್ರೀವಿದ್ಯಾಸಾಗರ ತೀರ್ಥ ಶ್ರೀ ಪಾದಂಗಳವರಲ್ಲಿ ಕಳುಹಿಸಿದರು.

ಶ್ರೀ ವಿಶ್ವೋತ್ತಮ ಗುರುಗಳು ಅಂದು ಶ್ರೀ ಕೃಷ್ಣಾಪುರ ಮಠಾಧೀಶರಿಗೆ ಉಪದೇಶಿಸಿದ ವಿದ್ಯೆಯೇ ಇಂದು ಶ್ರೀ ವಿದ್ಯಾಸಾಗರ ತೀರ್ಥ ಶ್ರೀಗಳವರ ಮೂಲಕ ಶ್ರೀವಿಶ್ವವಲ್ಲಭತೀರ್ಥರಿಗೆ ವಿದ್ಯೋಪದೇಶ ರೂಪದಲ್ಲಿ ಲಭಿಸುತ್ತಿರುವುದು ಶ್ರೀ ವಿಶ್ವೋತ್ತಮತೀರ್ಥರ ತಪಸ್ಸಿನ ಫಲ ರೂಪವೇ ಆಗಿದೆ.

**ಭಾವಿ ಸಮೀರ ತತ್ವ ಪ್ರಸಾರಣ ಪ್ರತಿಷ್ಠಾನ ಸ್ಥಾಪನೆ :**

ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರು ಶ್ರೀ ಹರಿಗುರುಗಳ ಪ್ರೇರಣೆಯಂತೆ ಉದಾತ್ತಧ್ಯೇಯದೊಂದಿಗೆ ಭಾವಿ ಸಮೀರ ತತ್ವಪ್ರಸಾರಣ ಪ್ರತಿಷ್ಠಾನವನ್ನು ಪ್ರಾರಂಭಿಸಿದರು. ತನ್ಮೂಲಕ ತಮ್ಮ ಕನಸಿನ ಕೂಸಾದ ಭಾವಿ ಸಮೀರ ಗುರುಕುಲವನ್ನು ಜೂನ್ ೨೦೦೬ರಲ್ಲಿ ಪ್ರಾರಂಭಿಸಿದರು. ಪ್ರತಿಷ್ಠಾನ ಮುಖೇನ ಇನ್ನೂ ಅನೇಕ ಕಾರ್ಯಗಳನ್ನು ಸಾಧಿಸುವ ಸಂಕಲ್ಪ ಸದಾಶಯ ಅವರದಾಗಿತ್ತು. ಸುಸಜ್ಜಿತ ಗ್ರಂಥಾಲಯ, ಸಂಶೋಧನಕೇಂದ್ರ ಹಸ್ತಪ್ರತಿಗಳ ಸಂಗ್ರಹ

ಗ್ರಂಥ ಪ್ರಕಾಶನ, ಮಾಸ ಪತ್ರಿಕೆ ಪ್ರಕಟಿಸುವುದು, ವಿದ್ವಾಂಸರ ಪೋಷಣೆ ಮುಂತಾದವುಗಳೆಲ್ಲಾ ಪೂಜ್ಯರ ಸಂಕಲ್ಪದ ವಿವಿದೋದ್ದೇಶಗಳು. (ಈಗ ಒಂದು ವರ್ಷದ ಹಿಂದೆ ಸೋದೆಮಠ ಹಾಗೂ ಪ್ರಕೃತ ಪ್ರತಿಷ್ಠಾನದಿಂದ ಸಂಯುಕ್ತವಾಗಿ 'ತತ್ವ ಮಲ್ಲಿಕಾ' ಎನ್ನುವ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. ಹಾಗೂ ಕೆಲವು ಕಿರು ಹೊತ್ತಿಗೆಗಳನ್ನು ಪ್ರಕಟಿಸಿದ್ದಾರೆ.)

**ಅವತಾರ ಪರಿಸಮಾಪ್ತಿ :**

ಶ್ರೀ ವಿಶ್ವೋತ್ತಮತೀರ್ಥರಿಗೆ ಶ್ರೀ ವಾದಿರಾಜರ ಪಾವನ ಸನ್ನಿಧಿ ಸೋದೆಯೆಂದರೆ ಸರ್ವಸ್ವ ಚಾತುರ್ಮಾಸ್ಯಾದಿ ಪರ್ವಕಾಲದಲ್ಲಿ ಅಲ್ಲಿಯೇ ಇದ್ದು ಜಪ-ತಪ-ವ್ರತ ಆಚರಿಸುತ್ತಿದ್ದರು.

**"ಭೂವೈಕುಂಠವೆಂದೇ ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ನಿರಂತರವಾಗಿ ನೆಲಸಬೇಕೆಂಬುದೇ ತಮ್ಮ ಇಚ್ಛೆ ಶ್ರೀ ಭೂವರಾಹ-ಹಯಗ್ರೀವ ದೇವರೂ, ಶ್ರೀ ಮದ್ವಾದಿರಾಜರೂ ಅನುಗ್ರಹಿಸಿದರೆ ಇದು ಖಂಡಿತಾ ಸಾಧ್ಯವಾಗುತ್ತದೆ"**. ಎಂಬುದಾಗಿ ಶ್ರೀ ವಿಶ್ವೋತ್ತಮತೀರ್ಥರು ಹಲವಾರು ಜನರಿಗೆ ತಮ್ಮ ಅಭಿಲಾಷೆ ವ್ಯಕ್ತಪಡಿಸಿದ್ದರು. ಇದಕ್ಕೆ ಪೂರಕವಾದ ಘಟನೆಯೊಂದು ನಡೆಯಿತು.

ಇತ್ತೀಚೆಗೆ ಮರದ ಕೊಂಬೆಯೊಂದು ಒಂಬತ್ತು ಜನ ಯತಿಗಳ ವೃಂದಾವನವಿರುವ ಕಟ್ಟಡದ ಗೋಡೆ ಮೇಲೆ ಬಿದ್ದು ಜಖಂಗೊಂಡಿತು. ಆ ಕಟ್ಟಡವು ವೃಂದಾವನಗಳಿಂದ ತುಂಬಿ ಹೋಗಿತ್ತು. ಸ್ವಲ್ಪ ಸ್ಥಳವೂ ಅಲ್ಲಿ ಖಾಲಿ ಇರಲಿಲ್ಲ. 'ಮುಂದೆ ಇದು ಬೇಕಾಗುತ್ತದೆಯೆಂತ' ಸ್ವಲ್ಪ ಜಾಗ ಸೇರಿಸಿಕೊಂಡು ಶ್ರೀ ಭೂವರಾಹ ಸ್ವಾಮಿಗಳ ವೃಂದಾವನ ಪಕ್ಕದಲ್ಲಿ ಗೋಡೆ ಕಟ್ಟಿಸಿದರು.

ಶ್ರೀಗಳವರು ೭೩ ವಸಂತಗಳನ್ನು ಕಂಡವರು ಆಶ್ರಮ ಜೀವನದ ೬೪ ವರ್ಷಗಳಷ್ಟು ಸಾರ್ಥಕ ಪಡಿಸಿಕೊಂಡವರು. ಅವರ ಬೇರೆಯವರ ಸಹಾಯವಿಲ್ಲದೆ ಪೂಜಾದಿ ಕೈಂಕರ್ಯವನ್ನು ತಾವೊಬ್ಬರೆ ವಿಧಿವತ್ತಾಗಿ ನ್ಯೂನತೆಯಿಲ್ಲದೆ ಅಚ್ಚುಕಟ್ಟಾಗಿ ಸಮಯಕ್ಕನುಗುಣವಾಗಿ ನಡೆಸಿಕೊಂಡು ಬಂದವರು. ಶ್ರೀಗಳವರು ಕ್ರಿ.ಶ. ೨೦೦೭ನೇ ಇಸ್ವಿ ವರ್ಷದಲ್ಲೂ ಪ್ರತಿವರ್ಷದಂತೆ ಪರಮ ಪಾವನವಾದ ಸೋದಾಕ್ಷೇತ್ರದಲ್ಲಿ ಚಾತುರ್ಮಾಸ ಸಂಕಲ್ಪ ಕೈಗೊಂಡಿದ್ದರು. ಕಿರಿಯ ಶ್ರೀಗಳಾದ ಶ್ರೀ ವಿಶ್ವವಲ್ಲಭರು ಉಡುಪಿಯಲ್ಲಿ ಶ್ರೀ ಕೃಷ್ಣಾಪುರ ಶ್ರೀಗಳಲ್ಲಿ ಪಾಠ ಕಲಿಯುತ್ತಾ ಚಾತುರ್ಮಾಸ ದೀಕ್ಷೆ ಕೈಗೊಂಡಿದ್ದರು.

ತಾ॥ ೧೮-೮-೨೦೦೭ನೇ ಶನಿವಾರ ನಾಗರ ಪಂಚಮಿದಿನದಂದು ಮಾಮೂಲಿನಂತೆ ಗುರುಗಳು ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ಸ್ನಾನ ಮಾಡಿ ಜಪ ತಪಾನುಷ್ಠಾನಗಳನ್ನು ಮುಗಿಸಿ ಸಂಸ್ಥಾನದ ಪಟ್ಟದ ದೇವರುಗಳಾದ ಶ್ರೀ ಭೂವರಾಹ, ಶ್ರೀ ಹಯಗ್ರೀವ, ಶ್ರೀವೇದ ವ್ಯಾಸರ ಪೂಜೆಯನ್ನು ಮಾಡಿದರು. ಹಾಗೆಯೇ ಶ್ರೀ ಮುಖ್ಯಪ್ರಾಣ ದೇವರ, ಶ್ರೀವಾದಿರಾಜರ, ಶ್ರೀ ಭೂತರಾಜರ ಪೂಜೆಗಳನ್ನು ಮಾಡಿದ ಮೇಲೆ ನೆರೆದ ೪೦೦ಕ್ಕೂ ಅಧಿಕ ಭಕ್ತ ಜನರಿಗೆ ತೀರ್ಥ ವಿತರಣೆ ಮಾಡಿದರು. ನಂತರ ಕೀರ್ತಿಶೇಷ ಶ್ರೀ ಗುರುಗೋವಿಂದ ವಿಠಲದಾಸರ ಆರಾಧನಾ ರಜತೋತ್ಸವವನ್ನು ಉದ್ಘಾಟಿಸಲು ರಾಜಾಂಗಣದ ವೇದಿಕೆಗೆ ಆಗಮಿಸಿದರು. ವೇದ ಘೋಷ ಪ್ರಾರ್ಥನೆಯ ನಂತರ ದೀಪ ಬೆಳಗಿ ಕಾರ್ಯಕ್ರಮ ಉದ್ಘಾಟಿಸಿದರು. ಶ್ರೀ ಗುರು ಗೋವಿಂದ ವಿಠಲದಾಸರು ಗೈದ ಶ್ರೀ ರಾಜರ ಋಜುತ್ವ ಮಹಿಮಾವನ್ನು ಉಲ್ಲೇಖಿಸುತ್ತಾ

"ಸರ್ವರೂ ಶ್ರೀ ವಾದಿರಾಜರ ಋಜುತ್ವ ಮಹಿಮಾ ಪ್ರಸಾರವನ್ನು ಯಾವುದಾದರೊಂದು ಪ್ರಕಾರದಿಂದ ಗೈದು ಜೀವನ ಸಾರ್ಥಕಗೊಳಿಸಬೇಕು" ಎಂದು ಅಪ್ಪಣೆಕೊಟ್ಟರು. (ಇದುವೇ ಶ್ರೀಗಳ ಚರಮ ಸಂದೇಶವಾಯಿತು)

ನಂತರ ವಿದ್ವಾನ್ ಶ್ರೀ ಪುಷ್ಕರ ಪ್ರಸಾದಾಚಾರ್ಯರ "ಉದ್ಬೋಧಕ ಉಪನ್ಯಾಸ"ವನ್ನು ಆಲಿಸುತ್ತಾ ಶ್ರೀಗಳವರು ಆನಂದ ತುಂದಿಲರಾದರು. ಶ್ರೀ ವಾದಿರಾಜರ ಋಜುತ್ವ ಮಹಿಮಾ ಜ್ಞಾನ ಸಂಪನ್ನ ಭಕ್ತಸ್ತೋಮವೇ ಅಲ್ಲಿ ಸೇರಿತ್ತು ಅಲ್ಲಿ ಇನ್ನೊಂದೆಡೆ ಶ್ರೀ ಸ್ವಾಪ್ನ ವೃಂದಾವನಾಖ್ಯಾನ ಹವನವೂ ನಡೆದಿತ್ತು. ಮಧ್ಯಾಹ್ನದ ನಂತರವೂ ಇನ್ನು ಬೇರೆ ಬೇರೆ ಕಾರ್ಯಕ್ರಮ ನಡೆಯಬೇಕಾಗಿತ್ತು. ಶ್ರೀಗಳವರು ತಾವು ಮಧ್ಯಾಹ್ನ ಸಭೆಗೆ ಇರುವುದಿಲ್ಲ. ತಮ್ಮ ಅನುಪಸ್ಥಿತಿಯಲ್ಲಿ ಸಭೆಯು ನಡೆಯಲಿ ಎಂದು ನುಡಿದರು. ಶ್ರೀಗಳಿಗೆ ಸಭೆಯಲ್ಲಿ ಹಾಕಿದ ಮಾಲೆಯನ್ನು ಸಾಮಾನ್ಯವಾಗಿ ತೆಗೆದು ಭಕ್ತಾದಿಗಳಿಗೆ ನೀಡುತ್ತಿದ್ದರು. ಆದರೆ ಇಂದು ಆಶ್ಚರ್ಯಕರವಾಗಿ ಅದನ್ನು ಹಾಗೆ ತೆಗೆದಿರಿಸಿದರು. ಅನಂತರ ಅದನ್ನು ಅವರ ದೇಹಾಂತ್ಯವಾದ ಮೇಲೆ ಅವರ ಭಾವಚಿತ್ರಕ್ಕೆ ಹಾಕಲಾಯಿತು. ಇದರಿಂದ ಅಂತ್ಯದ ಮುನ್ಸೂಚನೆ ಅವರಿಗಿತ್ತು ಎಂದು ಗೊತ್ತಾಗುತ್ತದೆ.

ಭಿಕ್ಷೆ ಸ್ವೀಕರಿಸಿ ಭಕ್ತರೆಲ್ಲರ ಪ್ರಸಾದ ಸ್ವೀಕಾರದ ನಂತರದಲ್ಲಿ ನೂರಾರು ಭಕ್ತರಿಗೆ ಸಾನುಗ್ರಹ ಮಂತ್ರಾಕ್ಷತೆ ನೀಡಿ ಹರಿಸಿದರು. ಕೊನೆಗೆ ಅಂದು ಯುಕ್ತಿಮಲ್ಲಿಕಾದ ಅನುವಾದವನ್ನು ಶ್ರೀಗಳವರಲ್ಲಿ ತೋರಿಸಿ ಅವರ ಅನುಗ್ರಹ ಪಡೆಯಲೆಂದು ಶ್ರೀ ವರಾಹವಿಠಲದಾಸರು ಬಂದು ಶ್ರೀಗಳಿಗೆ ಯುಕ್ತಿಮಲ್ಲಿಕಾದ ಅನುವಾದ ತೋರಿಸಲು ಶ್ರೀಗಳವರು ಸ್ವಲ್ಪ ಅವಲೋಕಿಸಿ ನಿಪ್ಪಾಣಿ ಆಚಾರ್ಯರಿಗೆ ತೋರಿಸಿ, ನಂತರ ಮುದ್ರಣ ಮಾಡಿಸುವಂತೆ ಸೂಚಿಸಿ ಅವರಿಗೆ ಮಂತ್ರಾಕ್ಷತೆ ನೀಡಿದರು. ಅವರು ಹೊರಬಾಗಿಲಿನತ್ತ ತೆರಳುತ್ತಿದ್ದಂತೆಯೇ, ಶ್ರೀಗಳವರು "ರಾಮ ರಾಮ ರಾಮ" ಎಂದು ೩ ಸಲ ರಾಮನಾಮ ಹೇಳುತ್ತಾ ಹಿಂದೊರಗಿದರು ಕೂಡಲೇ ಅಲ್ಲಿದ್ದ ಮಠದ ಪ್ರಮುಖರಾದ ಶ್ರೀ ಸೀತಾರಾಮ ಬಾಯರಿಯವರು ಶ್ರೀ ವರಾಹ ದಾಸರನ್ನು ಕರೆದು, ಅವರ ಸಹಾಯದಿಂದ ಶ್ರೀಗಳವರನ್ನು ಚಾಪೆಯ ಮೇಲೆ ಮಲಗಿಸಿದರು. ತಕ್ಷಣವೇ ಆಯುರ್ವೇದದಲ್ಲಿ ಪಾಂಡಿತ್ಯವಿರುವ ಆತ್ಮಕೂರು ಆನಂದತೀರ್ಥಾಚಾರ್ಯರನ್ನು ಕರೆಸಿದರು. ನಾಡಿ ಬಡಿತ ಪರೀಕ್ಷಿಸಿದ ಅವರು ಶ್ರೀಗಳವರು ದೇಹತ್ಯಾಗ ಮಾಡಿರುವ ಸುದ್ದಿ ತಿಳಿಸಿದರು. ಶ್ರೀಗಳವರ ಮುಖದ ತೇಜಸ್ಸಿನಲ್ಲಿ ಯಾವುದೇ ಕುಂದುಂಟಾಗದಿದ್ದುದರಿಂದ ಗೊತ್ತಾಗಿರಲಿಲ್ಲ. ಯೋಗಿಗಳಿಗೂ ಅಲಭ್ಯವಾಗಿ ಈ ರೀತಿಯ ನಿಷ್ಕ್ರಮಣವು ನೆರೆದಿದ್ದವರನ್ನೆಲ್ಲಾ ಪುಳಕಿತರನ್ನಾಗಿ ಮಾಡಿತು. ಯಾವುದೇ ವಿಕೃತವಿಲ್ಲದೆ ಪ್ರಸನ್ನ ಮುಖಮುದ್ರೆ ಬಾಡಲಿಲ್ಲ. ಅಖಂಡ ಧ್ಯಾನನಿರತರಂತೆ ತೋರುತ್ತಿತ್ತು. ಧಾವಿಸಿ ಬಂದ ಜನಸ್ತೋಮ ದಿವ್ಯ ಮೂರ್ತಿಯ ದರ್ಶನ ಪಡೆದು ಅಲೌಕಿಕ ಮಹಿಮಾ ಸಂಪನ್ನತೆಯನ್ನು ಮುಕ್ತ ಕಂಠದಿಂದ ಕೊಂಡಾಡಿ ಧನ್ಯತೆ ಪಡೆಯಿತು.

ಶಿಷ್ಯರಾದ ಶ್ರೀವಿಶ್ವವಲ್ಲಭರು ಹಾಗೂ ಶಿರೂರು ಮಠದ ಶ್ರೀ ಲಕ್ಷ್ಮೀವರತೀರ್ಥರು ಉಡುಪಿಯಿಂದ ಆಗಮಿಸಿದರು. ಸಾಯಂಕಾಲ ಶ್ರೀ ಪುಷ್ಕರಾಚಾರ್ಯರು ಹಾಗೂ ಗುರುರಾಜಾಚಾರ್ಯ ನಿಪ್ಪಾಣಿಯವರು ಉಪನ್ಯಾಸ ಮಾಡಿದರು. ಪರ ಊರುಗಳಿಂದ ಭಕ್ತಾದಿಗಳ ದಂಡೆ ಹರಿದು ಬಂತು.

ರಾತ್ರಿ ೮.೩೦ಕ್ಕೆ ಮುಂದಿನ ವಿಧಿ ವಿಧಾನಗಳು ಪ್ರಾರಂಭವಾಯಿತು. ಉಭಯ ಶ್ರೀಗಳವರು ತಮ್ಮ ಗುರುಗಳ ದೇಹಕ್ಕೆ ಧವಳ ಗಂಗೆಯಲ್ಲಿ ಪುರುಷಸೂಕ್ತ ಹೇಳುತ್ತಾ ಅಭಿಷೇಕ ಮಾಡಿದರು. ಗೋಪಿ ಹಾಗೂ ರಾಜರ ಮೃತ್ತಿಕಾ ಅಂಗಾರ ಅಕ್ಷತೆ ಹಚ್ಚಿ ತುಳಸಿ ಮಾಲೆಯಿಂದ ಪಾರ್ಥಿವ ಶರೀರವನ್ನು ಅಲಂಕರಿಸಲಾಯಿತು. ನಂತರ ಶ್ರೀ ತ್ರಿವಿಕ್ರಮದೇವರ ಪಟ್ಟದದೇವರ ಹಾಗೂ ವಾದಿರಾಜ ವೃಂದಾವನಗಳಿಗೆ ಶ್ರೀ ವಿಶ್ವೋತ್ತಮ ತೀರ್ಥರ ಕೈಯಿಂದ ಆರತಿ ಮಾಡಿಸಲಾಯಿತು. (ಸಾಮಾನ್ಯರು ಮೃತರಾದರೆ ಮೃತದೇಹ ಕಳೇವರ ಎನಿಸಿಕೊಳ್ಳುವದು, ಅದನ್ನು ಸ್ಪರ್ಶಿಸಿದವರು ಸ್ನಾನ ಮಾಡಿ ಶುಚಿಯಾಗಬೇಕು. ಆದರ ಯತಿರವರ ಮೃತ ದೇಹ ಪವಿತ್ರವಾಗಿಯೇ ಇರುವುದು. ಬದುಕಿದ್ದಾಗ ಎಷ್ಟು ಪವಿತ್ರವೋ ಅವರ ಮೃತ ಶರೀರ ಕೂಡಾ ಅಷ್ಟೇ ಪವಿತ್ರ, ಆದುದರಿಂದ ಅವರ ಹಸ್ತದಿಂದ ಆರತಿ ಮಾಡಿಸುವರು) ಶ್ರೀಗಳ ಮುಖದಲ್ಲಿ ಆವಾಗಲೂ ಮಂದಹಾಸ ಮಾಸಿರಲಿಲ್ಲ.

ರಾತ್ರಿ ಹತ್ತು ಘಂಟೆ ಹೊತ್ತಿಗೆ ಭೂವರಾಹ ತೀರ್ಥರ ವೃಂದಾವನದ ಎಡಭಾಗದಲ್ಲಿ ಎಂಟು ಅಡಿ ಆಳದ ಹೊಂಡತೋಡಿ ಅದನ್ನು ಋತ್ವಿಕರು ಮಂತ್ರ ಪೂರಿತ ಜಲದಿಂದ ಶುದ್ಧಿಗೊಳಿಸಿದರು. ಮೊದಲಿಗೆ ಹೊಂಡದಲ್ಲಿ ಮಣೆ ಹಾಕಿದರು. ನಂತರ ವೇದ, ಪುರುಷ ಸೂಕ್ತಾದಿ ಪಠಣದೊಂದಿಗೆ ಉಭಯ ಶ್ರೀಗಳವರು ಶ್ರೀ ಗುರುಗಳ ದೇಹವನ್ನು ಇತರ ಪುರೋಹಿತರಾದಿಯಾದವರ ಸಹಾಯದಿಂದ ಮಡಿಯಿಂದಲೆ ಹೊಂಡದಲ್ಲಿ ಮಣೆಯ ಮೇಲೆ ಕೂಡಿಸಿದರು. ನಂತರ ಶ್ರೀಗಳವರು ಉಪಯೋಗಿಸುತ್ತಿದ್ದ ಪೂಜಾ ಸಲಕರಣೆಗಳಾದ ಹರಿವಾಣ ಸೌಟು ತಂಬಿಗೆ ಥಾಲಿ ಹಾಗೂ ಇತರ ಪೂಜಾ ಸಾಹಿತ್ಯ, ಶ್ರೀಗಳು ಪೂಜಿಸುತ್ತಿದ್ದ, ಅವರೇ ಸಂಗ್ರಹಿಸಿದ ಸಾಲಿಗ್ರಾಮ ಹಾಗೂ ದೇವರ ಮೂರ್ತಿಗಳನ್ನುಳ್ಳ ಸಂಪುಟವನ್ನು ಹೊಂಡದಲ್ಲಿರಿಸಿದರು. ಅವರ ದಂಡಕೋಲು, ತುಳಸಿ ಮಣಿ ಸರ, ಕಮಂಡಲಾದಿಗಳನ್ನು ಇರಿಸಲಾಯಿತು. ನಂತರ ನಾಲ್ಕು ಕಡೆಯಿಂದ ಸಾಸಿವೆ, ಕರ್ಪೂರ, ಉಪ್ಪು, ಮೆಣಸು, ಹತ್ತಿಯನ್ನು ತುಂಬಿಸಲಾಯಿತು. ನಂತರ ಮೃತ್ತಿಕಾದಿಂದ ಪೂರ್ತಿ ತುಂಬಿಸಿ ಅಲ್ಲಿ ಅವರ ಭಾವಚಿತ್ರ ಇಟ್ಟು ಎದುರಿಗೆ ದೀಪಹಚ್ಚಿ ಇಟ್ಟರು.

ಮರುದಿನ ಹೋಮ ಹವನ, ಸ್ತೋತ್ರ ಪಠಣ ಸ್ವಾಪ್ನ ವೃಂದಾವನಾಖ್ಯಾನ ಪಾರಾಯಣಗಳು ನಡೆದವು. ಮಧ್ಯಾಹ್ನ ಬ್ರಾಹ್ಮಣ ಸುಹಾಸಿನಿಯರ ಸಂತರ್ಪಣೆಗಳೊಂದಿಗೆ ವೈಭವದಿಂದ ಆರಾಧನೆ ಆಚರಿಸಲಾಯಿತು. ಸಾಯಂಕಾಲ ಪಂಡಿತರು ಹಾಗೂ ಭಕ್ತರಿಂದ ಗುರುಗಳ ಗುಣಗಾನ ನಡೆಯಿತು.

ಒಂದು ವರ್ಷದ ಅವಧಿಯಲ್ಲಿ ವರ್ತುಳಾಕಾರದ ವೃಂದಾವನ ಪ್ರತಿಷ್ಠಾಪನೆ ಮಾಡಲಾಯಿತು. ಭಕ್ತರು ಮಾಡಿಸಿಕೊಟ್ಟ ಬೆಳ್ಳಿ ಕವಚವನ್ನು ಮೊದಲನೆಯ ವರ್ಷದ ಆರಾಧನೆ ದಿನದಂದು ತೊಡಿಸಿ, ವೈಭವದಿಂದ ಆರಾಧನಾ ಸಮಾರಂಭವನ್ನು ಆಚರಿಸಲಾಯಿತು.

(ಘಟ್ಟದ ಮೇಲಿನ ಮಠಗಳ ಸ್ವಾಮಿಗಳ ಮೃತದೇಹವನ್ನು ಭೂಗತ ಮಾಡಿದ ಆರು ತಿಂಗಳ ನಂತರ ಅವರ ದೇಹವನ್ನು ಹೊರತೆಗೆದು ಕಳಾಕರ್ಷಣ ಹೋಮ ಮಾಡಿ ಪುನಃ ಅವರ ದೈಹಿಕ ಅವಶೇಷಗಳನ್ನು ಭೂಗತ ಮಾಡಿ ಮೇಲೆ ವೃಂದಾವನ ಕಟ್ಟುತ್ತಾರೆ. ಆದರೆ ಘಟ್ಟದ ಕೆಳಗಿನ ಮಠಗಳಲ್ಲಿ ಈ ರೀತಿ ಕ್ರಮವಿಲ್ಲ.)

ಶ್ರೀ ವಿಶ್ವವಲ್ಲಭ ತೀರ್ಥರು ತಮ್ಮ ಗುರುಗಳ ಕುರಿತ ರಚಿಸಿದ ಚರಮಶ್ಲೋಕ.

**ಕೋಲವ್ಯಾಸ ಹಯಗ್ರೀವ ಪದಕಂಜ ಮಧುವ್ರತಮ್ ।**
**ಶ್ರೀ ವಿಶ್ವೋತ್ತಮಯೋಗೀಂದ್ರಂ ವಂದೇಹಂ ವಾದಿರಾಟ್ ಪ್ರಿಯಮ್ ॥**

**ಶ್ರೀ ವಿಶ್ವೋತ್ತಮರ ಸ್ವರೂಪ ಚಿಂತನ :**

ಭಾವೀವಾಯು ಶ್ರೀ ವಾದಿರಾಜರ ವೃಂದಾವನ ಪ್ರವೇಶಿಸಿದ ನಂತರ, ಇಂದ್ರ ಪದಾರ್ಹ ದೇವತಾ ಸ್ವರೂಪರಾದ, ಪ್ರಾರಬ್ಧಕರ್ಮವಶಾತ್ ಏಡಮೂಕನಾಗಿ ಜನಿಸಿದ್ದ ವಿಪ್ರನಿಗೆ ಸ್ವಪ್ನಕಾಲದಲ್ಲಿ ಶ್ಲೋಕಗಳ ಮೂಲಕ ತಮ್ಮ ಸ್ವರೂಪ ಮಹಿಮಾದಿಗಳನ್ನು ಉಪದೇಶಿಸಿದರು. ಸ್ವಪ್ನೋಕ್ತ ಶ್ಲೋಕಗಳನ್ನು ಆ ವಿಪ್ರನು ಬೆಳಗಾದ ಮೇಲೆ, ಆಗ ಪೀಠವನ್ನು ಅಲಂಕರಿಸಿದ್ದ ಶ್ರೀವೇದನಿಧಿಗಳ ಮುಂದೆ ಹೇಳಿ, ಪುನಃ ಜಡತುಲ್ಯನೇ ಆಗುತ್ತಿದ್ದನು. ಅವರು ಅದನ್ನು ತಮ್ಮ ಶಿಷ್ಯರಿಂದ ಬರೆಯಿಸಿದ್ದರು. ಹೀಗೆ ಸಂಗೃಹೀತವಾದ ಗ್ರಂಥವೇ ಶ್ರೀಸ್ವಾಪ್ನವೃಂದಾವನಾಖ್ಯಾನ. ಈ ಗ್ರಂಥವು ಗೂಢಾರ್ಥಗಳಿಂದ ಕೂಡಿದ್ದು, ಎಲ್ಲರಿಗೂ ಅರ್ಥವಾಗುವಂತಿರಲಿಲ್ಲ. ಆದ್ದರಿಂದ ಬಹುಕಾಲ ಅಜ್ಞಾತವಾಗಿಯೇ ಉಳಿಯಿತು.

ಸುಮಾರು ೨೦೦ ವರ್ಷಗಳ ನಂತರ ಪ್ರಸಕ್ತ ಏಡಮೂಕ ವಿಪ್ರನೇ ಶ್ರೀ ವಿಶ್ವಪ್ರಿಯತೀರ್ಥ (ಶ್ರೀವೃಂದಾವನಾಚಾರ್ಯ)ರಾಗಿ ಅವತರಿಸಿ, ಶ್ರೀ ವಾದಿರಾಜ ಪೀಠವನ್ನು ಅಲಂಕರಿಸಿದರು. ಅವರ ಮೂಲಕವೇ ಈ ಗ್ರಂಥವು ಪ್ರಕಾಶಕ್ಕೆ ಬಂದಿತು. ಈ ಗ್ರಂಥದ ಅಂತರಾರ್ಥದ ಪರಿಚಯವು ವಿದ್ವಾಂಸರುಗಳಿಗೆ ಆದದ್ದು ಆಗಲೇ ಎಂದು ಹೇಳಬಹುದು. ಈ ಗ್ರಂಥದ ಗೂಢಾರ್ಥವನ್ನು ಪೂರ್ಣವಾಗಿ ತಿಳಿಯಲು ದೇವತೆಗಳಿಗೂ ಶಕ್ಯವಿಲ್ಲ. ಸ್ವಲ್ಪವಾದರೂ ಅಂತರಾರ್ಥವನ್ನು ಜನರು ತಿಳಿಯಲು ಶಕ್ತರಾದುದು ಶ್ರೀವೃಂದಾವನಾಚಾರ್ಯರ ಕಾಲದಲ್ಲಿಯೇ.

ಶ್ರೀ ಸ್ವಾಪ್ನವೃಂದಾವನಾಖ್ಯಾನ ಗ್ರಂಥದಲ್ಲಿ, ಅನೇಕ ಮಹಾಪುರುಷರುಗಳಿಂದ ನೆರವೇರಬೇಕಾದ ಆಜ್ಞೆಗಳು ಅನೇಕವಿದೆ. ಈ ಗ್ರಂಥದಲ್ಲಿ ಉಕ್ತವಾಗಿರುವ ಆಜ್ಞೆಗಳು ಭವಿಷ್ಯತ್ ಕಾಲದಲ್ಲಿ ನಿರ್ದಿಷ್ಟ ಮಹನೀಯರುಗಳಿಂದ ನೆರವೇರಿದ ನಿದರ್ಶನಗಳಿವೆ. ಸಮಗ್ರ ಕೃತಿಯನ್ನು ಶಿಲೆಯಲ್ಲಿ ಕೆತ್ತಿಸಿ, ಶ್ರೀವಾದಿರಾಜರ ವೃಂದಾವನದ ಮುಂಭಾಗದಲ್ಲಿ ಸ್ಥಾಪಿಸಬೇಕೆಂದಿರುವ ಆಜ್ಞೆಯು, ಇತ್ತೀಚೆಗೆ ಶ್ರೀ **ವಿಶ್ವೋತ್ತಮತೀರ್ಥರ** ಕಾಲದಲ್ಲಿ ನೆರವೇರಿತು. ಇದೂ ಒಂದು ನಿದರ್ಶನ. ಇದರಂತೆ ಅನೇಕ ನಿದರ್ಶನಗಳು ಹಿಂದೆ ನೆರವೇರಿವೆ.

ಶ್ರೀ ಸ್ವಾಪ್ನವೃಂದಾವನಾಖ್ಯಾನದ ೧೮ನೇ ಅಧ್ಯಾಯದ ೭ ಮತ್ತು ೮ನೇ ಶ್ಲೋಕಗಳಲ್ಲಿ

**"ನಂದನಸ್ತಾದೃಶೋಽಸೌ ಮೇ ವೃಂದಾವನ ಕೃತಿಂ ತ್ವಿಮಾಂ ।**
**ಮುಕುಂದ ಜನತಾಸೇವ್ಯಾಂ ಮಂದನಾಪಿ ತುಷ್ಟಿದಾಂ ।**
**ಷೋಡಶಾಧ್ಯಾಯಿಕಾಂ ಕೃತ್ವಾ ಏಧಮಾನ ದ್ವಿಡರ್ಪಿತಾಂ ॥"**

**ಅರ್ಥ :** ಅಂತಹ ನನ್ನ ಪುತ್ರನು, ಮೋಕ್ಷಪ್ರದವಾದ, ಶ್ರೀಹರಿಯು ಭಕ್ತಜನರ ಸಮೂಹದಿಂದ ಸೇವಾಯೋಗ್ಯವಾದ, ಮಂದಬುದ್ಧಿಯ ಜನರಿಗೆ ಸಂತೋಷವನ್ನೀಯುವ, ಈ ನನ್ನ ವೃಂದಾವನಾಖ್ಯಾನದ ಹದಿನಾರು ಅಧ್ಯಾಯಗಳಿಗೆ ವ್ಯಾಖ್ಯಾನ ಮಾಡಿ "ಏಧಮಾನ ದ್ವಿಟ್" ಪರಮಾತ್ಮನಿಗೆ ಸಮರ್ಪಿಸಲಿ ಎಂದಿದೆ.

**"ಶಿಲಾಸ್ಥಾಂ ಕುರು ಶೀಲಾಢ್ಯ ಸಾಲಪ್ರಾಂಶೋಽಮಲಾಂ ಕೃತಿಂ।**
**ಲೋಕೇಶಃ ಪಾಲಯೇತ್ಸದ್ಯಸ್ತ್ವಾಂ ಬಾಲಂ ಕಾಲಕಾಲತಃ ॥**

**ಅರ್ಥ :** ಹೇ ಶೀಲಾಢ್ಯ, ಹೇ ಕಾಲಸನ್ನಿಭನೇ, ಈ ಪರಿಶುದ್ಧವಾದ ಕೃತಿಯನ್ನು ಶಿಲಾದಲ್ಲಿ ಕೆತ್ತಿಸು. ಬಾಲಕನಾದ ನಿನ್ನನ್ನು ಲೋಕೇಶನಾದ ಶ್ರೀಹರಿಯು ಸರ್ವಕಾಲದಲ್ಲಿ ರಕ್ಷಿಸುವನು ಎಂದು ವ್ಯಾಖ್ಯಾನವಿದೆ. ಇಲ್ಲಿ ಶಿಲಾಲೇಖನವು ಸ್ಪಷ್ಟವಾಗಿ ವೇದನಿಧಿಗಳಿಗೆ ಹೇಳಿದೆ. ವೇದನಿಧಿಗಳಿಗೆ ಎಷ್ಟುಜನ್ಮ ಬರುತ್ತದೆ ಎನ್ನುವುದು ತಿಳಿಯುವುದಿಲ್ಲವಾದರೂ "ಕಾಲಕಾಲತಃ" ಎಂದು ಹೇಳಿರುವುದರಿಂದ ಒಂದಕ್ಕಿಂತ ಹೆಚ್ಚು ಜನ್ಮಗಳು ಬರುತ್ತವೆಂದು ತಿಳಿಯುತ್ತದೆ.

ಇದರಿಂದ ಶ್ರೀವೇದನಿಧಿಗಳು ಪುನಃ ಜನ್ಮವೆತ್ತಿ ಶಿಲಾಲೇಖನ ಕಾರ್ಯವನ್ನು ಮಾಡುತ್ತಾರೆಂದು ತಿಳಿಯುತ್ತದೆ. ಈ ಕಾರ್ಯವು ಶ್ರೀ ವಿಶ್ವೋತ್ತಮರ ಕಾಲದಲ್ಲಿ ನೆರವೇರಿರುವುದರಿಂದ ಅವರು ಶ್ರೀವೇದನಿಧಿಗಳ ಸ್ವರೂಪರು ಎಂದು ನಿರ್ಣಯಿಸಲು ಸಾಧ್ಯವಾಗುತ್ತದೆ. ವೇದನಿಧಿಗಳು ಭಾವೀ ಗರುಡಪದವಿ ಯೋಗ್ಯದೇವತಾ ಎಂದು ಆಖ್ಯಾನಗ್ರಂಥದಲ್ಲಿ ಸೂಚಿತವಾಗಿದೆ.

**ಬಿ.ಪಿ. ನಾಗಭೂಷಣರಾವ್, ತುಮಕೂರು**

**ಶ್ರೀ ವಿಶ್ವೋತ್ತಮರಲ್ಲಿ ದೈವತ್ವನ್ನು ಕಂಡವರು.**

೧. ಬೀಜಾಡಿಯಲ್ಲಿ ಯೋಗಿಗಳಂತೆ ಗೌಪ್ಯವಾಗಿ ಸಾಧನೆ ಮಾಡಿಕೊಂಡು ಜೀವಿಸಿದ್ದವರು ಶ್ರೀ ಕೃಷ್ಣಮೂರ್ತಿ ಬೆಳಿಯರು. ಶ್ರೀ ವಿಶ್ವೋತ್ತಮ ತೀರ್ಥರು ಆಶ್ರಮವಾದ ಹೊಸತರಲ್ಲಿ ಶ್ರೀ ಕೋಟಿಲಿಂಗೇಶ್ವರ ದರ್ಶನಕ್ಕಾಗಿ ಕೋಟೇಶ್ವರಕ್ಕೆ ಬಂದಿದ್ದರು. ಆ ಸುಮುಹೂರ್ತದಲ್ಲಿ ದೇವಸ್ಥಾನದ ಹೆಬ್ಬಾಗಿಲಿನಲ್ಲಿ ನಿಂತಿದ್ದ ಸ್ವಾಮಿಗಳ ಹೃದಯಭಾಗದಲ್ಲಿ ಶ್ವೇತವರ್ಣ ಶ್ರೀ ಹಯಗ್ರೀವ ದೇವರ ದರ್ಶನ ಪಡೆದರು. ಆಗ ರೋಮಾಂಚಿತರಾದ ಬೆಳಿಯರು ಶ್ರೀಗಳವರಿಗೆ ಸಾಷ್ಟಾಂಗ ನಮಸ್ಕರಿಸಿದರು ಹಾಗೂ ಶ್ರೀ ಪಾದಂಗಳವರು ದೇವಾಂಶ ಪುರುಷರೆಂದು ಮನಗಂಡರು.

೨. ಉಡುಪಿಯ ದಿ॥ ಶ್ರೀಮತಿ ಸರಸ್ವತಿಬಾಯಿ ರಾಜವಾಡೆಯವರು ಸಾಹಿತ್ಯ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿದ್ದಾರೆ. ನಾಸ್ತಿಕ ವಿಚಾರಧಾರೆಯುಳ್ಳವರಾಗಿದ್ದ ಅವರು ಆಸ್ತಿಕತೆಯತ್ತ ಮುಖ ಮಾಡಿದ್ದು ಒಂದು ಪವಾಡ. ಅನಂತರ ಅವರು 'ಗಿರಿಬಾಲೆ'ಯೆಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚನೆ ಮಾಡಿದ್ದಾರೆ.

ಸೋದೆಯಲ್ಲಿ ಗುರುಸಾರ್ವಭೌಮರ ರೂಪದರ್ಶನವನ್ನು ಅಪೇಕ್ಷಿಸಿದಾಗ, ತಪಶ್ಶಿಲೆಯಲ್ಲಿರುವಲ್ಲಿ ಪ್ರತಿಷ್ಠಿತವಾಗಿರುವ ಮಾರುತಿಯ ಸ್ಥಾನದಲ್ಲಿ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರು ಪದ್ಮಾಸನಸ್ಥರಾಗಿ ಮುತ್ತೈದೆಯರಿಂದ ಮಂಗಳಾರತಿ ಮಾಡಿಸಿಕೊಂಡ ದೃಶ್ಯಗೋಚರಿಸಿತು. ಆ ಸ್ವಪ್ನ ಫಲವಾಗಿ ಶ್ರೀಗುರುಸಾರ್ವಭೌಮರೇ ಮರಳಿ ಈ ರೂಪದಿಂದ ಅತರಿಸಿರಬೇಕೆಂದು ಆನಂದಾತಿರೇಕದಿಂದ "ಅವತರಿಸಿಹರಮ್ಮ ಅವತರಿಸಿಹರಮ್ಮ ನೋಡೆ ಪುನಃ ಅವತರಿಸಿಹರಮ್ಮ ನೋಡೆ ವಾದಿರಾಜರೇ" ಎಂಬ ಪದ್ಯರಚನೆ ಮಾಡಿದರು. ಈ ವಿಷಯವನ್ನು ಶ್ರೀ ಪೇಜಾವರ ಮಠಾಧೀಶರ ಹತ್ತಿರ ಪ್ರಸ್ತಾಪಿಸಲು ಅವರು ಗುರುಸಾರ್ವಭೌಮರು

ಭಾವಿ ಮರುತರಾದುದರಿಂದ ಮರಳಿ ಅವತರಿಸುವುದಿಲ್ಲವೆಂಬುದಾಗಿ ಗುರುಸಾರ್ವಭೌಮರ ಸ್ವರೂಪದ ಯಥಾರ್ಥತೆಯ ಪರಿಚಯ ಮಾಡಿಕೊಟ್ಟರು. ಆನಂತರ 'ಅವತರಿಸಿಹರಮ್ಮ' ಪದ್ಯವು 'ಅನುಗ್ರಹಿಸಿದರಮ್ಮ' ಎಂಬುದಾಗಿ ಮಾರ್ಪಡಿಸಿದರು. (ಈ ಕೃತಿಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ) ಇದು ಸರ್ವಸಮ್ಮತವಾಗಿದೆ. ಏಕೆಂದರೆ ಶ್ರೀ ವಾದಿರಾಜಪೀಠದ ಯತಿವರೇಣ್ಯರಲ್ಲಿ ಶ್ರೀ ವಾದಿರಾಜರ ಅಂಶವಿದ್ದೇ ಇರುತ್ತದೆ. ಶ್ರೀ ವಿಶ್ವೋತ್ತಮತೀರ್ಥರಲ್ಲಿ ಅಧಿಕಾಂಶವಿದೆ ಎಂದು ಭಕ್ತರು ತಿಳಿದಿರುತ್ತಾರೆ. ಈ ವಿಷಯವು ಸ್ವಪ್ನದಲ್ಲಿ ಕಂಡ ಸರಸ್ವತಿಬಾಯಿ ರಾಜವಾಡೆ ಯವರು ಅಧಿಕ ವಿಶ್ವಾಸವುಳ್ಳವರಾದರು.

೩. ಆರ್.ಕೆ. ಪದ್ಮನಾಭನ್‌ರು ಸಂಗೀತ ಪ್ರಪಂಚದಲ್ಲಿ ಬಹುದೊಡ್ಡ ಹೆಸರು. ಅವರು ಶ್ರೀ ವಾದಿರಾಜಗುರುಗಳ ಭಕ್ತರು. ಅವರು ಸಾಕಷ್ಟು ವಾದಿರಾಜ ಕೃತಿಗಳಿಗೆ ರಾಗ ಸಂಯೋಜನೆ ಮಾಡಿ ಹಾಡಿ, ಶ್ರೀ ವಿಶ್ವೋತ್ತಮ ತೀರ್ಥರಿಂದ ಭೇಷ್ ಎನಿಸಿಕೊಂಡವರು. ಈಗ ಅವರ ಮಾತಿಗಳಲ್ಲೇ ಕೇಳಿರಿ.

"ನಾನು ಹರಿದಾಸ ಸಾಹಿತ್ಯ ಪ್ರಪಂಚದ ವೈನತೇಯರಾದ ಶ್ರೀ ವಾದಿರಾಜರ ವಿದ್ಯಾಶಿಷ್ಯ. ಎನ್ನ ಬಂಧತೀರಿತು. ಕ್ಲೇಶ ಹೋಯಿತು. ಇನ್ನು ಅನ್ಯರ ಭಜಿಸಲ್ಯಾಕೆ ಮನ್ನಿಸು ಹಯವದನನೇ ಎನ್ನುವ ಏಕೋಭಾವದಿಂದ ಶ್ರೀ ಹಯವದನನ ಬಳಿ ಮೊರೆ ಹೋದವನು ನಾನು".

ನಾನು ವಾದಿರಾಜ ಗುರುವರ್ಯರನ್ನು ಕಂಡವನಲ್ಲ; ಆದರೆ ನನ್ನ ಮಟ್ಟಿಗೆ ಶ್ರೀ ವಿಶ್ವೋತ್ತಮರೇ ವಾದಿರಾಜ ಸ್ವರೂಪರು.

ಈಗ ೨೦ ವರ್ಷಗಳ ಹಿಂದಿನ ಮಾತು. ಉಡುಪಿಯ ಮಧ್ವ ಸರೋವರದಲ್ಲಿ ಗುರುಗಳೊಬ್ಬರು ಸ್ನಾನ ಮಾಡುತ್ತಿದ್ದರು. ಅವರ ಮುಖದ ತೇಜಸ್ಸು ಮಾತ್ರ ಹೃದಯದ ಪ್ರತೀಕವೆನಿಸುವ ಕಣ್ಣುಗಳು ನನ್ನನ್ನು ಆಕರ್ಷಿಸಿತು. ಕಲ್ಯಾಣಿಯ ಸ್ನಾನಕ್ಕೆ ತಿರುಗಿದ ಅವರ ಬೆನ್ನಲ್ಲೇ ಸೂರ್ಯಪ್ರಭೆ ಕಂಡೆನು. ಸುವರ್ಣ ಹೊಳಪು ಕಣ್ಣು ಕೋರೈಸಿತು. 'ಧನ್ಯನಾದೆನೋ ನಾ ಧನ್ಯನಾದೆನೋ ಬಾಹುಬಲ ಭಾವೀ ಸಮೀರರ ಕಂಡು ಧನ್ಯನಾದೆಯೋ ಎಂಬ ಕೃತಿ (ರಾಗ-ಬೃಂದಾವನ, ಆದಿತಾಳ) ರಾಗ ಸಂಯೋಜನೆ ಮಾಡಿ ಹಾಡಿದೆ'.

೪. ಜಮೀನುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಸಲುವಾಗಿ ಒಮ್ಮೆ ಜಿಲ್ಲಾಧಿಕಾರಿಗಳು ಉಡುಪಿಗೆ ಬಂದರು ಸೋದೆಮಠದ ಜಮೀನಿನ ಬಗ್ಗೆ ಪ್ರಸ್ತಾಪ ಬಂದಾಗ ಮಠದವರು ಶ್ರೀಗಳವರನ್ನು ಭೆಟ್ಟಿ ಮಾಡುವಂತೆ ಹೇಳಲು, ನಾಸ್ತಿಕರಾದ ಜಿಲ್ಲಾಧಿಕಾರಿಗಳು ಶ್ರೀಗಳ ಭೆಟ್ಟಿಗೆ ಒಪ್ಪದಿರಲು ಕೊನೆಗೆ ಮಠದವರ ಒತ್ತಾಯ ಹೆಚ್ಚಾಗಲು, ಮನಸ್ಸಿಲ್ಲದಿದ್ದರೂ ಒಪ್ಪಿ ಮಠದ ಒಳಗೆ ಪ್ರವೇಶಿಸಿ ಶ್ರೀಗಳವರನ್ನು ಕಂಡಕೂಡಲೇ ಆಶ್ಚರ್ಯ ಚಕಿತರಾಗಿ ಪಕ್ಕದಲ್ಲಿದ್ದವರನ್ನು ಕುರಿತು "ಸ್ವಾಮಿಗಳ ಶಿರದ ಹಿಂದೆ ಪ್ರಕಾಶಮಾನವಾದ ದಿವ್ಯ ಚಕ್ರ ತಿರುಗುತ್ತಿದೆಯಲ್ಲ. ಅದೇನು?" ಎಂದು ಕೇಳಲು ಮಠದವರು ವಿಸ್ಮಿತರಾಗಿ ಶ್ರೀಗಳವರ ಮಹಿಮೆಯನ್ನು ಕಂಡ ನೀವೇ ಧನ್ಯರು ಎಂದು ಉದ್ಗಾರ ವ್ಯಕ್ತಪಡಿಸಿದರು. ಈ ಘಟನೆಯಿಂದ ಶ್ರೀಗಳವರ ಮಹಿಮೆಯನ್ನರಿತ ಜಿಲ್ಲಾಧಿಕಾರಿಗಳು ತಾವು ಬಂದ ಉದ್ದೇಶವನ್ನೇ ಮರೆತು ಶ್ರೀಗಳವರ ವಿಶೇಷಾನುಗ್ರಹ ಹಾಗೂ ಫಲ ಮಂತ್ರಾಕ್ಷತೆಯನ್ನು ಪಡೆದು ಮರಳಿದರು. (ಇದೇ ರೀತಿ ಹಿಂದೆ ಮಂತ್ರಾಲಯಕ್ಕೆ ಆಗಮಿಸಿದ ಕಂಪನಿ ಸರ್ಕಾರದ ಮನ್ರೋ ಸಾಹೇಬರು ಶ್ರೀ ರಾಘವೇಂದ್ರ ಸ್ವಾಮಿಗಳ ಸಾಕ್ಷಾತ್ ದರ್ಶನ ಸಂಭಾಷಣೆ ನಡೆಸಿ ಮಂತ್ರಾಲಯದ ಸ್ವಾಮಿಗಳಿಂದ ಅನುಗ್ರಹಿತನಾದದ್ದನ್ನು ಇಲ್ಲಿ ಸ್ಮರಿಸಬಹುದು.)

ಭಾವಿ ಮರುತರಾದುದರಿಂದ ಮರಳಿ ಅವತರಿಸುವುದಿಲ್ಲವೆಂಬುದಾಗಿ ಗುರುಸಾರ್ವಭೌಮರ ಸ್ವರೂಪದ ಯಥಾರ್ಥತೆಯ ಪರಿಚಯ ಮಾಡಿಕೊಟ್ಟರು. ಅನಂತರ 'ಅವತರಿಸಿಹರಮ್ಮ' ಪದ್ಯವು 'ಅನುಗ್ರಹಿಸಿದರಮ್ಮ' ಎಂಬುದಾಗಿ ಮಾರ್ಪಡಿಸಿದರು. (ಈ ಕೃತಿಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ) ಇದು ಸರ್ವಸಮ್ಮತವಾಗಿದೆ. ಏಕೆಂದರೆ ಶ್ರೀ ವಾದಿರಾಜಪೀಠದ ಯತಿವರೇಣ್ಯರಲ್ಲಿ ಶ್ರೀ ವಾದಿರಾಜರ ಅಂಶವಿದ್ದೇ ಇರುತ್ತದೆ. ಶ್ರೀ ವಿಶ್ವೋತ್ತಮತೀರ್ಥರಲ್ಲಿ ಅಧಿಕಾಂಶವಿದೆ ಎಂದು ಭಕ್ತರು ತಿಳಿದಿರುತ್ತಾರೆ. ಈ ವಿಷಯವು ಸ್ವಪ್ನದಲ್ಲಿ ಕಂಡ ಸರಸ್ವತಿಬಾಯಿ ರಾಜವಾಡೆ ಯವರು ಅಧಿಕ ವಿಶ್ವಾಸವುಳ್ಳವರಾದರು.

೩. ಆರ್.ಕೆ. ಪದ್ಮನಾಭನ್‌ರು ಸಂಗೀತ ಪ್ರಪಂಚದಲ್ಲಿ ಬಹುದೊಡ್ಡ ಹೆಸರು. ಅವರು ಶ್ರೀ ವಾದಿರಾಜಗುರುಗಳ ಭಕ್ತರು. ಅವರು ಸಾಕಷ್ಟು ವಾದಿರಾಜ ಕೃತಿಗಳಿಗೆ ರಾಗ ಸಂಯೋಜನೆ ಮಾಡಿ ಹಾಡಿ, ಶ್ರೀ ವಿಶ್ವೋತ್ತಮ ತೀರ್ಥರಿಂದ ಭೇಷ್ ಎನಿಸಿಕೊಂಡವರು. ಈಗ ಅವರ ಮಾತಿಗಳಲ್ಲೇ ಕೇಳಿರಿ.

"ನಾನು ಹರಿದಾಸ ಸಾಹಿತ್ಯ ಪ್ರಪಂಚದ ವೈನತೇಯರಾದ ಶ್ರೀ ವಾದಿರಾಜರ ವಿದ್ಯಾಶಿಷ್ಯ. ಎನ್ನ ಬಂಧತೀರಿತು. ಕ್ಲೇಶ ಹೋಯಿತು. ಇನ್ನು ಅನ್ಯರ ಭಜಿಸಲ್ಯಾಕೆ ಮನ್ನಿಸು ಹಯವದನನೇ ಎನ್ನುವ ಏಕೋಭಾವದಿಂದ ಶ್ರೀ ಹಯವದನನ ಬಳಿ ಮೊರೆ ಹೋದವನು ನಾನು".

ನಾನು ವಾದಿರಾಜ ಗುರುವರ್ಯರನ್ನು ಕಂಡವನಲ್ಲ; ಆದರೆ ನನ್ನ ಮಟ್ಟಿಗೆ ಶ್ರೀ ವಿಶ್ವೋತ್ತಮರೇ ವಾದಿರಾಜ ಸ್ವರೂಪರು.

ಈಗ ೨೦ ವರ್ಷಗಳ ಹಿಂದಿನ ಮಾತು. ಉಡುಪಿಯ ಮಧ್ವ ಸರೋವರದಲ್ಲಿ ಗುರುಗಳೊಬ್ಬರು ಸ್ನಾನ ಮಾಡುತ್ತಿದ್ದರು. ಅವರ ಮುಖದ ತೇಜಸ್ಸು ಮಾತ್ರ ಹೃದಯದ ಪ್ರತೀಕವೆನಿಸುವ ಕಣ್ಣುಗಳು ನನ್ನನ್ನು ಆಕರ್ಷಿಸಿತು. ಕಲ್ಯಾಣಿಯ ಸ್ನಾನಕ್ಕೆ ತಿರುಗಿದ ಅವರ ಬೆನ್ನಲ್ಲೇ ಸೂರ್ಯಪ್ರಭೆ ಕಂಡೆನು. ಸುವರ್ಣ ಹೊಳಪು ಕಣ್ಣು ಕೋರೈಸಿತು. 'ಧನ್ಯನಾದೆನೋ ನಾ ಧನ್ಯನಾದೆನೋ ಬಾಹುಬಲ ಭಾವೀ ಸಮೀರರ ಕಂಡು ಧನ್ಯನಾದೆಯೋ ಎಂಬ ಕೃತಿ (ರಾಗ-ಬೃಂದಾವನ, ಆದಿತಾಳ) ರಾಗ ಸಂಯೋಜನೆ ಮಾಡಿ ಹಾಡಿದೆ'.

೪. ಜಮೀನುಗಳನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಸಲುವಾಗಿ ಒಮ್ಮೆ ಜಿಲ್ಲಾಧಿಕಾರಿಗಳು ಉಡುಪಿಗೆ ಬಂದರು ಸೋದೆಮಠದ ಜಮೀನಿನ ಬಗ್ಗೆ ಪ್ರಸ್ತಾಪ ಬಂದಾಗ ಮಠದವರು ಶ್ರೀಗಳವರನ್ನು ಭೆಟ್ಟಿ ಮಾಡುವಂತೆ ಹೇಳಲು, ನಾಸ್ತಿಕರಾದ ಜಿಲ್ಲಾಧಿಕಾರಿಗಳು ಶ್ರೀಗಳ ಭೆಟ್ಟಿಗೆ ಒಪ್ಪದಿರಲು ಕೊನೆಗೆ ಮಠದವರ ಒತ್ತಾಯ ಹೆಚ್ಚಾಗಲು, ಮನಸ್ಸಿಲ್ಲದಿದ್ದರೂ ಒಪ್ಪಿ ಮಠದ ಒಳಗೆ ಪ್ರವೇಶಿಸಿ ಶ್ರೀಗಳವರನ್ನು ಕಂಡಕೂಡಲೇ ಆಶ್ಚರ್ಯ ಚಕಿತರಾಗಿ ಪಕ್ಕದಲ್ಲಿದ್ದವರನ್ನು ಕುರಿತು "ಸ್ವಾಮಿಗಳ ಶಿರದ ಹಿಂದೆ ಪ್ರಕಾಶಮಾನವಾದ ದಿವ್ಯ ಚಕ್ರ ತಿರುಗುತ್ತಿದೆಯಲ್ಲ. ಅದೇನು?" ಎಂದು ಕೇಳಲು ಮಠದವರು ವಿಸ್ಮಿತರಾಗಿ ಶ್ರೀಗಳವರ ಮಹಿಮೆಯನ್ನು ಕಂಡ ನೀವೇ ಧನ್ಯರು ಎಂದು ಉದ್ಗಾರ ವ್ಯಕ್ತಪಡಿಸಿದರು. ಈ ಘಟನೆಯಿಂದ ಶ್ರೀಗಳವರ ಮಹಿಮೆಯನ್ನರಿತ ಜಿಲ್ಲಾಧಿಕಾರಿಗಳು ತಾವು ಬಂದ ಉದ್ದೇಶವನ್ನೇ ಮರೆತು ಶ್ರೀಗಳವರ ವಿಶೇಷಾನುಗ್ರಹ ಹಾಗೂ ಫಲ ಮಂತ್ರಾಕ್ಷತೆಯನ್ನು ಪಡೆದು ಮರಳಿದರು. (ಇದೇ ರೀತಿ ಹಿಂದೆ ಮಂತ್ರಾಲಯಕ್ಕೆ ಆಗಮಿಸಿದ ಕಂಪನಿ ಸರ್ಕಾರದ ಮನ್ರೋ ಸಾಹೇಬರು ಶ್ರೀ ರಾಘವೇಂದ್ರ ಸ್ವಾಮಿಗಳ ಸಾಕ್ಷಾತ್ ದರ್ಶನ ಸಂಭಾಷಣೆ ನಡೆಸಿ ಮಂತ್ರಾಲಯದ ಸ್ವಾಮಿಗಳಿಂದ ಅನುಗ್ರಹಿತನಾದದ್ದನ್ನು ಇಲ್ಲಿ ಸ್ಮರಿಸಬಹುದು.)

೫. ಒಮ್ಮೆ ಶ್ರೀ ಮಂತ್ರಾಲಯ ಪ್ರಭುಗಳ ದರ್ಶನಕ್ಕೆ ಶ್ರೀ ಸೋದಾ ಶ್ರೀ ಪಾದಂಗಳವರು ಮಂತ್ರಾಲಯಕ್ಕೆ ಹೋಗಿದ್ದರು. ಅವರ ಜೊತೆಗೆ ಶ್ರೀ ಎಸ್.ಆರ್. ಪ್ರಹ್ಲಾದಾಚಾರ್ಯರು ಇದ್ದರು. ಅಲ್ಲಿ ಮಠದವರು ಭವ್ಯಸ್ವಾಗತದೊಂದಿಗೆ ಬರಮಾಡಿಕೊಂಡರು. ಮಾರನೆ ದಿನ ಉಭಯ ಶ್ರೀಗಳವರು ಪೂಜಾದಿಗಳನ್ನು ಮಾಡಿದರು. ಉಭಯ ಶ್ರೀಪಾದಂಗಳವರು ಆನಂದಭರಿತರಾದರು. ನಂತರ ಮಠದ ಅಧಿಕಾರಿಗಳು ಸೋದೆ ಶ್ರೀಗಳವರಿಗೆ ಕ್ಷೇತ್ರದ ಪರಿಚಯ ಮಾಡಿಸಲು ಅಲ್ಲಿನ ಬೃಂದಾವನಗಳು, ವಿದ್ಯಾಪೀಠ, ಪುಸ್ತಕಭಂಡಾರ, ವಿದ್ಯಾರ್ಥಿ ನಿಲಯ ಮುಂತಾದವುಗಳನ್ನು ತೋರಿಸುತ್ತಾ ಅಲ್ಲಿಂದ ಆಸ್ಪತ್ರೆ ತೋರಿಸಲು ಕರೆದೊಯ್ದರು.

ಶ್ರೀಶ್ರೀಗಳು ಆಸ್ಪತ್ರೆಯನ್ನು ವೀಕ್ಷಿಸುತ್ತಾ ಬರುತ್ತಿರಲು ಮಂಚದ ಮೇಲೆ ಮಲಗಿದ್ದ, ನಿಸ್ತೇಜನಾದ ರೋಗಿಯೊಬ್ಬನು ಇವರನ್ನು ನೋಡುತ್ತಿದ್ದಂತೆಯೇ ಮಲಗಿದ್ದಲ್ಲಿಂದಲೇ ಎರಡು ಕೈ ಜೋಡಿಸಿ ಅರಿವಿಲ್ಲದೆ ಆನಂದ ಬಾಷ್ಪ ಪೂರಿತವಾಗಿ ಹೇಳಿದ್ದೇನಂದರೆ "ಇದೇನಾಶ್ಚರ್ಯ! ಎಂಥಾ ಮಹಾನುಭಾವರ ದರುಶನ ನನಗಾಯ್ತು. ಅದೂ ಸಂಕಟದಲ್ಲಿ ತೊಳಲುತ್ತಿರುವಾಗ ದರ್ಶನ ಕೊಡಲು ಬಂದದು ನನ್ನ ಸುಕೃತ. ಇಂದೇ ನನ್ನ ಸುದಿನ ಇವರ ತೇಜಸ್ಸು ನೋಡಿದರೆ ಖಂಡಿತ ಮಾನವ ತೇಜಸ್ಸಲ್ಲ. ದರ್ಶನ ಮಾತ್ರದಿಂದ ನನಗೆ ತ್ರಾಣಬಂತು. ಶ್ರೀರಾಯರೇ ಈ ಮಹಾನುಭಾವರನ್ನು ಇಲ್ಲಿಗೆ ಕಳಿಸಿರಬೇಕು. ನಾನು ಈ ನರಕಯಾತನೆಯಿಂದ ಮುಕ್ತನಾದೆನು. ನಾನು ಪುನಃ ಇಲ್ಲಿಗೆ ಬರದಂತೆ ಆಗುವುದೂ ನಿಜ. ನನಗೆ ಸುಖ ಮರಣವೇ ಆಗುವುದು ನಿಶ್ಚಯ. ಸ್ವಾಮಿ ತಾವು ಯಾರೆಂದು ತಿಳಿಯದವನು ನಾನು. ದಯಮಾಡಿ ತಾವು ನನ್ನನ್ನು ಅನುಗ್ರಹಿಸಬೇಕು. ತಮ್ಮ ದರ್ಶನದಿಂದ ನಾನು ಧನ್ಯನಾದೆನು. 'ಪ್ರಭೋ' ಪ್ರಭೋ!" ಎಂದು ಮೈಮರೆತು ಭಕ್ತಿಯಿಂದ ಹೇಳಿದ್ದನ್ನೇ ಹೇಳುತ್ತಿದ್ದುದನ್ನು ನೋಡಿದ ಪ್ರಹ್ಲಾದಾಚಾರ್ಯರು ದಂಗಾಗಿ ಹೋದರು. ಕೇವಲ ಶ್ರೀಗಳ ದರ್ಶನ ಮಾತ್ರದಿಂದ ಕಾಹಿಲೆ ವಾಸಿಯಾಗಿ ಅವನು ಅನುಗ್ರಹಿತನಾದದ್ದು ಅವನ ಪೂರ್ವ ಸುಕೃತವೆಂತಲೇ ಹೇಳಬೇಕು.

**ಶ್ರೀ ವಿಶ್ವೋತ್ತಮತೀರ್ಥರು ದರ್ಶನ ಪಡೆದು, ಹೇಳಿದ ಹಲವು ಪ್ರಸಂಗಗಳು :**

೧ **ಉತ್ಫುಲ್ಲಪದ್ಮಸಂಸ್ಥಂ ಹಿ ಬ್ರಹ್ಮಾಣ ಮೃಜು ಭಿರ್ಯುತಮ್ ।**
**ಯೋಽದ್ರಾಕ್ಷಿತ್ ಸ್ಪುಟಂ ಸರ್ವಂ ಸ ಶ್ರೀ ವಿಶ್ವೋತ್ತಮೋಽವತಾತ್ ॥**
**ನಸ್ತೋಮುಖಾದ್ಧಯಾಸ್ಯಸ್ಸ ನಿಸ್ಸೃತಂ ಶಾಸ್ತ್ರಮುತ್ತಮಮ್ ।**
**ಶೃಣ್ವತಾಂ ವೈಭವಂ ತೇಷಾಂ ಋಜೂನಾಂಸಂದದರ್ಶ ಸಃ ॥**

ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದರು ಬ್ರಹ್ಮಾದಿಕಲ್ಕಿ ಪರ್ಯಂತ ನೂರು ಋಜು ದೇವತೆಗಳು ಶ್ರೀಹಯಗ್ರೀವ ದೇವರಿಂದ ಏಕಕಾಲದಲ್ಲಿ ಉಪದೇಶ ಹೊಂದುತ್ತಿರುವ ಪ್ರಕಾಶ ಸಂಹಿತೋಕ್ತ ಪ್ರಮೇಯ ವಿಶೇಷವನ್ನು ಧ್ಯಾನಕಾಲದಲ್ಲಿ ಸಾಕ್ಷಾತ್ಕರಿಸಿಕೊಂಡು ಧನ್ಯತೆಯ ಭಾವ ಹೊಂದಿರುವುದನ್ನು ತಮ್ಮ ಶಿಷ್ಯ ಶ್ರೀ ವಿಶ್ವವಲ್ಲಭರಿಗೆ ಹೇಳಿರುವರು.

ಭಕ್ತರೋರ್ವರು ಈ ವಿಷಯದ ಬಗ್ಗೆ ಭಾವ ಚಿತ್ರ ಬರೆಸಿ ಸೋದೆಯಲ್ಲಿ ಶ್ರೀ ವಾದಿರಾಜರ ಪಂಚ ವೃಂದಾವನದ ಪ್ರದಕ್ಷಿಣೆ ಬರುವಲ್ಲಿ ಗೋಡೆಯ ಮೇಲೆ ಹಾಕಿಸಿರುವರು.

**೨. ಗಂಗಾವತರಣ :** ಶ್ರೀ ವಿಶ್ವೋತ್ತಮತೀರ್ಥ ಶ್ರೀ ಪಾದಂಗಳವರಿಗೆ ಗಂಗಾವತಾರಣ ಬಹಳ ಪ್ರಿಯವಾದ ವಿಷಯವಾಗಿತ್ತು. ಇದನ್ನು ಹೀಗೆ ವರ್ಣಿಸಿರುವರು. "ಮುಂದುಗಡೆ

ಜಾಗಟೆ, ತಾಳ, ಕೊಂಬು, ವಾದ್ಯ, ಕಹಳೆ ಮೊದಲಾದ ಮಂಗಳವಾದ್ಯಗಳು ನಿನಾದ. ಅದರ ಹಿಂದೆ ಜಟಾಧಾರಿಯಾಗಿ ಕೈಮುಗಿದುಕೊಂಡು ಧ್ಯಾನಪರವಶನಾಗಿ ನಿಧಾನವಾಗಿ ಬರುತ್ತಿರುವ ಭಗೀರಥರು ಅವರ ಹಿಂದೆ ಭೋರ್ಗರೆಯುತ್ತಾ ಉಕ್ಕಿ ಬರುವ ಗಂಗಾಮಾತೆಯ ದರ್ಶನವಾಯ್ತು. ಇದನ್ನು ನಾನು ಯಾವುದೋ ಜನ್ಮದಲ್ಲಿ ನೋಡಿದ್ದೇನೆ" ಎಂದು ಭಾವುಕರಾಗಿ ಹೇಳುತ್ತಿದ್ದರು. ಇವರು ಕಂಡ ಈ ದೃಶ್ಯವನ್ನು ಚಿತ್ರದಲ್ಲಿ ಬರೆಸಿ ಸೋದೆಯಲ್ಲಿ ಭೂತರಾಜರ ಗುಡಿಯ ಎದುರಿಗೆ ಗೋಡೆಯಲ್ಲಿ ಇತ್ತೀಚೆಗೆ ಹಾಕಿಸಲಾಗಿದೆ.

**ಶ್ರೀ ವಿಶ್ವೋತ್ತಮ ತೀರ್ಥರಿಗೆ ಸ್ವಪ್ನದಲಿ ಶ್ಲೋಕಗಳ ಸ್ಮರಣೆ :**

ಶ್ರೀ ವಿಶ್ವೋತ್ತಮ ತೀರ್ಥರಿಗೆ ಸ್ವಪ್ನದಲ್ಲಿ ಕೆಲವು ಶ್ಲೋಕಗಳು ಹೇಳಿದಂತೆ ಅನುಭವವಾಗುತ್ತಿತ್ತು. ಎಚ್ಚರವಾದ ಬಳಿಕವೂ ಆ ಶ್ಲೋಕಗಳ ಅವರಿಗೆ ನೆನಪಿನಲ್ಲಿರುತ್ತಿದ್ದವು. ಒಂದೇ ಸಲ ಆ ಶ್ಲೋಕಗಳು ಪೂರ್ಣವಾಗದಿದ್ದರೆ ಅಥವಾ ಅದರ ಕೆಲವೊಂದು ಪದಗಳು ತಿಳಿಯದಿದ್ದರೆ ಮತ್ತೊಂದು ಬಾರಿ ಅದು ಪೂರ್ಣಗೊಳ್ಳುತ್ತಿತ್ತು. ಅವುಗಳನ್ನು ತಮ್ಮ ಬಳಿಯಿದ್ದ ಶಿಷ್ಯರಿಗೆ ಹೇಳಿ ಬರೆದಿಡುಸುತ್ತಿದ್ದರು. ಅವರಿಗೆ ಅದೆಷ್ಟು ಶ್ಲೋಕ ಸ್ಫುರಿಸಿವೆಯೋ ಏನು?

ಇಷ್ಟೇ ಅಲ್ಲದೆ ಅವರು ಒಮ್ಮೆ ಶ್ರೀ ಆತ್ಮಕೂರು ಆನಂದತೀರ್ಥರಿಗೆ ತತ್ತ್ವೋಪದೇಶ ಮಾಡಿ ಶ್ರೀ ಮದುಡುಪಿಯಲ್ಲಿ ಶ್ರೀ ಭೂತರಾಜನ ಸನ್ನಿಧಾನದಲ್ಲಿ ಆ ರಾತ್ರಿ ಉಪವಾಸದಿಂದ ಮಲಗಲು ಆಜ್ಞಾಪಿಸಿದರು. ಶ್ರೀಗಳ ಆಜ್ಞಾಪನೆಯಂತೆ ಆಚಾರ್ಯರು ಶ್ರೀ ಭೂತರಾಜರ ಸನ್ನಿಧಿಯಲ್ಲಿ ಮಲಗಲು ರಾತ್ರಿ ಮೂರು ಗಂಟೆಗೆ ಒಂದು ಅದ್ಭುತವಾದ ಸ್ವಪ್ನವನ್ನು ಕಂಡರು. ಆ ಸ್ವಪ್ನದಲ್ಲಿ ಶ್ರೀಹಯಗ್ರೀವ ದೇವರ ತೊಡೆಯ ಮೇಲೆ ಶಿಶು ರೂಪದಲ್ಲಿದ್ದ ಶ್ರೀ ವಿಶ್ವೋತ್ತಮತೀರ್ಥರನ್ನು ಕಂಡರು. (ಸಾಮಾನ್ಯವಾಗಿ ಸನ್ಯಾಸಿಗಳು ಸ್ವಪ್ನದಲ್ಲಿ ಕಾಣಿಸಿಕೊಂಡರೆ ಅವರು ಶ್ರೀ ವಾದಿರಾಜರೇ ಎಂದು ತಿಳಿಯಬೇಕು ಎಂಬುದಾಗಿ ಶ್ರೀ ವಿಶ್ವೋತ್ತಮತೀರ್ಥರು ಹೇಳುತ್ತಿದ್ದುದನ್ನು ಇಲ್ಲಿ ಸ್ಮರಿಸಬಹುದು) ಆವಾಗ ಶ್ರೀ ಹಯಗ್ರೀವ ಸ್ವಾಮಿಯು ಶ್ರೀ ವಿಶ್ವೋತ್ತಮತೀರ್ಥರಿಗೆ, ಶ್ರೀ ಸ್ವಾಪ್ನವೃಂದಾವನಗತ ಶೃತಿ ಖಂಡಗಳ ಹಾಗೂ ಆ ಶೃತಿಗಳ ಭಾಷ್ಯದ ವಿಷಯಗಳಲ್ಲಿ ಏನು ಅನುಗ್ರಹ ಮಾಡಿದಿ ಎಂಬುದಾಗಿ ಕೇಳಿದನು. ಆಗ ಶಿಶುರೂಪದಲ್ಲಿದ್ದ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳವರು ಆಚಾರ್ಯರಿಗೆ "ಭವಿಷತ್"ಕಾಲದಲ್ಲಿ ನಮ್ಮ ಸಾನುಗ್ರಹದಿಂದ ಸ್ಫುರಣವಾಗಿ ಆ ಮಂತ್ರಗಳಿಗೆ ಭಾಷ್ಯಗಳನ್ನು ಬರೆದು ಒಂದು ಮಹಾ ಗ್ರಂಥವನ್ನು ರಚಿಸಿ ಶ್ರೀ ಮಧ್ವರ ಹಾಗೂ ಶ್ರೀವಾದಿರಾಜರ ಸದನು ಗ್ರಹಕ್ಕೆ ಪಾತ್ರನಾಗಬೇಕು ಎಂದು ಹೇಳಲು, ಶ್ರೀ ಆನಂದತೀರ್ಥಾಚಾರ್ಯರು ಧನ್ಯತಾಭಾವ ಹೊಂದಿದರು.

ಆದಿನದಿಂದ ಇತ್ತೀಚಿನವರೆಗೆ ೨೫೦ ವೃಂದಾವನಾಖ್ಯಾನ ಶೃತಿಗಳಿಗೆ ಪರಮಾದ್ಭುತಗಳಾದ ಭಾಷ್ಯಗಳನ್ನು ರಚಿಸಿ, ಪ್ರಕಟಿಸಿ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿರುವರು. ಶ್ರೀ ವಿಶ್ವೋತ್ತಮತೀರ್ಥರು ವೃಂದಾವನಸ್ಥರಾದ ಮೇಲೂ, ವೃಂದಾವನದಿಂದ ಎದ್ದು ಬಂದು ಶ್ರೀ ಆತ್ಮಕೂರು ಆಚಾರ್ಯರಿಗೆ ಮಾರ್ಗದರ್ಶನ ಮಾಡುತ್ತಿದ್ದಾರೆ ಎಂಬುದಾಗಿ ಆಚಾರ್ಯರು ಹೇಳುತ್ತಾರೆ. ತಮಗಲ್ಲದೆ ಸರ್ವಭಕ್ತರ ಸ್ವರೂಪೋದ್ಧಾರಕರಾಗಿರುವರು ಎಂದು ಭಕ್ತಿಯಿಂದ ನುಡಿಯುತ್ತಾರೆ.

## ಪುಣ್ಯ ಕ್ಷೇತ್ರಗಳಲ್ಲಿ ಕ್ಷೇತ್ರಸ್ಥರಿಂದ ಅನುಗ್ರಹಿತರಾದದ್ದು

**೧. ಗಂಡಕಿಯಾತ್ರೆ :** ಶ್ರೀಗಳವರು ಸಾಮಾನ್ಯವಾಗಿ ದೂರ ಹಾಗೂ ದೀರ್ಘ ಪ್ರಯಾಣ ಮಾಡುವವರಲ್ಲ. ಗಂಡಕಿ ನದಿಯಿರುವ ಮುಕ್ತಿನಾಥಕ್ಕೆ ಹೋಗುವ ಮನಸ್ಸು ಮಾಡಿದ್ದು ದೈವಸಂಕಲ್ಪದಂತೆಯೇ ಎಂದು ಹೇಳಬೇಕು.

ಶ್ರೀಗಳವರು ಶ್ರೀ ಪದ್ಮನಾಭಪುರಾಣಿಕ, ಶ್ರೀ ಲಕ್ಷ್ಮೀನಾರಾಯಣ ಪುರಾಣಿಕ ಹಾಗೂ ಶ್ರೀ ರಾಘವೇಂದ್ರ ಉಪಾಧ್ಯಾಯ ಇವರೊಂದಿಗೆ ಗಂಡಕೀಯಾತ್ರೆ ಹೊರಟರು. ಬೆಂಗಳೂರಿನಿಂದ ಪ್ರಯಾಣ ಹೊರಡುವ ದಿನ ಪದ್ಮನಾಭ ಪುರಾಣಿಕರ ಮನೆಯಲ್ಲಿ ಪ್ರಾತಃ ಆಹ್ನಿಕಕ್ಕೆ ಶ್ರೀಗಳವರು ಕುಳಿತಿರುವಾಗ ಅವರ ಮೇಲ್ಭಾಗದಲ್ಲಿ ಜ್ಯೋತಿಯೊಂದು ತಿರುಗಿದಂತೆ ಪ್ರದಕ್ಷಿಣೆ ಹಾಕುತ್ತಿರುವಂತೆ ಕಂಡುಬಂತು. ಶ್ರೀಗಳವರಿಗೂ ನೆಲಬಿಟ್ಟು ಮೇಲಕ್ಕೆ ಬಂದಂತಹ ಅನುಭವ ಬಂತು.

ಮುಂದೆ ಗಂಡಕಿಯಿಂದ ಮರಳಿ ಬರುತ್ತಿರುವಾಗ ವಿಮಾನದಲ್ಲಿ ಪ್ರಯಾಣಿಸುತ್ತಿದ್ದಾಗ ಸಿಡಿಲು ಬಡಿದು ಹತ್ತು ಹದಿನೈದು ಸೆಕೆಂಡುಗಳ ಕಾಲ ಇಂಜಿನ್ ಸ್ತಬ್ಧನಾಗಿ ಚಾಲಕನ ನಿಯಂತ್ರಣ ತಪ್ಪಿ ಒಂದು ಪಲ್ಟಿಯನ್ನು ಹೊಡೆಯಿತು. ಎಲ್ಲರೂ ಚೀರಿದರೂ ಶ್ರೀಗಳವರೆಗೆ ಯಾವುದೂ ಗಮನಕ್ಕೆ ಬರಲಿಲ್ಲ. ಮತ್ತೆ ಎಲ್ಲವೂ ಸರಿಹೋಯಿತು. ಪ್ರಯಾಣ ಮಾಮೂಲಿನಂತೆ ಮುಂದುವರೆಯಿತು. ಆಗ ಶ್ರೀ ಲಕ್ಷ್ಮೀನಾರಾಯಣ ಪುರಾಣಿಕರು ಶ್ರೀಗಳವರ ಬಳಿ ನಡೆದ ಘಟನೆಯನ್ನು ತಿಳಿಸಿದಾಗ ಶ್ರೀಗಳವರು 'ಸದ್ಯ ದೇವರೇ ಕಾಪಾಡಿದರು' ಎಂದು ನುಡಿದರು. ಆ ಸ್ಥಿತಿಯಲ್ಲಿ ಉಂಟಾದ ಭಯದ ಅನುಭವವೂ ಶ್ರೀಗಳವರಿಗೆ ಉಂಟಾಗದಂತೆ ಪರಮಾತ್ಮ ಸಂಯೋಜಿಸಿರಬೇಕು.

ಗಂಡಕಿನದಿಯ ಉತ್ತರಭಾಗದಲ್ಲಿ ಆಶ್ರಮಗಳಲ್ಲಿ ಸಾಧು ಸಂತರು ವಾಸವಾಗಿದ್ದಾರೆ. ಅಂತಹ ಒಬ್ಬರು ಶ್ರೀಗಳವರೊಂದಿಗೆ ಸಂಸ್ಕೃತದಲ್ಲಿ ಮಾತನಾಡಿದರು ಆಗ ಶ್ರೀಗಳವರೂ ನಿರರ್ಗಳವಾಗಿ ಸಂಸ್ಕೃತದಲ್ಲಿಯೇ ಮಾತನಾಡಿದರು. ಅಷ್ಟೇ ಅಲ್ಲ ಶ್ರೀಗಳವರು ಅವರಿಗೆ ಮಧ್ವಸಿದ್ಧಾಂತದ ಪ್ರಮೇಯಗಳನ್ನು ಸಂಸ್ಕೃತ ಭಾಷೆಯಲ್ಲಿಯೇ ವಿವರಿಸಿದರು.

ಮುಂದೆ ಒಂದು ದಿನ ಜನಸಂಚಾರ ಇಲ್ಲದ ಜಾಗದಲ್ಲಿ ಒಬ್ಬ ಬ್ರಹ್ಮಚಾರಿ ಹಾಗೂ ಆತನ ತಾಯಿ ಕಾಣಿಸಿಕೊಂಡರು. ತನ್ನ ಹೆಸರು ವಿಶ್ವನಿಧಿಯಂತೆ ತಿಳಿಸಿದನು. ಶ್ರೀಗಳವರೊಂದಿಗೆ ಸಂಭಾಷಣೆ ಮಾಡಿದ ಆತನು ಕೊನೆಗೆ ತನ್ನಲ್ಲಿರುವ ವಿಶ್ವಂಬರ ಸಾಲಿಗ್ರಾಮವನ್ನು ಶ್ರೀಗಳವರಿಗೆ ನೀಡಿದನು. ಆಗ ಸಂತಸಗೊಂಡ ಶ್ರೀಗಳವರು ತಾಯಿ ಮಗನಿಗೆ ಸಂಭಾವನೆ ನೀಡುವಂತೆ ಮಠದವರಿಗೆ ಹೇಳಲು ಅವರಿಬ್ಬರು ಕಾಣೆಸದಾದರು.

**೨. ೨ನೇ ಬದರಿ ಯಾತ್ರೆ :** ಈಗ ಒಂಬತ್ತು ವರ್ಷಗಳ ಹಿಂದೆ, ಸೋದೆ ಶ್ರೀಗಳವರು, ಸೀತಾರಾಮಣ್ಣ, ಪ್ರಹ್ಲಾದಾಚಾರ್ಯ ಹಾಗೂ ಹೆಜಮಾಡಿ ರಮೇಶರಾಯರು ಅವರ ತಂದೆತಾಯಿ ಸಮೇತ ಹನ್ನೆರಡು ಜನರೊಂದಿಗೆ ಬದ್ರಿಯಾತ್ರೆಗೆ ಹೊರಟರು. ದೆಹಲಿವರೆಗೆ ವಿಮಾನದಲ್ಲಿ ಹೋಗಿ ಅಲ್ಲಿಂದ ಎರಡು ಜೀಪ್, ಕಾರಿನಲ್ಲಿ ಬದರಿಗೆ ಹೋದಾಗ ಸಾಯಂಕಾಲವಾಗಿತ್ತು. ಮಾರನೆ ದಿನ ಬೆಳಿಗ್ಗೆ ಶ್ರೀಗಳವರು ಅಲಕನಂದಾ ನದಿಯಲ್ಲಿ, ಚಳಿಯಲ್ಲಿ ಮುಳುಗಿ ಸ್ನಾನ ಮಾಡಿದರು. ಉಳಿದವರು ಪ್ರೋಕ್ಷಣೆ ಮಾಡಿಕೊಂಡರು. ಶ್ರೀಗಳವರು ರಮೇಶರಾಯರು

ಹಾಗೂ ಸೀತಾರಾಮಣ್ಣ ಎಲ್ಲರೂ ವಸುಧಾರಕ್ಕೆ ಹೊರಟರು. ಶ್ರೀಗಳವರನ್ನು ಕೂರಿಸಿಕೊಂಡು ಹೋಗಲು ಇಬ್ಬರು ಖುರ್ಚಿಯವರನ್ನು ಗೊತ್ತುಮಾಡಿದ್ದರು. ಉಳಿದವರು ನಡೆದುಕೊಂಡು ಹೊರಟರು. ಆಗ ನಡೆದ ವಿಶೇಷ ಘಟನೆಯನ್ನು ಖುರ್ಚಿ ಹೊತ್ತವರೇ ಹೇಳಿದ್ದು ಎರಡು ಸಾವಿರ ಅಡಿ ಮೇಲೆ ಹೋಗಿ ಕೆಳಗೆ ಬರುವಾಗ ಶ್ರೀಗಳವರು ಖುರ್ಚಿಯಲ್ಲಿ ಕುಳಿತಿದ್ದರು. ಖಾಲಿ ಖುರ್ಚಿ ಇದ್ದಹಾಗೆಯಿತ್ತು. ಸ್ವಾಮಿಗಳು ಖುರ್ಚಿಯಲ್ಲಿದ್ದದ್ದೇ ತಿಳಿಯಲಿಲ್ಲ. ಭಾರವೇನೂ ಇರಲಿಲ್ಲ. ನಮ್ಮಿಬ್ಬರ ಅವಶ್ಯಕತೆಯೇ ಇರಲಿಲ್ಲ. ಇದು ನಮ್ಮ ವೃತ್ತಿಯಲ್ಲಿ ಆದ ಮೊದಲ ಅನುಭವ. ಇಂಥ ಮಹಾತ್ಮರನ್ನು ನಾವು ನೋಡೇ ಇರಲಿಲ್ಲ. ನಾವು ಅವರ ಕಾಲು ಹಿಡಿಯುತ್ತೇವೆ. ಅವರ ಫೋಟೋ ತೆಗೆದು ನಮಗೆ ಕೊಡಲೇ ಬೇಕು ಎಂದು ಭಕ್ತಿಯಿಂದ ಕೇಳಿಕೊಂಡರಂತೆ. (ಆ ಸನ್ನಿವೇಶದಲ್ಲಿ ತೆಗೆದ ಫೋಟೋವನ್ನು ಕೊಡಲಾಗಿದೆ) ಇದು ಶ್ರೀಗಳವರು ಪ್ರದರ್ಶಿಸಿದ ಲಘಿಮಾ ಸಿದ್ಧಿಯ ಯೋಗವಿದು.

ಹಿಂದೆ ಶ್ರೀ ಮಧ್ವಾಚಾರ್ಯರು ನಾಶ್ಯ ಎಂಬ ಊರಿನ ನರಸಿಂಹ ದೇವಸ್ಥಾನದಲ್ಲಿ ವಟುವೊಬ್ಬನ ಭುಜವೇರಿ ಕುಳಿತುಬಿಟ್ಟರು. ಆಗ ಅಲ್ಲಿದ್ದ ಜನಕ್ಕೆಲ್ಲ ಅಚ್ಚರಿ ಇದೇನು, ಭಾರಿ ಜಟ್ಟಿಗಳಿಗೂ ಎತ್ತಲಾಗದ ಭಾರದ ಬೆರಳಿನ ಇವರು, ಇಡಿಯಾಗಿ ಆ ಬಾಲಕನ ಮೇಲೆ ಕುಳಿತೇ ಬಿಟ್ಟರಲ್ಲ ? ಆಗ ಆ ಬಾಲಕನಿಗೋ ಹೂವೆತ್ತಿದ ಅನುಭವ ಮೈಗೆ ಹಿತ. ಮನಸ್ಸಿಗೆ ಮುದ. ಆಗ ಅವರು ವಿಶಾಲವಾದ ಆ ನರಸಿಂಹ ದೇವಾಲಯಕ್ಕೆ ಪ್ರದಕ್ಷಿಣೆ ಮಾಡಿದರು. ಬಾಲಕನಿಗೋ ಸಂಭ್ರಮ; ಎಲ್ಲಿಲ್ಲದ ಉತ್ಸಾಹ ಒಬ್ಬನೇ ನಡೆಯುವುದಕ್ಕಿಂತ ಆರಾಮವಾಗಿ ಭರಭರ ನಡೆಯತೊಡಗಿದನು. ಆಯಾಸವಿಲ್ಲದೆ ಆ ಬಾಲಕನಿಂದ ಅದರ ಪರಿಕ್ರಮಣ. ಅವನ ಮೇಲೆ ಕಿರುನಗೆಯ ಮಧ್ವರು. ಅವರು ಈಗ ಪ್ರದರ್ಶಿಸಿದ್ದು ಲಘಿಮಾ ಯೋಗವನ್ನು ಭಾರವಾದದ್ದನ್ನು ಹಗುರವಾಗಿಸುವ ಕೌಶಲ್ಯ.

**೩. ಘಟಿಕಾಚಲದಲ್ಲಿ :** ಶ್ರೀಗಳವರು ಒಮ್ಮೆ ಘಟಿಕಾಚಲಕ್ಕೆ ಹೋಗಿದ್ದರು. ಅಲ್ಲಿ ಬೆಳಿಗ್ಗೆ ಪೂಜೆ ಮುಗಿಸಿ, ಶ್ರೀ ನರಸಿಂಹದೇವರ ದರ್ಶನಕ್ಕೆ ಬಂದರು. ಅಷ್ಟು ಹೊತ್ತಿಗೆ ಅಲ್ಲಿಯ ಅರ್ಚಕರು ಪೂಜೆ ಮುಗಿಸಿ ಬೀಗ ಹಾಕಿ ಮನೆಗೆ ಹೋಗಲು ಸಿದ್ಧರಾಗಿದ್ದರು. ಶ್ರೀಗಳವರಿಗೆ ನಿರಾಶೆಯಾಯಿತು ಆ ಸಮಯಕ್ಕೆ ದೇವಸ್ಥಾನದ ಮುಖ್ಯಾಧಿಕಾರಿಯು ಅಲ್ಲಿ ಪ್ರತ್ಯಕ್ಷನಾಗಿ ಶ್ರೀ ಶ್ರೀಗಳವರಿಗೆ ಸ್ವಾಗತ ಮಾಡದೇ ಹೋಗುತ್ತಿದ್ದೀರಲ್ಲ ಎಂದು ಅರ್ಚಕರಿಗೆ ಗದರಿಸಿ, ಬೀಗ ತೆಗೆಯಿಸಿ ಶ್ರೀಗಳವರನ್ನು ಪೂರ್ಣಕುಂಭದೊಡನೆ ಸ್ವಾಗತಿಸಿ ಶ್ರೀ ನರಸಿಂಹ ದೇವರ ದರ್ಶನ ಮಾಡಿಸಿ ಫಲ ಪ್ರಸಾದವನ್ನು ಕೊಡಿಸಿದರು.

ಶ್ರೀ ಶ್ರೀಗಳವರು ಅಲ್ಲಿಂದ ಹೊರಡುವುದಕ್ಕೆ ಮುಂಚೆ ಆ ಅಧಿಕಾರಿಗೆ ಫಲಮಂತ್ರಾಕ್ಷತೆ ಕೊಡಲು ಹುಡುಕಿದರೆ ಆತ ಅಲ್ಲಿ ಇಲ್ಲವೇ ಇಲ್ಲ. ಇದು ಭೂತರಾಜರೇ ಅನುಗ್ರಹಿಸಿದ್ದು ಎಂದು ಶ್ರೀ ಶ್ರೀಗಳವರು ಹೇಳುತ್ತಿದ್ದರು.

**೪. ಶ್ರೀ ಕೂರ್ಮಕ್ಷೇತ್ರದಲ್ಲಿ :** ಇದು ಆಂಧ್ರಪ್ರದೇಶದಲ್ಲಿರುವ ಒಂದು ವೈಷ್ಣವಕ್ಷೇತ್ರ. ಬಹು ಅಪೂರ್ವವಾದ, ಪಶ್ಚಿಮಾಭಿಮುಖನಾದ ಕೂರ್ಮಾವತಾರ ಮೂರ್ತಿ ಇದೆ. ಇವನನ್ನು ಕೂರ್ಮೇಶ್ವರ ಎನ್ನುತ್ತಾರೆ. ಮಂದರ ಪರ್ವತ ಕುಸಿದಾಗ ಬೆನ್ನುಕೊಟ್ಟು ಅಮೃತ ಪ್ರಾಪ್ತಿಗೆ ಕಾರಣನಾದ ಈ ಭಗವಂತನ ರೂಪ ೮೪ ಲಕ್ಷವಿಧ ನರಕಗಳಿಂದ ಪಾರು ಮಾಡುತ್ತಾನೆ.

ಶ್ವೇತಾಂಬರರಾಯನನ್ನು ಉದ್ಧಾರ ಮಾಡಲು ಪರಮಾತ್ಮ ಇಲ್ಲಿ ಕೂರ್ಮನಾಗಿ ಕಾಣಿಸಿಕೊಂಡನಂತೆ.

ಶ್ರೀ ವಿಶ್ವೋತ್ತಮತೀರ್ಥರು ಇಲ್ಲಿಗೆ ಆಗಮಿಸಿದಾಗ ಬ್ರಾಹ್ಮಣರೂಪದಿಂದ ಕ್ಷೇತ್ರಾಧಿಪತಿಯಾದ ಕೂರ್ಮನು ದರ್ಶನಕೊಟ್ಟನು.

**೫. ಮಂತ್ರಾಲಯದಲ್ಲಿ ನಡೆದ ಮಹಿಮೆ :** ಒಮ್ಮೆ ಮಂತ್ರಾಲಯಕ್ಕೆ ಹೋದಾಗ ರಾಯರ ದರ್ಶನ ಮಾಡಿ ಬರುವಾಗ ಹನಿ ಹನಿ ಮಳೆ ಬರುತ್ತಿತ್ತು. ವಾಹನ ಹತ್ತುವಾಗ ಕಾಲು ಜಾರಿದ ಕಾರಣ ಕಾಲುಗಂಟಿನಲ್ಲಿ ತರಚಿದಂತಾಯಿತು. ಮಂತ್ರಾಲಯಕ್ಕೆ ಬಂದಾಗಲೇ ಹೀಗಾಗ ಬೇಕೆ ? ಎಂಬ ಭಯ ಕಾಡತೊಡಗಿತು. ಆದರೆ ಮಾರನೆಯ ದಿನವೇ ಶ್ರೀಗಳವರು ಹರ್ಷ ಚಿತ್ತರಾದರು. ಶ್ರೀಗಳವರಲ್ಲಿ ಕಾಲುಗಂಟಿನ ವಿಷಯ ಪ್ರಸ್ತಾಪಮಾಡಲು, ತಮಗೆ ಜಾರಿ ಬೀಳುವುದಕ್ಕಿಂತ ಮುಂಚೆ ಮಂಡಿಯ ಸ್ನಾಯು ನೋವು ಇದ್ದಿತ್ತು. ಬಿದ್ದ ಬಳಿಕ ನೋವು ಶಮನವಾಯಿತು. ಈಗ ಸಂಪೂರ್ಣ ಗುಣವಾಗಿದೆಯಂತ ಹೇಳಿದರು.

**೬. ಚಿಪ್ಪಗಿರಿಯ ವಿಜಯದಾಸರ ಕಟ್ಟೆಯಲ್ಲಿ :** ನಾಲ್ಕನೇ ಪರ್ಯಾಯ ಸಂಚಾರತ್ವೇನ ಶ್ರೀ ವಿಶ್ವೋತ್ತಮತೀರ್ಥರ ಚಿಪ್ಪಗಿರಿಗೆ ಬಂದಾಗ ರಾತ್ರಿ ೮.೩೦ ಗಂಟೆ ಆಗಿತ್ತು. ಆಗ ಶ್ರೀ ಶ್ರೀಗಳವರು ವಿಜಯದಾಸರ ಕಟ್ಟೆಗೆ ಭಕ್ತಿಯಿಂದ ಶಿರಸಾಷ್ಟಾಂಗ ಪ್ರಣಾಮವನ್ನು ಅರ್ಪಿಸಿದಾಗ ಅಂದು ಬೆಳಿಗ್ಗೆ ಶ್ರೀ ವಿಜಯರಾಯರಿಗೆ ಅರ್ಪಿಸಿದ ಸುಮಾರು ಆರು ಮೊಳದ ಹಾರ ಥಟ್ಟನೆ ಕಟ್ಟೆಯಿಂದ ಇಳಿದು ಬಿತ್ತು. ಅದೂ ಕೂಡ ಶ್ರೀಗಳವರು ಸಾಷ್ಟಾಂಗ ನಮಸ್ಕಾರ ಅರ್ಪಿಸಿ ಏಳುವಷ್ಟರಲ್ಲಿ ಬಿದ್ದಿತು. ಬೆಳಿಗ್ಗೆಯಿಂದ ಶ್ರೀ ವಿಜಯರಾಯರು ಕಾದಿಟ್ಟು ಶ್ರೀ ವಿಶ್ವೋತ್ತಮರಿಗಾಗಿಯೇ ಅನುಗ್ರಹಿಸಿದ್ದನ್ನು ಕಂಡು ಅಲ್ಲಿದ್ದ ಭಕ್ತವೃಂದ ಆನಂದಬಾಷ್ಪದೊಂದಿಗೆ ರೋಮಾಂಚನವಾಗಿ ಶ್ರೀ ವಿಶ್ವೋತ್ತಮ ತೀರ್ಥರಿಗೆ ಒಕ್ಕೊರಲಿನಿಂದ ಜಯಘೋಷ ಹಾಕಿ ಧನ್ಯತೆ ಪಡೆಯಿತು.

ಮರುದಿನ ಬೆಳಿಗ್ಗೆ ಶ್ರೀ ಶ್ರೀಗಳವರು ಪಟ್ಟದದೇವರ ಪೂಜೆ ನಂತರ ಶ್ರೀ ವಿಜಯರಾಯರ ಸನ್ನಿಧಿಗೆ ಹಾಗೂ ಮೋಹನದಾಸರ ಸನ್ನಿಧಾನವುಳ್ಳ ಕಂಬಕ್ಕೆ ನೈವೇದ್ಯ ಸಮರ್ಪಣೆ ಮಾಡಿ ಹರ್ಷಚಿತ್ತರಾದರು.

**೭. ಉತ್ತನೂರಿನಲ್ಲಿ ಗೋಪಾಲದಾಸರ ದರ್ಶನ :** ಗಣೇಶಾಂಶ ಸಂಭೂತರಾದ ಶ್ರೀ ಗೋಪಾಲದಾಸರ ಕಾರ್ಯಕ್ಷೇತ್ರ ಉತ್ತನೂರು. ಅಲ್ಲಿ ಗೋಪಾಲದಾಸರು ವಾಸವಾಗಿದ್ದ ಮನೆ. ಅವರು ಪೂಜಿಸಿದ ಶಾಲಿಗ್ರಾಮ ಹಾಗೂ ದೇವರ ವಿಗ್ರಹಗಳಿವೆ. ಶ್ರೀ ವೆಂಕಟೇಶ ದೇವಸ್ಥಾನದಲ್ಲಿಯೇ ಹೆಚ್ಚಾಗಿ ಇರುತ್ತಿದ್ದು. ಭಕ್ತಾದಿಗಳಿಗೆ ಭವಿಷ್ಯ ಹೇಳುತ್ತಿದ್ದರು. ಅವರು ಒರಗಿ ಕೂಡುತ್ತಿದ್ದ ಕಂಬವಿದೆ. ಅವರು ಇಲ್ಲಿಯೇ ಹಲವಾರು ಕೀರ್ತನೆ ರಚಿಸಿದ್ದಾರೆ. ಅವರು ಇಲ್ಲಿಯೇ ದೇಹತ್ಯಾಗ ಮಾಡಿದರು. ಅವರ ಅಸ್ತಿಯನ್ನು ಊರ ಹತ್ತಿರವಿರುವ ಹೊಳೆಯಲ್ಲಿ ಹೊಳಲಾಗಿದೆ. ಮುಂದೆ ಕಾಲಾಂತರದಲ್ಲಿ ತಾವೇ ಅದೇ ವಂಶದಲ್ಲಿ ಜನ್ಮವೆತ್ತಿ ಬಂದಾಗ ಕಾಶಿಗೆ ಒಯ್ದು ಅಸ್ತಿ ವಿಸರ್ಜನೆ ಮಾಡುತ್ತೇವೆ ಎಂತ ತಿಳಿಸಿರುವರು.

ಶ್ರೀ ವಿಶ್ವೋತ್ತಮತೀರ್ಥರು ಉತ್ತನೂರಿಗೆ ಬಂದಾಗ ಗೋಪಾಲದಾಸರು ಕನಸಿನಲ್ಲಿ ದರ್ಶನವಿತ್ತು ಅನುಗ್ರಹಿಸಿದ್ದಾರೆ.

೮. ಮಾದನೂರು : ಕೊಪ್ಪಳದಿಂದ ೮ ಕಿ.ಮೀ. ದೂರದಲ್ಲಿ ಮಾದನೂರು ಇದೆ. ಇಲ್ಲಿ ಶ್ರೀ ವಿಷ್ಣುತೀರ್ಥರ ವೃಂದಾವನವಿದೆ. "ಮಂಚಬಾರದು ಮಡದಿಬಾರಳು" ಎಂದ ಪುರಂದರದಾಸರ ಪದವು ದಾಸಯ್ಯನಿಂದ ಹಾಡಿದ್ದು ಕೇಳಿ ತಕ್ಷಣವೇ ವೈರಾಗ್ಯತಾಳಿದ ಜಯತೀರ್ಥಾಚಾರ್ಯರು ಮುಂದೆ ಉತ್ತರಾದಿ ಮಠಾಧೀಶರಾದ ಸತ್ಯವರತೀರ್ಥರಿಂದ ತುರೀಯಾಶ್ರಮ ಸ್ವೀಕರಿಸಿ, ಅವಧೂತಚರ್ಯೆಯಲ್ಲಿದ್ದು ಅನೇಕ ಜನ ಶಿಷ್ಯರಿಗೆ ಪಾಠಹೇಳಿದವರು ೧೨ ವರ್ಷ ಕಾಡಿನಲ್ಲಿ ವಾಸವಾಗಿದ್ದರಿಂದ ಅರಣ್ಯಾಚಾರ್ಯರು ಅಡವಿಸ್ವಾಮಿಗಳೆಂದು ಪ್ರಸಿದ್ಧರಾದರು ಇವರು ವೇಣಿಸೋಮಪುರದ ಐಜಿಸ್ವಾಮಿಗಳ ಶಿಷ್ಯತ್ವವಹಿಸಿ ಅವರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಇವರು ಗೋಪಾಲದಾಸರ ಸಮಕಾಲೀನರು ಅನೇಕ ಕೃತಿಗಳನ್ನು ಸಂಸ್ಕೃತ ಭಾಷೆಯಲ್ಲಿ ರಚನೆ ಮಾಡಿರುವರು. ಅಪಾರ ಮಹಿಮಾ ಸಂಪನ್ನರಾಗಿದ್ದರು. ಶ್ರೀ ವಿಶ್ವೋತ್ತಮತೀರ್ಥರು ಮಾದನೂರಿಗೆ ಆಗಮಿಸಿ ಇವರ ವೃಂದಾವನ ದರ್ಶನ ಪಡೆದಾಗ ವೃಂದಾವನವು ಕೈಲಾಸಪರ್ವತದಂತೆ ಕಾಣಿಸಿತು.

೯. ಮಾನವಿಯಲ್ಲಿ : ರಾಯಚೂರು ಜಿಲ್ಲೆಯಲ್ಲಿರುವ ಮಾನವಿಯು ಜಗನ್ನಾಥದಾಸರ ಕ್ಷೇತ್ರ, ಕಂಬದಲ್ಲಿದ್ದ ನರಸಿಂಹ ರೂಪಿ ಪರಮಾತ್ಮವನ್ನು ಪ್ರತ್ಯಕ್ಷೀಕರಿಸಿಕೊಂಡ. ಪ್ರಹ್ಲಾದರ ತಮ್ಮ ಸಹ್ಲಾದರು ಜಗನ್ನಾಥದಾಸರಾಗಿ ಆವತರಿಸಿ ಗುರುಗಳಾದ ಗೋಪಾಲದಾಸರಿಂದ ೪೦ ವರ್ಷ ಆಯುಷ್ಯವನ್ನು ಪಡೆದು, ಶ್ರೀ ದಾಸಸಾಹಿತ್ಯದ ಮೇರುಕೃತಿ 'ಹರಿಕಥಾಮೃತಸಾರ' ರಚಿಸಿದ ಮಹನೀಯರು. ಇವರು ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ತುಂಬು ಬಾಳನ್ನು ಬಾಳಿ ಮಾನವಿಯಲ್ಲಿ ಕಂಬಕ್ಕೊರಗಿ ಕುಳಿತು ಹರಿಧ್ಯಾನ ಪರರಾದರು. ಅವರ ಸನ್ನಿಧಾನವಿರುವ ಆ ಕಂಬಕ್ಕೆ ಮುಖವಾಡ ಹಾಕಿ ಪೂಜಾದಿಗಳನ್ನು ಸಲ್ಲಿಸಲಾಗುತ್ತಿದೆ. ಶ್ರೀ ವಿಶ್ವೋತ್ತಮತೀರ್ಥರು ಮಾನವಿಗೆ ಆಗಮಿಸಿದಾಗ ಪ್ರತ್ಯಕ್ಷದರ್ಶನವಿತ್ತಿದ್ದಾರೆ.

೧. ಶ್ರೀ ವಿಶ್ವೋತ್ತಮತೀರ್ಥರಿಗೆ ಒಲಿದ ವರುಣ :

ಒಮ್ಮೆ ಉಡುಪಿ ಹತ್ತಿರವಿರುವ 'ಮಟ್ಟು' ಗ್ರಾಮದಲ್ಲಿ ಮಳೆಬಾರದೆ ಜನ ಕಂಗಾಲಾದರು. ಏನು ಮಾಡಲೂ ತೋಚದೆ ಕಂಗೆಟ್ಟರು. ಹಿಂದೆ ವಾದಿರಾಜರ ಕಾಲದಲ್ಲಿ ಇದೇ ಗ್ರಾಮದೇವರು ವಾದಿರಾಜರು ಕೊಟ್ಟ ಬೀಜದಿಂದ ಗುಳ್ಳ ಬೆಳೆದರು. ಹಯವದನನಿಗೆ ಸಮರ್ಪಿಸಿದ ಗುಳ್ಳದ ಪದಾರ್ಥದಿಂದ ವಾದಿರಾಜರಿಗೆ ವಿಷ ಪರಿಹಾರವಾದುದು ಇತಿಹಾಸ; ಅಂದಿನಿಂದ ಇವರು ಸೋದೆ ಮಠದ ಶಿಷ್ಯರಾಗಿರುವರು ಮಳೆಬಾರದೆ ಕಷ್ಟಕ್ಕೆ ಸಿಲುಕಿರುವ ತಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಗ್ರಾಮಸ್ಥರ ಪ್ರಾರ್ಥನೆಗೆ ಸ್ಪಂದಿಸಿದ ಗುರುಗಳು ಮಟ್ಟುಗ್ರಾಮಕ್ಕೆ ಬಂದರು.

ಗ್ರಾಮದ ಸಮೀಪದಲ್ಲಿರುವ ಸಮುದ್ರತೀರಕ್ಕೆ ಹೋಗಿ, ಕೈಯಲ್ಲಿ ಪೂರ್ಣಫಲ ಹಿಡಿದು, ವರುಣದೇವರ ಅಂತರ್ಯಾಮಿ ಶ್ರೀ ನಾರಾಯಣನನ್ನು ಭಕ್ತಿಪೂರ್ವಕ ಪ್ರಾರ್ಥಿಸಿ ಫಲವನ್ನು ಕಡಲಶಾಯಿಗೆ ಸಮರ್ಪಿಸಿ ಹೊರಡುವಷ್ಟರಲ್ಲಿಯೇ ಮಧ್ಯಾಹ್ನದ ಬಿಸಿಲು ಮಾಯವಾಗಿ ಅನಿರೀಕ್ಷಿತ ಕಾರ್ಮುಗಿಲಿನಿಂದ ಕೂಡಿದ ಮಳೆಯು ಧಾರಾಕಾರವಾಗಿ ಸುರಿಯತೊಡಗಿತು. ಊರಿನವರೆಲ್ಲಾ ಸಂಭ್ರಮದಿಂದ ಕುಣಿದಾಡುತ್ತಾ ಶ್ರೀಗಳವರ ಮಹಿಮೆಗೆ ಬೆರಗಾದರು. ಹಾಗೂ 'ಶ್ರೀ ರಾಜರ ಕಾಲದಲ್ಲಿ ನಮ್ಮ ಊರು ಬದುಕುಳಿದಂತೆ, ತಮ್ಮ ಕಾಲದಲ್ಲಿಯೂ ಬದುಕುಳಿಯಿತು' ಎಂದು ಶ್ರೀಗಳವರ ಮಹಿಮೆ ಹಾಡಿ ಹೊಗಳಿದರು.

### ೨. ಬಾವಿಗೆ ಬಂದ ಭಾಗೀರಥಿ :

ಕೆಲವು ವರ್ಷಗಳ ಹಿಂದೆ ಶ್ರೀ ವಿಶ್ವೋತ್ತಮತೀರ್ಥರು ಮೈಸೂರಿಗೆ ಆಗಮಿಸಿದಾಗ ಸುಬ್ಬರಾಯದಾಸರ ಗುಡಿಯ ಅರ್ಚಕರು ಶ್ರೀಗಳವರ ಸನ್ನಿಧಿಗೆ ಬಂದು ನಮ್ಮ ಗುಡಿಯ ಬಾವಿ ಬತ್ತಿದೆ. ಅಭಿಷೇಕಕ್ಕೂ ನೀರು ಒದಗುತ್ತಿಲ್ಲ. ಸಿಗುವ ಅರ್ಧ ತಂಬಿಗೆ ನೀರನ್ನೆ ಸೋಸಿ ದೇವರಿಗೆ ಅಭಿಷೇಕ ಮಾಡುವ ಪ್ರಸಂಗ ಒದಗಿದೆ. ತಾವು ದಯಮಾಡಿ ಗುಡಿಗೆ ಬಂದು ಬಾವಿಯಲ್ಲಿ ನೀರು ಬರುವಂತೆ ಅನುಗ್ರಹಿಸಬೇಕು, ಎಂದು ಪ್ರಾರ್ಥಿಸಿದರು. ಕರುಣಾ ಮೂರ್ತಿಗಳಾದ ಶ್ರೀಗಳವರು ಗುಡಿಗೆ ಹೋಗಿ ದೇವರಿಗೆ ನಮಸ್ಕರಿಸಿ, ಬಾವಿಯ ಬಳಿಗೆ ಹೋಗಿ, ಗಂಗಾಂತರ್ಗತ ಮಂಗಳಮೂರ್ತಿಯಾದ ಗಂಗಾಜನಕನನ್ನು ಭಕ್ತಿಪೂರ್ವಕ ಪ್ರಾರ್ಥಿಸಿ ಮಂತ್ರಾಕ್ಷತೆಯನ್ನು ಬಾವಿಗೆ ಹಾಕಿ ಸೋದಾಕ್ಷೇತ್ರಕ್ಕೆ ಮರಳಿದರು.

ಸೋದೆಯಲ್ಲಿ ಶ್ರೀಗಳವರು ಚಾತುರ್ಮಾಸದಲ್ಲಿದ್ದಾಗ, ಮೈಸೂರಿನ ಗುಡಿಯ ಅರ್ಚಕರು ಸೋದೆಗೆ ಬಂದು ಶ್ರೀಗಳವರಿಗೆ ಸಾಷ್ಟಾಂಗ ನಮಸ್ಕರಿಸಿ ಆನಂದದಿಂದ ಹೇಳಿದರು. "ಸ್ವಾಮಿ! ತಾವು ಬಾವಿಗೆ ಮಂತ್ರಾಕ್ಷತೆ ಹಾಕಿದ ಮರುದಿನವೇ ಬಾವಿಯು ನೀರಿನಿಂದ ಭರ್ತಿಯಾಯಿತು". ಅದನ್ನು ಕಂಡು ಆನಂದದಿಂದ ಮೈಮರೆತೆವು. ಅದನ್ನು ತಿಳಿಸಲ್ಲಿಕ್ಕೆಂದೇ ಬಂದಿದ್ದೇನೆ. ಎನ್ನುತ್ತಾ ಪುನಃ ಪುನಃ ನಮಸ್ಕರಿಸಿದರು. ಆಗ ಶ್ರೀಗಳವರು ಎಲ್ಲಾ ಶ್ರೀ ಗುರುರಾಜರ ಹಾಗೂ ಶ್ರೀ ಭೂತರಾಜರ ದಯೆ ನಮ್ಮದೇನೂ ಇಲ್ಲ ಎಂದು ಹೇಳಿದರು.

### ೩. ಉಪ್ಪುನೀರು ಸಿಹಿಯಾದದ್ದು :

ಶ್ರೀಪಾದಂಗಳ ಭಕ್ತರಾದ ಶಿವಮೊಗ್ಗಾ ಜಿಲ್ಲೆಯ ಹಾರನಹಳ್ಳಿವಾಸಿ ಶ್ರೀ ಲಕ್ಷ್ಮಣ ರಾಯರೆಂಬುವವರು 'ಶ್ರೀ ವಿಶ್ವೋತ್ತಮತೀರ್ಥಕೃಪಾ' ಎಂಬ ಹೊಸದಾಗಿ ಮನೆಕಟ್ಟಿಸಿದರು. ಮನೆ ಪೂರ್ತಿಯಾಗಿದ್ದರೂ ಗೃಹಪ್ರವೇಶ ಮಾಡಿರಲಿಲ್ಲ. ಶ್ರೀಗಳವರ ಆಗಮನಕ್ಕಾಗಿ ಕಾದಿದ್ದರು. ೭-೬-೧೯೯೩ರಂದು ಶ್ರೀಗಳವರು ಬರಲು ಸಮ್ಮತಿಸಿದ್ದರಿಂದ ಮುಹೂರ್ತವಿಟ್ಟರು. ಮುಂಚಿನದಿನ ಸಾಯಂಕಾಲ ಶ್ರೀಗಳವರು ಆಗಮಿಸಿದರು. ಆಗ ಮಠದವರಿಗೆ ತಿಳಿದದ್ದೇನೆಂದರೆ, ಆ ಊರಲ್ಲಿ ಎಲ್ಲಾ ಬಾವಿಗಳ ನೀರು ಉಪ್ಪು, ಸಿಹಿ ನೀರು ತರಬೇಕಾದ ಬಾವಿ ಒಂದು ಕಿಲೋ ಮೀಟರ್ ದೂರದಲ್ಲಿ ಇದೆ. ಮಠದವರು ಅಷ್ಟು ದೂರದಿಂದ ನೀರು ತರಲು ಒಪ್ಪಲಿಲ್ಲ. ಆಗ ಲಕ್ಷ್ಮಣರಾಯರು ಖಿನ್ನರಾದರು. ಆಗ ಮಠದವರೇ ರಾಯರನ್ನು ಸಮಾಧಾನಪಡಿಸಿ ಉಪ್ಪು ನೀರಿನ ಬಾವಿಯ ನೀರನ್ನು ಬಳಸುತ್ತೇವೆ. ಧೈರ್ಯದಿಂದ ಇರುವಂತೆ ತಿಳಿಸಿದರು. ಮರುದಿನ ಮಾಮೂಲಿನಂತೆ ಪೂಜೆ, ನೈವೇದ್ಯಗಳಾದವು. ತೀರ್ಥ, ಅಡಿಗೆಗಳೆಲ್ಲಾ ಸಿಹಿನೀರಿನಿಂದ ಮಾಡಿದಂತೆ ರುಚಿಕರವಾಗಿದ್ದವು. ಆಗ ಕಾರ್ಯಕ್ರಮಕ್ಕೆ ಬಂದ ಭಕ್ತರಿಗೆಲ್ಲಾ ವಿಷಯ ತಿಳಿದು ಆನಂದ ಆಶ್ಚರ್ಯ ಏಕಕಾಲದಲ್ಲಾಯಿತು. ಶ್ರೀ ವಿಶ್ವೋತ್ತಮತೀರ್ಥರಿಗೆ ಜಯ-ಘೋಷ ಹಾಕಿದರು. "ಉಪ್ಪು ನೀರು ಸಿಹಿ ನೀರಾದದ್ದು ಶ್ರೀಶ್ರೀ ವಿಶ್ವೋತ್ತಮತೀರ್ಥರ ತಪಶಕ್ತಿಯ ಫಲವಲ್ಲವೇ"

### ಶ್ರೀ ವಿಶ್ವೋತ್ತಮರ ಮಹಿಮೆಗಳು :

ಶ್ರೀಗಳವರ ಬಗ್ಗೆ ಅಪಾರಗೌರವ, ವಿಶ್ವಾಸಗಳನ್ನಿರಿಸಿಕೊಂಡಿದ್ದು, ಶ್ರೀಗಳವರ ಸನ್ಯಾಸಾಶ್ರಮ ಸ್ವೀಕಾರದಿಂದ ಹರಿಪಾದಗೈದ ಘಳಿಗೆವರೆಗೂ ಅವರನ್ನು ಅತೀ ಹತ್ತಿರದಿಂದ ಅವರ ಒಡನಾಡಿಯಾಗಿ ಸೇವೆಗೈದ ಗೋವಿಂದಣ್ಣನವರದ್ದು ಸಾರ್ಥಕ ಜೀವನ. ಶ್ರೀಗಳವರು ಅನುಗ್ರಹಿಸಿ

ಮಂತ್ರಾಕ್ಷತೆ ನೀಡಿದರೆ ಭಕ್ತರ ಸಂಕಟ ನಿವಾರಣೆಯಾಗಿ, ಅಭೀಷ್ಟ ಈಡೇರಿಕೆ ಶೇಕಡಾ ೯೫ ಗ್ಯಾರಂಟಿ, ಅಷ್ಟು ಶಕ್ತಿ ನಮ್ಮ ಗುರುಗಳಲ್ಲಿತ್ತು ಎನ್ನುತ್ತಾರೆ ಗೋವಿಂದಣ್ಣನವರು ಸಂದರ್ಶನವೊಂದರಲ್ಲಿ.

**೪. ರೋಗದಿಂದ ಮುಕ್ತರಾದವರು :**

ಶ್ರೀ ಎಸ್.ಎಲ್.ಎನ್.ಭಟ್, ಸಬ್ ಮ್ಯಾನೇಜರ್ ಸಿಂಡಿಕೇಟ್ ಬ್ಯಾಂಕ್ ಇವರಿಗಾದ ಅನುಗ್ರಹವು.

ಇವರು ಉಡುಪಿ ನಿವಾಸಿ ಚಿಕ್ಕಂದಿನಲ್ಲಿ ಒಂದು ತರಹದ ಕಾಹಿಲೆಯಿಂದ ನರಳುತ್ತಿದ್ದರು. ವೈದ್ಯರಿಂದ ಗುಣವಾಗದೆ ಬಹಳ ತೊಂದರೆ ಪಡುತ್ತಿದ್ದರು. ಆಗ ಅವರ ಅಜ್ಜ "ನೀನು ಪ್ರತಿದಿನ ಈಗ ಪರ್ಯಾಯ ಪೀಠಸ್ಥರಾದ ಸೋದೆಮಠಾಧೀಶರಲ್ಲಿ ಹೋಗಿ ೪೧ ದಿನಗಳ ಕಾಲ ತೀರ್ಥ ತೆಗೆದುಕೋ, ಗುಣವಾಗುತ್ತದೆ" ಎಂದು ಹೇಳಿದರು. ಅದರಂತೆ ಈ ಬಾಲಕನು ಪ್ರತಿದಿನ ತೀರ್ಥ ತೆಗೆದುಕೊಳ್ಳಲು ಪ್ರಾರಂಭಿಸಿದನು. ೨೦ ದಿನಗಳಲ್ಲಿ ಕಾಯಿಲೆ ಪೂರ್ತಿಗುಣವಾಯಿತು. ೨೧ ನೇ ದಿನ ಶ್ರೀಗಳವರು ನೀನು ಯಾರು ? ಪ್ರತಿದಿನ ತೀರ್ಥಕ್ಕೆ ಬರುತ್ತಿಯಲ್ಲ. ನೀನು ಶಾಲೆಗೆ ಹೋಗುವುದಿಲ್ಲವೇ? ಎಂದು ಕೇಳಿದರು. ಆಗ ಬಾಲಕನು "ನನಗೆ ವಿಚಿತ್ರವಾದ ಕಾಯಿಲೆಯಿತ್ತು. ಔಷಧದಿಂದ ಗುಣವಾಗಲಿಲ್ಲ. ಆಗ ನಮ್ಮ ಅಜ್ಜ ೪೧ ದಿನಗಳಕಾಲ ತಮ್ಮಲ್ಲಿ ತೀರ್ಥ ತೆಗೆದುಕೊಳ್ಳುವಂತೆ ಹೇಳಿದರು. ಅದರಂತೆ ನಾನು ತಮ್ಮಲ್ಲಿಗೆ ಬಂದು ತೀರ್ಥ ತೆಗೆದುಕೊಳ್ಳಲು ಪ್ರಾರಂಭಿಸಿದೆನು. ಇಪ್ಪತ್ತು ದಿನಗಳಲ್ಲಿಯೇ ಕಾಯಿಲೆ ಪೂರ್ತಿ ವಾಸಿಯಾಯಿತು, ತಮ್ಮ ಅನುಗ್ರಹದಿಂದ ಎಂದು ಹೇಳಿ ಶ್ರೀಗಳವರಿಗೆ ನಮಸ್ಕರಿಸಿದನು. "ಈಗ ಮತ್ತೇಕೆ ಬಂದೆ?" ಎಂದು ಪ್ರಶ್ನಿಸಲು "ಅಜ್ಜ ೪೧ ದಿನ ತೀರ್ಥ ತೆಗೆದುಕೊಳ್ಳುವಂತೆ ಹೇಳಿದ್ದಾರೆ" ಎನ್ನಲು "ಅಜ್ಜ ಹೇಳಿದಂತೆ ಮಾಡು ನಮ್ಮದೇನೂ ಇಲ್ಲ. ಭೂತರಾಜರು ಗುರುರಾಜರು ಅನುಗ್ರಹ ಮಾಡುತ್ತಾರೆ" ಎಂದು ಹೇಳಿದರು.

**೫. ಅಂಧತ್ವ ನಿವಾರಣೆ :**

ಇದು ಇಪ್ಪತ್ತು ವರ್ಷಗಳ ಹಿಂದೆ ನಡೆದದ್ದು. ಆತ ಪಾಂಡವಪುರದ ತಾಲೂಕಿನ ಹಳ್ಳಿಯವನು. ಗೌಡ ಜನಾಂಗದ ವ್ಯಕ್ತಿ. ಆತನಿಗೆ ಏಳನೆಯ ವಯಸ್ಸಿನಲ್ಲಿ ಒಂದು ಕಣ್ಣು ಮಂಜಾಯಿತು. ವೈದ್ಯರಲ್ಲಿ ತೋರಿಸಿದಾಗ ಆಪರೇಶನ್ ಮಾಡಬಹುದು. ದೃಷ್ಟಿ ಬರುವುದು ಗ್ಯಾರಂಟಿಯಿಲ್ಲ ಆಪರೇಶನ್ ಮಾಡದಿದ್ದರೆ ಕಣ್ಣು ಸಂಪೂರ್ಣವಾಗಿ ಹೋಗುತ್ತದೆ ಎಂದು ಹೇಳಿದರು. ಆಗ ಏನಾದರಾಗಲಿ ಎಂದು ಆಪರೇಶನ್ ಮಾಡಿಸಿದರು. ಅದರಿಂದ ಪ್ರಯೋಜನವಾಗದೆ, ಪೂರ್ತಿ ಅಂಧನಾದನು. ಪುನಃ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಇನ್ನೊಂದು ಕಣ್ಣು ಕೂಡಾ ಹಾಗೆಯೇ ಮಂಜಾಗಲು ಪ್ರಾರಂಭವಾಯಿತು. ವೈದ್ಯರಿಗೆ ತೋರಿಸಲು ಪುನಃ ಮುಂಚೆ ತಿಳಿಸಿದಂತೆಯೇ ಹೇಳಲು, ಏನು ಮಾಡಬೇಕೆಂದು ತಿಳಿಯದೇ ಪರಿತಪಿಸುತ್ತಿದ್ದಾಗ ಯಾರೋ ಮಹನೀಯರೊಬ್ಬರು "ನೀನು ಸೋದೆಗೆ ಹೋಗು, ಅಲ್ಲಿ ಸ್ವಾಮಿಗಳಲ್ಲಿ ಅರಿಕೆ ಮಾಡಿಕೋ ಅವರು ಹೇಳಿದಂತೆ ಮಾಡು" ಎಂದು ಹೇಳಿದರು. ಆಗ ಆತನು ಸೋದೆಗೆ ಬಂದು ಸಾದ್ಯಂತ ತನ್ನ ವಿಷಯವನ್ನು ಶ್ರೀಗಳವರಲ್ಲಿ ಅರುಹಿದನು. ಆಗ ಶ್ರೀಗಳವರು ಶ್ರೀವಾದಿರಾಜರ ಸ್ತೋತ್ರದ ಪುಸ್ತಕವೊಂದನ್ನು ಕೊಟ್ಟು "ಪ್ರತಿದಿನ ಬೆಳಿಗ್ಗೆ ಮತ್ತು

ಸಂಜೆ ಸ್ನಾನ ಮಾಡಿ ಶುದ್ಧನಾಗಿ ಸ್ತೋತ್ರ ಪಠಣೆ ಮಾಡು. ನಿನಗೆ ಒಳ್ಳೆಯದಾಗುತ್ತದೆ" ಎಂದು ನುಡಿದರು.

ಆತ ಸತತ ಒಂದು ವರ್ಷಕಾಲ ಸ್ತೋತ್ರವನ್ನು ಪಠಣೆ ಮಾಡುತ್ತಾ ಇದ್ದನು. ಮಂಜಾಗುತ್ತಿದ್ದ ಕಣ್ಣು ಸ್ಪಷ್ಟವಾಗಿ ಕಾಣುವಂತಾಯಿತು. ಅಲ್ಲದೆ ಆಪರೇಷನ್ ಮಾಡಿದ ಕಣ್ಣು ಕೂಡಾ ಸ್ವಲ್ಪ ಸ್ವಲ್ಪ ಕಾಣತೊಡಗಿತು. ಆತನು ಸೋದೆಗೆ ಬಂದು ಶ್ರೀಗಳವರಿಗೆ ತನಗಾದ ಅನುಗ್ರಹವನ್ನು ವಿವರಿಸಿದನು. ಇಷ್ಟೆ ಅಲ್ಲದೆ ಶ್ರೀಗಳವರ ಮುಂದೆ ಕುಳಿತು ತನಗೆ ಮುಂದಿನ ಜನ್ಮದಲ್ಲಾದರೂ ಬ್ರಾಹ್ಮಣ ಜನ್ಮದೊರೆಯುವಂತೆ ಆಶೀರ್ವಾದ ಮಾಡಿದರೆ ಅದು ಖಂಡಿತ ನೆರವೇರುತ್ತದೆ. ಆಗಲಾದರೂ ನಾನು ದೇವರ ಪೂಜೆ ಮಾಡುವ ಭಾಗ್ಯ ಪಡೆಯುವೆನು ಎಂದು ಪ್ರಾರ್ಥಿಸಿದನು. ಅದಕ್ಕೆ ಶ್ರೀಗಳವರು ಏನು ಹೇಳಿದರು ಗೊತ್ತೆ? ಈಗ ನೀನು ಬ್ರಾಹ್ಮಣನಲ್ಲದಿದ್ದರೂ ಬ್ರಾಹ್ಮಣ್ಯವನ್ನು ಆಚರಿಸುತ್ತಿದ್ದೀ. ಶ್ರದ್ಧಾ ಭಕ್ತಿಯಿಂದ ದೇವರಲ್ಲಿ ಮಾಡುವ ಪ್ರಾರ್ಥನೆಯೇ ದೇವರ ಪೂಜೆ, ಇದಕ್ಕೆ ಬ್ರಾಹ್ಮಣ ಜನ್ಮ ಬೇಕಾಗಿಲ್ಲ. ಎಷ್ಟೋ ಜನ ಬ್ರಾಹ್ಮಣರಾಗಿ ಹುಟ್ಟಿ ಬ್ರಾಹ್ಮಣ್ಯದ ಆಚರಣೆ ಮಾಡುತ್ತಿಲ್ಲ. ಅದು ಪಾಪಕರ. ನೀನು ಜನ್ಮತಃ ಬ್ರಾಹಣನಲ್ಲದಿದ್ದರೂ ಬ್ರಾಹ್ಮಣ್ಯವನ್ನು ಆಚರಿಸಿ ಪುಣ್ಯಗಳಿಸಿದ್ದಿ. ಆದ್ದರಿಂದಲೇ ರಾಜರ ಕೃಪೆ ನಿನಗಾಗಿದೆ. ಈ ಪುಣ್ಯದ ಫಲದಿಂದಲೇ ನಿನಗೆ ಮುಂದಿನ ಜನ್ಮ ಬ್ರಾಹ್ಮಣವಾದರೂ ಆಗಬಹುದು ಎಂದು ನುಡಿದರು.

**೬. ಆಡಿಟರ್ ಶ್ರೀ ಎಚ್.ವ್ಹಿ. ಗೌತಮರ ಅನುಭವ ಅವರ ಮಾತಿನಲ್ಲಿ :**

೧೯೯೪ರಲ್ಲಿ ನಮ್ಮ ತಂದೆಯವರ ಮನೆಯಲ್ಲಿ ಭಗವಂತನ ಅನುಗ್ರಹದಿಂದ ಸೋದೆ ಗುರುಗಳು ಬಂದು ಪೂಜೆ ಮಾಡುವವರಿದ್ದರು. ಆ ಸಂಭ್ರಮದಲ್ಲಿ ಪಾಲ್ಗೊಳ್ಳಲು ನಾವೆಲ್ಲ ನಮ್ಮ ತಂದೆಯವರ ಮನೆಯಲ್ಲಿಯೇ ತಂಗಿದ್ದೆವು. ಬಹಳ ಲವಲವಿಕೆಯಿಂದಲೇ ಇದ್ದ ನಾನು ಸಂಜೆಯ ವೇಳೆಗೆ ಸುಮ್ಮನೆ ಹೋಗಿ ಮಲಗಿಬಿಟ್ಟೆನು. ಸ್ವಲ್ಪ ಹೊತ್ತಿನಲ್ಲಿ ಜ್ಞಾನ ಕಳೆದುಕೊಂಡುಬಿಟ್ಟೆನು. ಎಷ್ಟು ಹೊತ್ತಾದರೂ ಏಳದ ನನ್ನನ್ನು ನೋಡಿ, ನಮ್ಮ ಮನೆಯವರು ಮಿತ್ರರಾದ ಅಗಡಿಯವರ ಆಸ್ಪತ್ರೆಗೆ ಸೇರಿಸಿದರು. ಅಲ್ಲಿ ತಕ್ಷಣ ನನಗೆ ಚಿಕಿತ್ಸೆ ದೊರೆಯಿತು. ಕೆಲವು ಘಂಟೆಗಳ ನಂತರ ಜ್ಞಾನ ಬಂದಿತಾದರೂ, ಆಸ್ಪತ್ರೆಯಲ್ಲಿ ಒಂದು ದಿನ ಮೆಡಿಕಲ್ ತೀವ್ರ ನಿಗಾಘಟಕದಲ್ಲಿ ತಂಗಬೇಕಾಯಿತು. ಭಿಕ್ಷಾ ಪೂಜೆಗಾಗಿ ಮನೆಗೆ ಬಂದ ಗುರುಗಳು ನನ್ನನ್ನು ನೋಡಿದೊಡನೆಯೇ ನನ್ನ ಕಷ್ಟದ ಮರ್ಮವನ್ನು ತಿಳಿದವರಾಗಿ, ನಿಮ್ಮ ಅನಾರೋಗ್ಯದ ಹಿಂದೆ ಇರುವ ಕಾರಣವೇ ಬೇರೆ ಎಂದು ಎಲ್ಲಾ ವಿಷಯವನ್ನು ತಾವಾಗಿಯೇ ತಿಳಿದು ಥಟ್ ಎಂದು ಹೇಳಿದರು.

ಇವರ ಈ ವಿಶೇಷ ಶಕ್ತಿಯನ್ನು ಹಾಗೂ ಮಾತುಗಳನ್ನು ಕೇಳಿ ನಿಬ್ಬೆರಗಾಗಿ ನಿಂತೆವು ನಂತರ ಭೂತರಾಜರು ನಿಮ್ಮ ಕೈ ಬಿಡುವುದಿಲ್ಲ ಎಂದು ಹೇಳಿ ಸ್ವಲ್ಪ ಮಂತ್ರಾಕ್ಷತೆಯನ್ನು ಕೈಯಲ್ಲಿ ಹಿಡಿದು, ಕಣ್ಣು ಮುಚ್ಚಿ, ಎರಡು ನಿಮಿಷ ಧ್ಯಾನ ಮಾಡಿ, ನನಗೆ ಅದನ್ನು ನೀಡಿ ಆಶೀರ್ವದಿಸಿದರು. ಬಹಳ ಸುಸ್ತಾಗಿದ್ದ ನಾನು ಅವರು ಆಶೀರ್ವದಿಸಿದೊಡನೆಯೇ ಮತ್ತೆ ಹುರುಪು ತುಂಬಿದವನಾದೆನು.

ದೇವರು ನಂಬಿದವರನ್ನು ಕೈ ಬಿಡುವುದಿಲ್ಲ. ಭಕ್ತರನ್ನು ಪರೀಕ್ಷಿಸಲು ಮತ್ತೆ ಮತ್ತೆ ಕಷ್ಟದ ಕೂಪಕ್ಕೆ ಹಾಕುತ್ತಾನೆ. ಅದರ ನಿವಾರಣೆಗಾಗಿ ನಮ್ಮ ಗುರುಗಳಂತಹ ಮಹಾತ್ಮರನ್ನು ಕಳುಹಿಸಿ ಅವರ ಮಹಿಮೆಯನ್ನು ಪ್ರಕಟ ಪಡಿಸುವಂತೆ ಸಂಘಟಿಸುತ್ತಾನೆ.

**೭. ಇಂತಹದೇ ಪ್ರಸಂಗ ಇನ್ನೊಮ್ಮೆ ಒದಗಿತು.** ೧೯೯೭ರಲ್ಲಿ ನನಗೆ ತೀವ್ರವಾದ ಅನಾರೋಗ್ಯ ರೂಪದಲ್ಲಿ ಬಂದೊದಗಿತು. ಈ ಬಾರಿ ನನ್ನನ್ನು ಕಾಡಿದ್ದು ಜೀವವನ್ನೇ ಕಿತ್ತು ತಿನ್ನುವ 'ಹೆಪಟೈಟಸ್ ಬಿ' ಕಾಯಿಲೆ. ಈ ಕಾಯಿಲೆಗೆ ತುತ್ತಾದವರು ಬದುಕಿ ಉಳಿಯುವುದು ಬಹಳ ವಿರಳ. ನನಗೂ ಕೂಡಾ ಈ ಕಾಯಿಲೆ ಎಂತಹ ವಿಕೋಪಕ್ಕೆ ಹೋಗಿತ್ತೆಂದರೆ ಎಲ್ಲರೂ ನಾನು ಬದುಕಿ ಉಳಿಯುವ ಭರವಸೆಯನ್ನು ಕಳೆದುಕೊಂಡಿದ್ದರು. ಇಂತಹ ಸನ್ನಿವೇಶದಲ್ಲಿ ಪರಮಾತ್ಮನು ನಮ್ಮ ಮನೆಗೆ ಕಷ್ಟ ನಿವಾರಿಸಲು ಶ್ರೀ ವಿಶ್ವೋತ್ತಮತೀರ್ಥರನ್ನು ಕಳುಹಿಸಿದನು.

ನಮ್ಮ ಮನೆಯಲ್ಲಿ ಭೂತರಾಜರ ಪೂಜೆ ಮಾಡಲು ಬಂದ ಗುರುಗಳು ನನ್ನನ್ನು ಬಂದು ನೋಡಿದರು. ಬಹಳ ಪ್ರೀತಿಯಿಂದ ನನ್ನನ್ನು ಕಂಡು ನನ್ನ ಸಲುವಾಗಿ ಎರಡು ನಿಮಿಷ ಧ್ಯಾನ ಮಾಡಿದರು. ನಂತರ 'ನಿಮ್ಮನ್ನು ರಾಜರು ಕೈ ಬಿಡುವುದಿಲ್ಲ. ಈ ಕಂಟಕದಿಂದ ನಿಮ್ಮನ್ನು ಪಾರು ಮಾಡಿಯೇ ತೀರುವರು. ನೀವು ಇನ್ನು ಆಯುರ್ವೇದದ ಮೊರೆಹೋಗಿ, ನಿಮಗೆ ಅದರಿಂದ ಖಂಡಿತ ಗುಣವಾಗುವುದು' ಎಂದು ಹೇಳಿದರು. ಅವರು ಹೇಳಿದಂತೆ ಆಯುರ್ವೇದ ಔಷಧಿಯನ್ನು ಸೇವಿಸಲು ಪ್ರಾರಂಭಮಾಡಿದೆ. ಕ್ರಮೇಣ ನನ್ನ ಹೆಪಟೈಟಸ್ ಮಟ್ಟ ಕಡಿಮೆಯಾಗುತ್ತಾ ಬಂತು. ನಮ್ಮ ಗುರುಗಳ ಅನುಗ್ರಹವು ನನಗೆ ಜೀವದಾನ ಮಾಡಿತು. ಇವರು ನನ್ನನು ಉಳಿಸಬಂದ ದೇವದೂತರೆಂದೆ ಭಾವಿಸಿದ್ದೇನೆ.

**೮. ಶ್ರೀ ಪುರಂದರದಾಸ ಅರಸೀಕೆರೆ,** ಇವರ ೧೯೯೧ನೇ ಅಕ್ಟೋಬರ್‌ನಲ್ಲಿ ಸೋದೆಗೆ ಹೋಗಿದ್ದರು. ವಾಪಸ್ಸು ಬರುವಾಗ ದಾರಿಯಲಿ ತರೀಕೆರೆ ಬೀರೂರು ಮಧ್ಯ ಅವರು ಬರುತ್ತಿದ್ದ ಕಾರು ಅಪಘಾತಕ್ಕೀಡಾಗಿ ದಾಸರ ಕಾಲು ಮುರಿಯಿತು. ಸುಮಾರು ಆರು ತಿಂಗಳುಗಳ ಕಾಲ ಆಸ್ಪತ್ರೆಯ ವಾಸದಿಂದಲೂ ಗುಣಕಾಣದೆ ಕೊನೆಗೆ ಆಪರೇಷನ್ ಮಾಡಬೇಕೆಂದು ವೈದ್ಯರು ತಿಳಿಸಿದರು. ಆಗ ಕಂಗಾಲಾದ ಪುರಂದರದಾಸರು ಮತ್ತೊಮ್ಮೆ ಶ್ರೀ ವಿಶ್ವೋತ್ತಮತೀರ್ಥರಲ್ಲಿ ಹೋಗಿ ಬೇಡಿಕೊಂಡರು. ಆಗ ಪರಮದಯಾಳುಗಳಾದ ಸ್ವಾಮಿಗಳು ಸಮಾಧಾನ ಮಾಡಿ, "ಆಪರೇಷನ್" ಬೇಡ ನಿಮ್ಮನ್ನು ಶ್ರೀ ವಾದಿರಾಜರು ಭೂತರಾಜರು ಗುಣಪಡಿಸುತ್ತಾರೆ. ಈ ಮೃತ್ತಿಕೆಯನ್ನು ಹಚ್ಚಿಕೊಳ್ಳಿ ಎಂಬು ಆಶೀರ್ವಾದ ಮಾಡಿ ಮಂತ್ರಾಕ್ಷತೆ ಕೊಟ್ಟರು. ಏನಾಶ್ಚರ್ಯ! ಆಪರೇಷನ್ ಮಾಡಿದರಷ್ಟೇ ನಡೆಯಲು ಸಾಧ್ಯ ಎಂಬ ಡಾಕ್ಟರರ ನುಡಿಯನ್ನು ಸುಳ್ಳಾಗಿಸಿ ಇಂದಿಗೂ ಕೋಲಿನ ಸಹಾಯವಿಲ್ಲದೆ ದಾಸರ ಓಡಾಡಿಕೊಂಡಿರುವುದು ಪವಾಡವಲ್ಲವೇ ?

**೯. ಪುರಂದರದಾಸರಿಗೆ ಶಸ್ತ್ರಚಿಕಿತ್ಸೆಯಿಲ್ಲದೆ ಅಲ್ಸರ್, ರಕ್ತವಾಂತಿ ಗುಣವಾದ ವಿಷಯ :**

ಮತ್ತೊಮ್ಮೆ ದಾಸರು ಗ್ಯಾಸ್ಟ್ರಿಕ್ ಆಗಿ ರಕ್ತ ವಾಂತಿಯಾಗಿ ಬದುಕುವುದಿಲ್ಲ ಎಂಬ ಸ್ಥಿತಿ ತಲ್ಪಿದ, ಇವರ ವೈದ್ಯಕೀಯ ವರದಿ ಓದಿದ ವೈದ್ಯರು ಎಂಡೋಸ್ಕೋಪಿ ಮಾಡಿ ತತ್‌ಕ್ಷಣದ ಶಸ್ತ್ರಚಿಕಿತ್ಸೆ ಒಂದೇ ಇದಕ್ಕೆ ಪರಿಹಾರ ಎಂದು ಹೇಳಿದರು. ಆಗ ಆಸ್ಪತ್ರೆಯಿಂದ ಬಿಡುಗಡೆ ಮಾಡಿಸಿಕೊಂಡು ಸೋದೆಗೆ ಹೋದ ದಾಸರು ಶ್ರೀವಾದಿರಾಜರಲ್ಲಿ, ಶ್ರೀ ಭೂತರಾಜರಲ್ಲಿ ಪ್ರಾರ್ಥನೆ ಮಾಡಿ ಶ್ರೀ ವಿಶ್ವೋತ್ತಮತೀರ್ಥರ ಪಾದ ಹಿಡಿದುಕೊಂಡು ಬೇಡಿಕೊಳ್ಳಲು ಶ್ರೀಗಳವರು ಆಪರೇಷನ್ ಬೇಡ, ಮೃತ್ತಿಕೆಯನ್ನು ನೀಡಿ ೪೮ ದಿನ ದೇವರ ತೀರ್ಥದಲ್ಲಿ ತೆಗೆದುಕೊಳ್ಳುವಂತೆ ಸೂಚಿಸಿದರು. ೪೮ ದಿನಗಳ ಬಳಿಕ ದೇಹಸ್ಥಿತಿಯಲ್ಲಿ ಸುಧಾರಣೆ ಕಂಡು

ಬಂದು ಎಂಡೋಸ್ಕೋಪಿ ಮಾಡಿಸಿದಾಗ ಆಪರೇಷನ್ ಇಲ್ಲದೆ ನಿಮ್ಮ ಕಾಯಿಲೆ ಹೇಗೆ ಗುಣವಾಯಿತು ಎಂದು ಡಾಕ್ಟರ್ ಆಶ್ಚರ್ಯಪಟ್ಟರು.

೧೦. ನಮ್ಮ ಗುರುಗಳಾದ ಶ್ರೀ ಬಿ.ಪಿ. ನಾಗಭೂಷಣರಾಯರಿಗೆ ಹಲವು ವರ್ಷಗಳ ಹಿಂದೆ "ನೆಪ್ರೋಟಿಕ್ ಸಿಂಡ್ರೋಮ್" ಎನ್ನುವ ಕಾಯಿಲೆ ಬಂದಿತ್ತು. ಈ ಕಾಯಿಲೆಯ ಲಕ್ಷಣ ಮೂತ್ರದಲ್ಲಿ ಪ್ರೋಟಿನ್ ಹೋಗಿ ರಕ್ತದಲ್ಲಿ ನೀರು ಸೇರಿ ಮೈ ಬಾತುಕೊಳ್ಳುವುದು. ಅಲೋಪತಿಕ್ ಚಿಕಿತ್ಸೆ ಮಾಡಿ ಕಾಯಿಲೆ ಗುಣಕಾಣದೆ 'ಡಯಾಲಿಸಿಸ್' ಮಾಡಬೇಕಾದ ಅಂತಿಮ ಹಂತಕ್ಕೆ ಬಂದಿತ್ತು. ಆ ಸಮಯದಲ್ಲಿ ಶ್ರೀಯುತರು ಆಯುರ್ವೇದ ಚಿಕಿತ್ಸೆಗಾಗಿ ಉದ್ಯಾವರದ ಧರ್ಮಸ್ಥಳ ಆಸ್ಪತ್ರೆಗೆ ಹೋಗಿ ದಾಖಲಾಗಬೇಕಾಯಿತು. ಆಗ ಸೋದೆ ಶ್ರೀಗಳವರ ಪರ್ಯಾಯದ ಕಾಲವಾಗಿತ್ತು. ಶ್ರೀಗಳವರ ದರ್ಶನ ಪಡೆಯಲು ಕೃಷ್ಣ ಮಠಕ್ಕೆ ಹೋದಾಗ ಇವರನ್ನು ನೋಡಿದ ಶ್ರೀಗಳವರು 'ಇದು ಔಷಧದಿಂದ ವಾಸಿಯಾಗುವ ಕಾಯಿಲೆಯಲ್ಲ ಯಾವ ಔಷಧವೂ ಪ್ರಯೋಜನಕ್ಕೆ ಬರುವುದಿಲ್ಲ "ಶ್ರೀ ಕೃಷ್ಣನ ಪ್ರಸಾದವೊಂದೇ ಇದಕ್ಕೆ ದಿವ್ಯೌಷಧ" ಎಂದು ಹೇಳಿ ಓರ್ವನನ್ನು ನೇಮಕ ಮಾಡಿ ಪ್ರತಿದಿನ ಉದ್ಯಾವರ ಆಸ್ಪತ್ರೆಗೆ ಆರು ವಾರಗಳ "ಶ್ರೀ ಕೃಷ್ಣ ಪ್ರಸಾದ" (ಶ್ರೀಕೃಷ್ಣನಿಗೆ ಅರ್ಪಿತವಾದ ಭೋಜನ)ವನ್ನು ಕಳುಹಿಸಿಕೊಟ್ಟರು. ಕಾಯಿಲೆ ವಾಸಿಯಾಯಿತು. ಇದನ್ನು ತಿಳಿದ ಅಲೋಪಥಿಕ್ ವೈದ್ಯರು "ಇದೊಂದು ಮಿರಾಕಲ್" ಎಂದು ಬಣ್ಣಿಸಿದರು.

೧೧. ಮಿತಪರಿವಾರದೊಂದಿಗೆ ಶ್ರೀಗಳವರು ವಿಮಾನದಲ್ಲಿ ಗಂಡಕಿಯಾತ್ರೆಗೆ ಹೊರಟ್ಟಿದ್ದರು. ವಿಮಾನದಲ್ಲಿ ಪ್ರಯಾಣಿಸುತ್ತಿದ್ದ ನೇಪಾಳದ ದಂಪತಿಗಳು ಬಹಳ ಖಿನ್ನರಾದದ್ದನ್ನು ಶ್ರೀಗಳವರು ಗಮನಿಸಿದರು. ಪುರುಷನಿಗೆ ಹುಷಾರಿರಲಿಲ್ಲ. ಚಿಕಿತ್ಸೆಗಾಗಿ ದೆಹಲಿಗೆ ಬಂದು ಹೋಗುತ್ತಿದ್ದರು. ಆಗ ಶ್ರೀಗಳವರ ಮಹಿಮೆ ಆ ದಂಪತಿಗಳಿಗೆ ತಿಳಿಸಲಾಯಿತು. ಶ್ರೀಗಳವರು ಅನುಗ್ರಹ ಪೂರ್ವಕ ಶ್ರೀ ರಾಜರ ಮೃತ್ತಿಕೆ ಪ್ರಧಾನ ಮಾಡಿದರು. ಅದನ್ನು ಉಪಯೋಗಿಸುವ ಕ್ರಮ ವಿವರಿಸಿದರು. ನಂತರ ಗಂಡಕಿಗೆ ಪ್ರಯಾಣ ಬೆಳೆಸಿದರು. ವಾಪಸ್ಸು ಬರುವಾಗ ವಿಮಾನ ನಿಲ್ದಾಣದಲ್ಲಿ ಆ ದಂಪತಿಗಳು ಶ್ರೀಗಳವರ ಆಗಮನ ನಿರೀಕ್ಷೆಯಲ್ಲಿದ್ದರು. ಶ್ರೀಗಳವರನ್ನು ನೋಡುತ್ತಲೇ ಸಾಷ್ಟಾಂಗ ಪ್ರಣಾಮ ಸಲ್ಲಿಸಿದ ಆ ದಂಪತಿಗಳು ನಿಮ್ಮ ಅನುಗ್ರಹದಿಂದ ಕಾಯಿಲೆ ನಿಯಂತ್ರಣಕ್ಕೆ ಬಂದಿದೆ. ದಯವಿಟ್ಟು ತಮ್ಮ ಮನೆಗೆ ಬಂದು ಹೋಗಬೇಕಂತ ಒತ್ತಾಯ ಮಾಡಿದರು. ಕಾಲದ ಅಭಾವದಿಂದ ಶ್ರೀಗಳವರು ಅವರ ಬೇಡಿಕೆ ನಿರಾಕರಿಸಿ ಬೆಂಗಳೂರಿಗೆ ಬಂದರು.

೧೨. ಕೆಲವು ವರ್ಷಗಳ ಹಿಂದೆ ಓರ್ವ ಮುತ್ತೈದೆ ಅನಾರೋಗ್ಯದಿಂದ ಪೀಡಿತಳಾಗಿ ೨೧ ದಿನಗಳ ಸೇವೆ ಮಾಡಲೋಸುಗ ಸೋದಾಕ್ಷೇತ್ರಕ್ಕೆ ಬಂದಳು. ಆದರೆ ಒಂದು ಪ್ರದಕ್ಷಿಣೆಯನ್ನೂ ಹಾಕಲಾರದಷ್ಟು ನಿಶ್ಶಕ್ತಳಾದ ಕಾರಣ ದಿಕ್ಕು ತೋಚದೆ ಶ್ರೀ ವಾದಿರಾಜರ ವೃಂದಾವನದ ಎದುರಿಗೆ ಕಣ್ಣೀರು ಹಾಕುತ್ತಾ ಕುಳಿತಳು. ಆಕೆಯ ಸ್ಥಿತಿಯನ್ನರಿಯದ ಮಠದವರೊಬ್ಬರು "ಕೂತು ಅತ್ತರೇನು ಬಂತು? ಎದ್ದು ಪ್ರದಕ್ಷಿಣೆ ಹಾಕಬಾರದಾ" ಎಂದು ಚುಚ್ಚಿ ಮಾತನಾಡಲು ಆಕೆಗೆ ಮತ್ತಷ್ಟು ದುಃಖ ಉಮ್ಮಳಿಸಿ ಕಣ್ಣೀರು ಕೂಡಿಯೇ ಹರಿಯಿತು.

ಇದನ್ನೆಲ್ಲಾ ಗಮನಿಸುತ್ತಾ ಅಲ್ಲಿದ್ದ ಶ್ರೀ ಪ್ರಹ್ಲಾದಾಚಾರ್ಯರು 'ಯಾಕಮ್ಮಾ ದುಃಖ' ಎಂದು ಪ್ರಶ್ನಿಸಲು ಆಕೆಯು ತನ್ನ ಅಸಹಾಯಕತೆ ವಿವರಿಸಿದಳು. ಆಗ ಪ್ರಹ್ಲಾದಾಚಾರ್ಯರು

ರಾಜರ ಪ್ರೇರಣೆಯಿಂದ ಆಕೆಗೆ, ಹೇಗಾದರೂ ಮಾಡಿ ಶ್ರೀ ವಿಶ್ವೋತ್ತಮತೀರ್ಥ ಕರಸ್ಪರ್ಶವಾದ ಮೃತ್ತಿಕೆಯನ್ನು ಸಂಪಾದಿಸಿಕೊಂಡು ತರುವಂತೆ ಸೂಚಿಸಿದರು. ಅದನ್ನು ಪಡೆಯುವ ರೀತಿ ತಿಳಿಸಿದರು ಮಾರನೆ ದಿನ ಬೆಳಿಗ್ಗೆ ಶ್ರೀಗಳವರು ಧವಳಗಂಗೆಯಲ್ಲಿ ಮೃತ್ತಿಕಾ ಸ್ನಾನ ಮಾಡುತ್ತಿರುವಾಗ ಉಳಿದ ಮೃತ್ತಿಕೆಯನ್ನು ಮೆಟ್ಟಲುಗಳ ಮೇಲೆ ಹಾಕುವುದನ್ನು ಕಾಯುತ್ತಾ ಕುಳಿತು ಅದನ್ನು ಸಂಗ್ರಹಿಸಿ ತಂದು ಪ್ರಹ್ಲಾದಾಚಾರ್ಯರಿಗೆ ಮುಂದೇನು ಎಂದು ಕೇಳಿದಳು. ಆಗ ಆಚಾರ್ಯರು "ಗುರುಗಳ ಪಾದಸ್ಮರಣೆ ಮಾಡುತ್ತಾ ಸೇವಿಸು" ಎನ್ನಲು ಆಕೆ ಹಾಗೆ ಮಾಡಿದಳು.

ಅಂದು ರಾತ್ರಿಯೇ ಸ್ವಪ್ನದಲ್ಲಿ ಶ್ರೀಗಳವರನ್ನು ಕಂಡಳು "ಏನೂ ಹೆದರಬೇಡಮ್ಮಾ, ನಾಳೆಯಿಂದ ಸುಧಾರಿಸುತ್ತೀ ಇನ್ನು ಒಂದು ವರ್ಷದಲ್ಲಿ ಬಹಳ ಚೆನ್ನಾಗಿ ಆಗುತ್ತೀಯ, ದೇವರು ಅನುಗ್ರಹಿಸುತ್ತಾನೆ ಸಂಶಯ ಬೇಡ" ಎಂದು ಅಭಯ ನೀಡಿ ಅದೃಶ್ಯರಾದರು. ಎಚ್ಚರವಾದಾಗ ಅವಳಿಗಾದ ಆನಂದಕ್ಕೆ ಪಾರವೇ ಇರಲಿಲ್ಲ. ದಿನದಿಂದ ದಿನಕ್ಕೆ ಅವಳ ಆರೋಗ್ಯ ಸುಧಾರಿಸುತ್ತಾ ಬಂತು ದಿನದಿಂದ ದಿನಕ್ಕೆ ಪ್ರದಕ್ಷಿಣೆ ನಮಸ್ಕಾರ ಜಾಸ್ತಿ ಮಾಡುತ್ತಾ ೨೧ ದಿನಗಳ ಸೇವೆ ಸುಖವಾಗಿ ಮಾಡಿ ಮುಗಿಸಿದಳು. ನಂತರ ಶ್ರೀಗಳವರ ಸನ್ನಿಧಾನದಲ್ಲಿ, "ತಮ್ಮ ಕರ ಸ್ಪರ್ಶ ಮೃತ್ತಿಕಾ ನನ್ನ ಪಾಲಿಗೆ ಸಂಜೀವಿನಿಯಾಯಿತು" ಎಂದು ಭಕ್ತಿ ಪೂರ್ವಕ ಕೃತಜ್ಞತೆ ಸಲ್ಲಿಸಲು "ಶ್ರೀ ಗುರುರಾಜರ ಹಾಗೂ ಭೂತರಾಜರ ಅನುಗ್ರಹದ ಫಲ ನಮ್ಮದೇನೂ ಇಲ್ಲ. ಅವರು ಸೇವೆ ಮಾಡಿದ ಭಕ್ತರನ್ನು ಸದಾ ಕಾಪಾಡುತ್ತಾರೆ" ಎಂದು ನುಡಿದರು.

೧೩. ಬಾಗಿಲುಕೋಟೆಯಲ್ಲಿ ವಾಸವಾಗಿದ್ದ ಮಾರ್ಕೋಡು ಲಕ್ಷ್ಮೀನಾರಾಯಣರಾಯರು ದೈವಭಕ್ತರು. ಅವರು ಪೇಜಾವರ ಶ್ರೀಗಳವರಿಗೂ ಹಾಗೂ ಸೋದೆ ಮಠದ ಶ್ರೀಗಳವರಿಗೂ ಬಹಳ ಬೇಕಾದವರು ಅವರು ಉಭಯ ಶ್ರೀಗಳ ಹಲವಾರು ಯೋಜನೆಗೆ ವಿಶೇಷ ಆರ್ಥಿಕ ಸಹಾಯ ನೀಡಿದವರು. ಅವರು ಅನ್ನನಾಳದ ಕ್ಯಾನ್ಸರ್‌ನಿಂದ ಬಳಲುತ್ತಿದ್ದಾಗ ಶ್ರೀಗಳವರು ಅವರಿಗೆ ಮಂತ್ರಾಕ್ಷತೆ ನೀಡಿ ಬೇಗ ಗುಣಮುಖರಾಗುವಂತೆ ಹರಸಿದರು. ಅವರು ಮುಂದೆ ಇಪ್ಪತ್ತೆರಡುವರ್ಷ ಬದುಕ್ಕಿದ್ದರು.

೧೪. ಒಮ್ಮೆ ಬೆಂಗಳೂರಿನ ಕುಮಾರ ಸ್ವಾಮಿ ಲೇಔಟ್‌ನಲ್ಲಿ ಭಕ್ತರೊಬ್ಬರ ಮನೆಯಲ್ಲಿ ಶ್ರೀಗಳವರಿಗೆ ಪಾದ ಪೂಜೆ ಕಾರ್ಯಕ್ರಮವಿತ್ತು ಪಾದಪೂಜೆ ಮುಗಿದು ಹೊರಡುವಷ್ಟರಲ್ಲಿಯೇ ಪುಟ್ಟಮಗುವನ್ನು ಎತ್ತಿಕೊಂಡು ಮಾತೆಯೊಬ್ಬಳು ಓಡೋಡಿ ಬಂದು ತನ್ನ ಮಗುವಿಗೆ ನಡೆಯಲು ಆಗದಿರುವ ಕಾಯಿಲೆಯ ತೊಂದರೆಯನ್ನು ತಿಳಿಸಿ ಕಣ್ಣೀರಿಟ್ಟಳು. ಆಗ ಶ್ರೀಗಳು ಆ ಮಹಿಳೆಗೆ ಸಾಂತ್ವನ ಹೇಳಿ, ಧನ್ವಂತರಿ ಮಂತ್ರ ಜಪಿಸಿ ಮಂತ್ರಾಕ್ಷತೆ ನೀಡಿ ಅನುಗ್ರಹಿಸಿದರು. ಕಾಲಾಂತರದಲ್ಲಿ ಕಾಯಿಲೆ ಗುಣಮುಖವಾಗಿ ಮಗು ಎಲ್ಲಾ ಮಕ್ಕಳಂತೆ ನಡೆದಾಡುವ ವಿಷಯ ತಿಳಿಯಿತು. ಶ್ರೀಗಳವರು ಈ ವಿಷಯ ತಿಳಿದು ಸಂತಸಪಟ್ಟರು. ಇದೆಲ್ಲಾ ಶ್ರೀ ವಾದಿರಾಜ, ಭೂತರಾಜರ ಅನುಗ್ರಹವೆಂದು ತಿಳಿಸಿದರು.

**ಭೂತೇಷು ದಯಾ**

೧೫. ಕಾರ್ಯಕ್ರಮ ಒಂದರಲ್ಲಿ ಭಾಗವಹಿಸಲು ಒಮ್ಮೆ ಶ್ರೀ ವಿಶ್ವೋತ್ತಮ ತೀರ್ಥರು ಕೋಟೇಶ್ವರಕ್ಕೆ ಆಗಮಿಸಿದರು. ಆಗ ಅವರು ಕಾರಿನಿಂದ ಇಳಿಯುತ್ತಲೇ ಅತಿ ಹತ್ತಿರದಲ್ಲಿ

ಮೈತುಂಬಾ ಹುಣ್ಣಾದ, ಉದುರಿದ ಕೂದಲುಗಳುಳ್ಳ, ಎದ್ದು ನಿಲ್ಲಲು ಆಗದ ಸ್ಥಿತಿಯಲ್ಲಿ ನರಳುತ್ತಾ ಬಿದ್ದುಕೊಂಡಿದ್ದ ದೈನ್ಯಾವಸ್ಥೆಯಲ್ಲಿದ್ದ ರೋಗಿಷ್ಟ ನಾಯಿಯೊಂದನ್ನು ನೋಡಿದರು. ಆಗ ಅವರಿಗೆ ಆ ನಾಯಿಯ ಮೇಲೆ ಕನಿಕರ ಮೂಡಿತು. ಆಗ ಅವರು ರಾಜರ ಮೃತ್ತಿಕೆಯನ್ನು ಕೈಯಲ್ಲಿ ಹಿಡಿದು, ಮಂತ್ರಪೂರಿತ ನೀರಿನಿಂದ ಆ ನಾಯಿ ಮೇಲೆ ಸಿಂಪಡಿಸಿದರು. ಹತ್ತಿರದಲ್ಲಿ ನಡೆಯುತ್ತಿದ್ದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಹೋದರು. ಆವಾಗಲೂ ಅವರಿಗೆ ದೀನಾವಸ್ಥೆಯಲ್ಲಿದ್ದ ಆ ನಾಯಿಯ ರೂಪವೇ ಕಾಣಿಸುತ್ತಿತ್ತು. ಒಂದೆರಡು ಘಂಟೆಯ ಕಾರ್ಯಕ್ರಮ ಮುಗಿದ ನಂತರ ಕಾರ ಹತ್ತಿರ ಬಂದಾಗ ನಾಯಿಯ ನೆನಪಾಯಿತು. ಸುತ್ತಲೂ ದೃಷ್ಟಿ ಹರಿಸಿದರು. ಆಗ ಅವರು ಆಶ್ಚರ್ಯಕರ ದೃಶ್ಯ ನೋಡಿದರು. ಸಂಪೂರ್ಣ ಗುಣಹೊಂದಿದ ಲವಲವಿಕೆಯಿಂದ ಕೂಡಿದ ಆ ನಾಯಿ ಬಾಲ ಆಡಿಸುತ್ತಾ ಶ್ರೀಗಳವರ ಹತ್ತಿರ ಬಂದು ತನ್ನ ಕೃತಜ್ಞತೆ ಪ್ರದರ್ಶಿಸಿತು. ಅದನ್ನು ನೋಡಿದ ಶ್ರೀಗಳು ಸಂತೃಪ್ತ ಮನಸ್ಸಿನಿಂದ ಅಲ್ಲಿಂದ ಹೊರಟರು.

೧೬. ಒಮ್ಮೆ ಬೆಸ್ತರು ಬಂದು ನಮಗೆ ಈ ಸಲ ವ್ಯಾಪಾರದಲ್ಲಿ ಕಷ್ಟನಷ್ಟಗಳಾಗಿವೆ. ನಮ್ಮ ವ್ಯಾಪಾರ ಚೆನ್ನಾಗಿ ನಡೆಯುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡರು. ಶ್ರೀಗಳವರು ಮನಸ್ಸಿನಲ್ಲಿ ಯೋಚಿಸಿದರು. 'ಇವರಿಗೆ ಒಳ್ಳೆಯದಾಗಲಿ ಎಂತ ಮಂತ್ರಾಕ್ಷತೆ ಕೊಟ್ಟರೆ ಮತ್ಸ್ಯಗಳನ್ನು ಕೊಂದ ಪಾಪ; ಕೊಡದೆ ಇದ್ದರೆ ಕಷ್ಟದಲ್ಲಿ ಇರಬೇಕಾಗುತ್ತದೆ. ಹಾಗಾಗಿ ಇವರ ಕೈಯಿಂದ ಯಾವ ಮೀನುಗಳಿಗೆ ಸಾವು ಇದೆಯೋ ಅವುಗಳು ಮಾತ್ರ ಇವರಿಗೆ ಸಿಗಲಿ. ಹೀಗೆ ಹೇಳಿ ಅವರು ಮಂತ್ರಾಕ್ಷತೆಯನ್ನು ನೀಡಿದರು. ಮೂರು ನಾಲ್ಕು ದಿನಗಳ ಬಳಿಕ ಒಬ್ಬರು ಬಂದು ಶ್ರೀಗಳವರಲ್ಲಿ 'ಸ್ವಾಮೀ ತಾವು ಕೊಟ್ಟ ಮಂತ್ರಾಕ್ಷತೆಯಿಂದ ತುಂಬಾ ಮೀನು ಕಾಣಿಸಿತು. ತುಂಬಾ ಬಂದ ಹಾಗಾಯಿತು. ಮೇಲೆ ಬಂದಾಗ ಸ್ವಲ್ಪವೇ ಇತ್ತು' ಎಂದು ಹೇಳಿದರು. ಹೇಗಿದೆ ನೋಡಿ ಅನುಸಂಧಾನದ ಫಲ.

೧೭. ಕೋಟೇಶ್ವರ ಪೇಟೆಯ ಪಕ್ಕದಲ್ಲಿರುವ ಹೊದ್ರಾಳಿ ಗ್ರಾಮದಲ್ಲಿ. ನಾಗೇಂದ್ರಭಟ್ಟರ ಮನೆಗೆ ಕೆಲವು ವರ್ಷಗಳ ಹಿಂದೆ ಶ್ರೀವಿಶ್ವೋತ್ತಮ ತೀರ್ಥ ಗುರುಗಳು ಆಗಮಿಸಿದ್ದರು. ಆಗ ಸಹಜವಾಗಿ ಮನೆಯಲ್ಲಿದ್ದ ಹಸುವೊಂದರ ಮೇಲೆ ಅವರ ದೃಷ್ಟಿ ಬಿತ್ತು. ಆಗ ಅವರು ನಾಗೇಂದ್ರಭಟ್ಟರನ್ನು ಕುರಿತು "ಈ ಹಸು ಕರು ಹಾಕಿ ಬಹಳ ವರ್ಷಗಳ ಆಗಿದೆಯಾ?" ಎಂದು ಪ್ರಶ್ನಿಸಿದರು. ಅವರು ಹೇಳಿದ್ದು ಸತ್ಯವಾಗಿತ್ತು. ಅದು ಹತ್ತು ವರ್ಷಗಳಿಂದ ಗರ್ಭಧರಿಸಿರಲಿಲ್ಲ. ಅದು ಅವರಿಗೆ ಹೇಗೆ ಗೊತ್ತಾಯಿತೋ ? ದೇವರೇ ಬಲ್ಲ. ಆಗ ಭಟ್ಟರು ಹೌದೆಂದು ಉತ್ತರಿಸಿದರು. ಆಗ ಶ್ರೀ ವಿಶ್ವೋತ್ತಮರು ಎರಡು ಬಾಳೆಹಣ್ಣುಗಳನ್ನು ತರಿಸಿ ತಾವೇ ಸ್ವತಃ ತಮ್ಮ ಕೈಯಿಂದ ಆ ಹಸುವಿಗೆ ತಿನಿಸಿದರು. ಹಾಗೂ "ಸದ್ಯದಲ್ಲೇ ಹಸುಗರ್ಭಧರಿಸುತ್ತದೆ" ಎಂದು ನುಡಿದರು. ಅವರ ಮಾತು ಸತ್ಯವಾಗಿ ಪರಿಣಮಿಸಿತು. ಕೆಲವೇ ಸಮಯದಲ್ಲಿ ಆ ಹಸು ಗರ್ಭಧರಿಸಿ ಕರು ಹಾಕಿತು. ಅನಂತರ ಕಾಲಾಂತರದಲ್ಲಿ ಪುನಃ ಎರಡು ಕರು ಹಾಕಿತು. ಇದೊಂದು ಆಶ್ಚರ್ಯಕರ ಘಟನೆಯಲ್ಲವೇ ! ಇದು ಶ್ರೀ ವಿಶ್ವೋತ್ತಮತೀರ್ಥರು ತ್ರಿಕಾಲ ಜ್ಞಾನಿಗಳಾಗಿದ್ದರು ಎಂಬುದನ್ನು ಸೂಚಿಸುತ್ತದೆ.

೧೮. ಶ್ರೀ ಶ್ರೀ ವಿಶ್ವೋತ್ತಮತೀರ್ಥರು ತಮ್ಮ ಮೊದಲನೆ ಪರ್ಯಾಯ ಸಂಪೂರ್ಣ ಗೊಳಿಸಿದ ನಂತರ, ಸೋದೆಗೆ ತಪ್ತಮುದ್ರಾಧಾರಣ ಮಾಡಲು ಬಂದರು. ಮುದ್ರಾಧಾರಣೆಗಾಗಿ

ಆಗಮಿಸಿದ ಹದಿನೈದು ಜನ ಭಕ್ತರಿಗೆ ಮರುದಿನ ದ್ವಾದಶಿಯಂದು ಪಾರಣೆ ವ್ಯವಸ್ಥೆ ಮಾಡುವಂತೆ ಹೇಳಲು ಆಗ ಶ್ಯಾನುಭೋಗರಿಂದ ಹಣಕಾಸಿನ ತೊಂದರೆ ತಿಳಿದು ಬಂತು. ಆಗ ವಿಶ್ವೋತ್ತಮತೀರ್ಥರು ತಮ್ಮ ಗುರುಗಳು ಪ್ರೀತಿಯಿಂದ ತಮಗೆ ಹಾಕಿದ ಚಿನ್ನದ ತುಳಸೀ ಮಣಿಸರವನ್ನು ಗೋವಿಂದಣ್ಣನವರಿಗೆ ಕೊಟ್ಟು ಇದನ್ನು ಅಂಗಡಿಯವನಿಗೆ ಕೊಟ್ಟು, ದಿನಸಿ ಪದಾರ್ಥಗಳನ್ನು ತೆಗೆದುಕೊಂಡು ಬನ್ನಿ ಎಂದು ಹೇಳಿದರು. ಅಂದಿನ ಕಾಲದಲ್ಲಿ ಸೋದೆಗೆ ಬಸ್ ಸೌಕರ್ಯವಿಲ್ಲದ ಕಾರಣ ಗೋವಿಂದಣ್ಣನವರು ಹುಲಿಕಲ್‌ಗೆ ನಡೆದುಕೊಂಡು ಹೋಗಿ, ಅಲ್ಲಿಂದ ಬಸ್‌ನಲ್ಲಿ ಶಿರಸಿಗೆ ಹೋದರು. ಪರಿಚಯಸ್ಥ ಅಂಗಡಿ ಮಾಲೀಕರಿಗೆ ಶ್ರೀಗಳು ನೀಡಿದ ಚಿನ್ನದ ತುಳಸೀ ಮಣಿಸರವನ್ನು ಕೊಡಲು ಆತನು ಅದನ್ನು ಕಣ್ಣಿಗೆ ಒತ್ತಿಕೊಂಡು ಮೇಜಿನ ಮೇಲೆ ಇಟ್ಟನು. ಸ್ವಲ್ಪ ಹೊತ್ತಾದರೂ ಅಂಗಡಿಯನು ಸುಮ್ಮನೆ ಇದ್ದನು. ಆಗ ಗೋವಿಂದಣ್ಣ ಸರ ಇಟ್ಟುಕೊಂಡು ಬೇಗನೆ ದಿನಸಿ ಪದಾರ್ಥ ಕೊಡುವಂತೆ ಒತ್ತಾಯಿಸಲು, ಆಗ ಅಂಗಡಿಯವನು "ಸ್ವಾಮಿ ನೀವು ಬರುವ ಸ್ವಲ್ಪ ಮೊದಲು ಒಬ್ಬರು ಬಂದು ಹಣ ನೀಡಿ ಶ್ರೀಮಠಕ್ಕೆ ದಿನಸಿ ಕಳುಹಿಸಲು ಹೇಳಿ ಹೋಗಿದ್ದಾರೆ. ಅದರಂತೆ ದಿನಸಿಯನ್ನೂ ಸಹ ಗಾಡಿಗೆ ತುಂಬಿಸುತ್ತಿದ್ದಾರೆ. ನೀವು ಆ ಎತ್ತಿನ ಗಾಡಿಯಲ್ಲಿಯೇ ಹೋಗಿ" ಎಂದು ಹೇಳಿ ತುಳಸೀ ಮಣಿಸರವನ್ನು ಮರಳಿಕೊಡುತ್ತಾನೆ.

ನಂತರ ಗೋವಿಂದಣ್ಣ ಸೋದೆಗೆ ಬಂದು ನಡೆದ ವಿಷಯ ತಿಳಿಸಿ ತುಳಸಿಮಣಿಸರವನ್ನು ವಾಪಸ್ಸು ಕೊಡುತ್ತಾರೆ. ಅಂದಿನಿಂದ ಸ್ವಾಮಿಗಳು ಆ ಸರವನ್ನು ತಾವು ಧರಿಸದೆ ಅದನ್ನು ಪೂಜಿಸುತ್ತಿದ್ದರು.

**ಶ್ರೀಗಳವರ ವಿಶೇಷ ಜ್ಞಾನ ದೃಷ್ಟಿ**

೧೯. ಮೂಡಹಂಗ್ಲೂರು ವಿಶ್ವನಾಥರಾಯರ ಸೋದರಮಾವ. ಮನೆ ಬಿಟ್ಟು ದೇಶಾಂತರ ಹೋಗಿ ೧೨ ವರ್ಷಕ್ಕೂ ಹೆಚ್ಚು ಕಾಲವಾಗಿತ್ತು. ೧೨ ವರ್ಷಕಾಲ ಒಬ್ಬ ವ್ಯಕ್ತಿಯ ಅಸ್ತಿತ್ವ ತಿಳಿಯದಿದ್ದಲ್ಲಿ ಉತ್ತರಕ್ರಿಯೆ ಮಾಡುವ ಪದ್ಧತಿಯಿದೆ. ಒಮ್ಮೆ ಸ್ವಾಮಿಗಳವರಲ್ಲಿ ಅರಿಕೆ ಮಾಡಿಕೊಂಡರು. "ಸ್ವಾಮೀ, ನಮ್ಮ ಮಾವ ಮನೆಬಿಟ್ಟು ಹೋಗಿ ೧೨ ವರ್ಷವಾಗಿದೆ. ಅವರ ಸುಳಿವೇ ಇಲ್ಲ. ಈಗ ಅವರ ಉತ್ತರಕ್ರಿಯೆ ಮಾಡಬೇಕು ಏನು ಮಾಡುವುದು?" ಅದಕ್ಕೆ ಸ್ವಾಮಿಗಳು ನಗುತ್ತಾ 'ನೀವು ಅವರನ್ನು ತ್ರಿವಿಕ್ರಮ ರಥೋತ್ಸವಕ್ಕೆ ಕರೆದುಕೊಂಡು ಬನ್ನಿ' ಎಂದರು. ಆದರೆ ಪತ್ತೆಯೇ ಇಲ್ಲದ ವ್ಯಕ್ತಿಯನ್ನು ಎಲ್ಲಿಂದ ತರುವುದು ? ಎನ್ನುವುದು ಇವರಿಗೆ ಚಿಂತೆಯಾಯಿತು. ಇದಾದ ಸ್ವಲ್ಪ ಸಮಯದ ನಂತರ ಇವರ ಮಾವನವರು ತಾವಾಗಿಯೇ ಮನೆಗೆ ಬಂದರು. 'ತಂದೆ ತಾಯಿಸತ್ತಾಗ ಬರದಿದ್ದವ ಈಗ ಹೇಗೆ ಬಂದ?' ಎಂದು ಮನೆಯವರು ಕೇಳಿದಾಗ ಅವರು 'ದಿನ ನಿತ್ಯ ನನ್ನ ಸ್ವಪ್ನದಲ್ಲಿ ಯಾರೋ ಬಂದು ಮನೆಗೆ ಹೋಗು ಎಂತ ಹೇಳುತ್ತಿದ್ದರು. ಹಾಗಾಗಿ ನಾನು ಬಂದೆ' ಎಂದರು. ಆಗ ಎಲ್ಲರಿಗೂ ಅರ್ಥವಾಯಿತು. 'ಇದು ಶ್ರೀಗಳವರ ಕರುಣೆ' ಎಂದು ಮುಂದೆ ರಥೋತ್ಸವಕ್ಕೆ ಎಲ್ಲರೂ ಹೋಗಿ ಶ್ರೀಗಳವರ ದರ್ಶನ ಮಾಡಿ ಬಂದರು.

೨೦. ಮೇಲಿನ ಪವಾಡದಲ್ಲಿ ಉಲ್ಲೇಖಿತರಾದ ಶ್ರೀ ವಿಶ್ವನಾಥರಾಯರು ಬೆಂಗಳೂರಿನಲ್ಲಿ ಸ್ವಂತವಾಸಕ್ಕೆ ಮನೆ ಖರೀದಿಸಬೇಕೆಂದು ಪ್ರಯತ್ನಿಸುತ್ತಿದ್ದರು. ಒಮ್ಮೆ ಶ್ರೀಗಳವರ ಭೇಟಿಯಾದಾಗ ಅವರಲ್ಲಿ ಈ ಮನೆ ಖರೀದಿಯ ವಿಷಯ ತಿಳಿಸಿದರು. ಆಗ ಶ್ರೀಗಳವರು ಮೊದಲು ನಿಮ್ಮ

ಊರಿನ ಗೋಪಾಲಕೃಷ್ಣನಿಗೆ ಮನೆ ಮಾಡಿ ಆಮೇಲೆ ನಿಮಗೆ ಮನೆ"! ಎಂದರು. ಮೂಡಹಂಗ್ಲೂರಿನಲ್ಲಿದ್ದ ಗೋಪಾಲಕೃಷ್ಣನ ದೇವಸ್ಥಾನವನ್ನು ಶ್ರೀಗಳವರು ಈ ಹಿಂದೆ ಸಂದರ್ಶಿಸಿರಲಿಲ್ಲ. ಅದು ಶಿಥಿಲಗೊಂಡಿತ್ತು. ಅದು ಶ್ರೀಗಳವರಿಗೆ ಹೇಗೆ ತಿಳಿಯಿತು ಎಂಬುದು ಇಂದಿಗೂ ಯಕ್ಷ ಪ್ರಶ್ನೆ! ತಕ್ಷಣ ಸಹೋದರರೆಲ್ಲಾ ಒಟ್ಟಾಗಿ ಆ ದೇವಸ್ಥಾನವನ್ನು ಜೀರ್ಣೋದ್ಧಾರಗೊಳಿಸಿದರು. ಅಲ್ಪಕಾಲದಲ್ಲೇ ಶ್ರೀ ವಿಶ್ವನಾಥರಾಯರಿಗೆ ಬೆಂಗಳೂರಿನ ಸುಂದರ ಪರಿಸರದಲ್ಲಿ ಮನೆ ಖರೀದಿಸಿದರು. ಮಾರಾಟ ಮಾಡಿದ ವ್ಯಕ್ತಿ ಮೊದಲು ಹೇಳಿದ್ದ ದರಕ್ಕಿಂತ ಸುಮಾರು ಎರಡು ಲಕ್ಷ ರೂಪಾಯಿಗಳಷ್ಟು ಕಡಿಮೆ ದರಕ್ಕೆ ಮಾರಿದರು. ಆ ವ್ಯಕ್ತಿ ಇವರು ಭೇಟಿಯಾದಾಗಲೆಲ್ಲ ನಾನು ನಿಮಗೆ ಹೇಗೆ ಕಡಿಮೆ ಬೆಲೆಗೆ ಕೊಟ್ಟೆ ? ನನಗೆ ಇಂದಿಗೂ ಅರ್ಥವಾಗುತ್ತಿಲ್ಲ ಎನ್ನುತ್ತಿದ್ದನಂತೆ. ಈ ಘಟನೆ ಶ್ರೀಗಳವರ ಅನುಗ್ರಹಕ್ಕೆ ಒಂದು ನಿದರ್ಶನ.

೨೧. ಕೋಟೇಶ್ವರ ಮಾಗಣೆಯ ಭಕ್ತರು ಬೆಂಗಳೂರಿನಲ್ಲಿ ಬಹು ಸಂಖ್ಯೆಯಲ್ಲಿ ವಾಸ ಮಾಡುತ್ತಿದ್ದರಿಂದ ಗುರುಗಳನ್ನು ಬೆಂಗಳೂರಿಗೆ ಕರೆಯಿಸಬೇಕೆಂಬ ಆಸೆ ಶ್ರೀ ಎಚ್. ಸುಬ್ರಾಯರ ಮನಸ್ಸಿಗೆ ಬಂದಿತು. ಸಂಕೋಚ ಸ್ವಭಾವದ ಶ್ರೀಗಳವರು ಬರಲು ಒಪ್ಪುವುದು ಕಷ್ಟ ಎಂದು ಗೊತ್ತಿದ್ದುದರಿಂದ "ಬೆಳ್ಳಿಯ ಶ್ರೀವಾದಿರಾಜರ ಫೋಟೋ ತಯಾರಿಸಿ. ಅದನ್ನು ಶ್ರೀಗಳವರಿಗೆ ಸಮರ್ಪಿಸುವ ಕಾರ್ಯಕ್ರಮ ಮಾಡೋಣ. ಆ ಕಾರ್ಯಕ್ರಮಕ್ಕೆ ಆಹ್ವಾನಿಸಿದರೆ ಖಂಡಿತಾ ಬರುವರು ಎಂದು ತೀರ್ಮಾನಿಸಿ ಬೆಳ್ಳಿ ಫೋಟೋ ತಯಾರಿಸಿ ಶ್ರೀಗಳನ್ನು ಬೆಂಗಳೂರಿಗೆ ಬರುವಂತೆ ಆಹ್ವಾನಿಸಿದರು. ಕಾರಣಾಂತರದಿಂದ ಶ್ರೀಗಳವರು ಬೆಂಗಳೂರಿಗೆ ಬರುವುದು ಸ್ವಲ್ಪ ವಿಳಂಬವಾಯಿತು. ನಂತರ ಭೇಟಿಯಾದ ಕೂಡಲೆ ತಾವು ತಯಾರಿಸುತ್ತಿರುವ ಫೋಟೋದಲ್ಲಿ ತಪ್ಪುಗಳು ಆಗಿವೆ. ಶ್ರೀ ಸೋದಾಮಠದ ಸಂಪ್ರದಾಯದಂತೆ ಎದೆಯ ಎಡಭಾಗ, ಬಲಭಾಗದಲ್ಲಿ ಆಧೋಮುಖವಾಗಿ ನಾಮಗಳಿರಬೇಕು. ಕೂಡಲೇ ಬೆಂಗಳೂರಿಗೆ ಹೋಗಿ ಸರಿಪಡಿಸಿ ತಿಳಿಸಿರಿ ಎಂದು ಫೋಟೋ ನೋಡದೆ ಆದೇಶವನ್ನಿತ್ತರು.

ಬೆಂಗಳೂರಿಗೆ ಹೋಗಿ ಫೋಟೋವನ್ನು ನೋಡಲು ಅದರಲ್ಲಿ ಗುರುಗಳು ಹೇಳಿದ ದೋಷಗಳಿದ್ದವು. ಪುನಃ ಆ ದೋಷವನ್ನು ಸರಿಪಡಿಸಿ, ಶ್ರೀಗಳವರನ್ನು ಆಹ್ವಾನಿಸಿ ಭಿಕ್ಷೆ ಪೂಜೆ ನೆರವೇರಿಸಿ, ಶ್ರೀಗಳವರಿಗೆ ಫೋಟೋವನ್ನು ಅರ್ಪಿಸಿದರು.

ಶ್ರೀಗಳವರು ಬೆಳ್ಳಿಯ ಫೋಟೋ ನೋಡದೇ ತಮ್ಮ ದಿವ್ಯದೃಷ್ಟಿಯಿಂದ ಅದರಲ್ಲಿರುವ ದೋಷಗಳನ್ನು ತಿಳಿಸಿದ್ದು ಪರಮಾಶ್ಚರ್ಯವಲ್ಲವೇ ?

೨೨. ಇನ್ನೊಮ್ಮೆ ಹೀಗೇ ರಾತ್ರಿ ಪ್ರಯಾಣ ಮಾಡುವಾಗ ಹಾವೇರಿಯನ್ನು ದಾಟಿ, ಶಿರಸಿ ರಸ್ತೆಯಲ್ಲಿ ಸ್ವಲ್ಪ ದೂರ ಹೋಗಿರುವಾಗ ಒಂದು ದರೋಡೆಕೋರರ ಗುಂಪು ಅಡ್ಡಹಾಕಿತು. ಅದರಲ್ಲಿ ಕೆಲವರು ಬಂದು ವ್ಯಾನಿನ ಹಿಂದಿನ ಬಾಗಿಲನ್ನು ತೆರೆಯುವಂತೆ ಹೇಳಿದರು. ಬಾಗಿಲನ್ನು ತೆರೆದರು. ಆ ದಿನ ಪೂಜೆಗಾಗಿ ಯಾರೋ ಎಳನೀರಿನ ಎರಡು ಗೊನೆಗಳನ್ನು ಕೊಟ್ಟಿದ್ದರು. ಆ ಎಳನೀರಿನ ಗೊನೆಗಳನ್ನು ನೋಡಿದ ಕಳ್ಳರಿಗೆ ವ್ಯಾನಿನ ತುಂಬಾ ಎಳನೀರಿನ ಗೊನೆಗಳೇ ಕಾಣಿಸಿವೆ. ಅವರು 'ಏತಕ್ಕೆ ಇಷ್ಟೊಂದು ಎಳನೀರು ?' ಎಂದು ಕೇಳಿದಾಗ ಮಠದವರು 'ಅದು ಶ್ರೀ ಸೋದೆ ಭೂತರಾಜರಿಗೆ' ಎಂದರಂತೆ. ಅದನ್ನು ಕೇಳಿದ ಅವರು 'ಶ್ರೀ ಭೂತರಾಜರಿಗಾ......' ಎಂದು ಹೇಳಿ ನೀವು ಹೋಗಿ ಎಂದು ದಾರಿ ಮಾಡಿಕೊಟ್ಟರಂತೆ.

೨೩. ಹಿಂದೊಮ್ಮೆ ಶ್ರೀಗಳವರು ಚಿಪ್ಪಗಿರಿಯ ವಿಜಯದಾಸರ ಕಟ್ಟೆಗೆ ಹೋಗಿದ್ದಾಗ ನಡೆದ ಘಟನೆ. ಚಿಪ್ಪಗಿರಿ ತಲುಪುವಾಗ ಕತ್ತಲೆಯಾಗಿತ್ತಂತೆ. ಬೆಳಿಗ್ಗೆ ದೇವರ ಅಭಿಷೇಕಕ್ಕೆ ಹಾಲು ಬೇಕಾಗಿತ್ತು. ಹತ್ತಿರದಲ್ಲಿ ಅಷ್ಟು ಹೊತ್ತಿಗೆ ಎಲ್ಲಿಯೂ ಸಿಗಲಿಲ್ಲ. ೧೦ ಕಿ.ಮೀ. ದೂರದಲ್ಲಿರುವ ಗುಂತಕಲ್‌ಗೆ ಹೋಗಿ ತರಬೇಕು. ಶ್ರೀಗಳವರು ಮಠದ ಹುಡುಗನಿಗೆ ಹೆದ್ದಾರಿಗೆ (ಮುಖ್ಯರಸ್ತೆ) ಹೋಗಿ ಯಾವುದಾದರೂ ಬಸ್‌ನಲ್ಲಿ ಗುಂತಕಲ್‌ಗೆ ಹೋಗಿ ಹಾಲು ತರುವಂತೆ ಹೇಳಿದರು.

ಆಗ ಅವನು ರಸ್ತೆ ಬದಿಯಲ್ಲಿ ನಿಂತಿರುವಾಗ ಒಂದು ಬಸ್ ಬಂದಿತು. ಇಡೀ ಬಸ್‌ನಲ್ಲಿ ಡ್ರೈವರ್ ಬಿಟ್ಟರೆ ಯಾರೂ ಇಲ್ಲ. ಇವನು ಕೈತೋರಿಸಿದಾಗ ಬಸ್ ನಿಂತಿತು. ಗುಂತಕಲ್‌ಗೆ ಹೋಗಬೇಕು. ಎಂದಿದ್ದಕ್ಕೆ ಆ ಡ್ರೈವರ್ ನನಗೂ ಗುಂತಕಲ್‌ನಲ್ಲಿ ಬಸ್ ರಿಪೇರಿ ಕೆಲಸವಿದೆ ಎಂದನಂತೆ. ಗುಂತಕಲ್ ತಲುಪಿ ಮಠದ ಹುಡುಗ ಹಾಲು ಸಿಗುವ ಜಾಗ ವಿಚಾರಿಸಿ ಹಾಲು ತೆಗೆದುಕೊಂಡು ಪುನಃ ತನ್ನನ್ನು ಇಳಿಸಿದ ಸ್ಥಳಕ್ಕೆ ಬಂದನಂತೆ. ಆಗ ಅದೇ ಬಸ್, ಅದೇ ಡ್ರೈವರ್ ಅಲ್ಲಿ ಬಂದನಂತೆ. ನನ್ನ ಬಸ್ ಕೆಲಸ ಆಯಿತು. ತಿರುಗಿ ವಾಪಸ್ ಹೋಗುತ್ತಿದ್ದೇನೆ. ನಿಮ್ಮನ್ನು ಚಿಪ್ಪಗಿರಿಗೆ ಬಿಡುತ್ತೇನೆ ಎಂದು ಹೇಳಿ ಡ್ರೈವರ್ ಇವರನ್ನು ಚಿಪ್ಪಗಿರಿಯಲ್ಲಿ ಇಳಿಸಿ ಹೋದನು ಇದು ಭೂತರಾಜರ ಸಹಾಯ ಎಂದು ಶ್ರೀಗಳವರು ಹೇಳಿದರಂತೆ.

೨೪. ಕಡೂರಿನ ವೈಶ್ಯರೊಬ್ಬರು ಶ್ರೀ ವಿಶ್ವೋತ್ತಮತೀರ್ಥರ ಪರಮ ಭಕ್ತರಾಗಿದ್ದರು. ಅವರು ಮನೆಯಲ್ಲಿರುವ ದುಷ್ಟಶಕ್ತಿಗಳಿಂದ ಯಾವಾಗಲೂ ತೊಂದರೆ–ಕಷ್ಟ ಕಾರ್ಪಣ್ಯಗಳಿಂದ ದುಃಖಿತರಾಗಿದ್ದರು. ತೊಂದರೆಯ ನಿವಾರಣೆಗಾಗಿ ನಾನಾ ಪರಿಹಾರೋಪಾಯಗಳನ್ನು ಮಾಡಿಸಿದ್ದರು. ಆದರೂ ನೆಮ್ಮದಿ ಸಿಗಲೇ ಇಲ್ಲ.

ಒಮ್ಮೆ ಶ್ರೀ ವಿಶ್ವೋತ್ತಮತೀರ್ಥರನ್ನು ಭೇಟಿ ಮಾಡಿ "ದಯವಿಟ್ಟು ತಾವು ಕಡೂರಿನ ನಮ್ಮ ನಿವಾಸಕ್ಕೆ ಬಂದು ಸಂಸ್ಥಾನ ಪೂಜೆ ವಾದಿರಾಜರ ಹಾಗೂ ಭೂತರಾಜರ ಪೂಜೆ ನೆರವೇರಿಸಿ, ನಮ್ಮ ಭವಣೆಯನ್ನು ನಿವಾರಿಸಬೇಕು" ಎಂದು ಪ್ರಾರ್ಥಿಸಿದಾಗ, ಶ್ರೀಗಳವರು ಸಮ್ಮತಿಸಿ ಕಡೂರಿನ ಆ ಭಕ್ತರ ನಿವಾಸಕ್ಕೆ ಬಂದು ಮನೆಯನ್ನು ಪ್ರವೇಶಿಸುತ್ತಿರುವಾಗಲೇ, ಆ ಮನೆಯ ಹಿಂಬಾಗಿಲು ಇದ್ದಕ್ಕಿದ್ದಂತೆ ತೆರೆದುಕೊಂಡಿತ್ತು. ಶಿಷ್ಯರು ಶ್ರೀರಾಜರ ಪಾದುಕೆ ಹಾಗೂ ಭೂತರಾಜರ ಪೆಟ್ಟಿಗೆಗಳನ್ನು ಹಿಡಿದು ಮನೆಯೊಳಗೆ ಪ್ರವೇಶ ಮಾಡುತ್ತಲೇ ಮನೆಯ ಛಾವಣಿಗೆ ಹಾಕಿದ ತಗಡು ಹಾರಿಹೋಯಿತಲ್ಲದೆ ಭಾರಿ ಶಬ್ದವಾಯಿತು.

ಶ್ರೀಗಳವರು ಮನೆಯಲ್ಲಿ ಕುಳಿತುಕೊಂಡ ಕೂಡಲೇ ಆ ಭಕ್ತನನ್ನು ಕರೆದು "ಇನ್ಯಾವ ದುಷ್ಟ ಶಕ್ತಿಯ ಕಾಟ ನಿಮಗೆ ಬರುವುದಿಲ್ಲ. ಧೈರ್ಯದಿಂದಿರಿ. ಸೂಚನೆ ನೀಡಿರುವುದು ಸ್ಪಷ್ಟವಾಗಿದೆ. ಶ್ರೀವಾದಿರಾಜರು ಮತ್ತು ಶ್ರೀ ಭೂತರಾಜರು ನಿಮ್ಮನ್ನು ಕಾಪಾಡುತ್ತಾರೆ" ಎಂದು ತಿಳಿಸಿ ಆ ಭಕ್ತರ ಸಂಕಷ್ಟಗಳನ್ನು ಪರಿಹರಿಸಿದರು.

೨೫. ಶ್ರೀ ವಿಶ್ವೋತ್ತಮತೀರ್ಥರು ಒಮ್ಮೆ ರಾತ್ರಿ ಪ್ರಯಾಣ ಮಾಡುವಾಗ ಭದ್ರಾವತಿಯಿಂದ ಸ್ವಲ್ಪ ದೂರ ಹೋದಮೇಲೆ ಮುಂದೆ ಆಯುಧ ಹಿಡಿದು ನಿಂತ ಕಳ್ಳರ ಗುಂಪನ್ನು ನೋಡಿ ಡ್ರೈವರ್ ವ್ಯಾನನ್ನು ನಿಲ್ಲಿಸಿದರು. ಆಗ ಎಲ್ಲರೂ ನಿದ್ದೆಕಣ್ಣಿನಲ್ಲಿದ್ದರು. ಶ್ರೀಗಳವರು ಡ್ರೈವರ್‌ನನ್ನು ಏಕೆ ನಿಲ್ಲಿಸಿದ್ದು ಎಂದು ಕೇಳಿದಾಗ ಡ್ರೈವರ್ ಮುಂದಿರುವ ಕಳ್ಳರ ಗುಂಪನ್ನು ತೋರಿಸಿದರು. ಶ್ರೀಗಳವರು ಪಕ್ಕದ ಕಿಟಕಿಯ ಗ್ಲಾಸನ್ನು ಸರಿಸಿ ನೋಡಿದಾಗ, ಆ ಕಳ್ಳರ ಗುಂಪಿನವನೊಬ್ಬ

ಬಂದು ಶ್ರೀಗಳವರ ಮುಖವನ್ನು ನೋಡಿದನು. ಆತನಿಗೆ ಏನೆನ್ನಿಸಿತೋ ತನ್ನ ಗುಂಪಿನವರಿಗೆ ದಾರಿ ಬಿಡಲು ಹೇಳಿದನು. ಶ್ರೀಗಳವರಿದ್ದ ವ್ಯಾನ್ ನಿರಾತಂಕವಾಗಿ ಮುಂದೆ ಸಾಗಿತು.

## ಎಲ್ಲಿಂದಲೋ ಬಂದವರು

### ೨೬. ಸೋದೆಯ ವಾದಿರಾಜ ಮಠದ ರಾಜಾಂಗಣ ನಿರ್ಮಾಣ ಪವಾಡ :

ಇದನ್ನು ನಿರ್ಮಿಸಿದವರು ತುಮಕೂರಿನ ಖ್ಯಾತ ಕಂಟ್ರಾಕ್ಟರ್, ಶ್ರೀವಾದಿರಾಜ ಗುರುಗಳ ಪರಮಭಕ್ತರಾದ ಶ್ರೀ ಬಿ.ಪಿ. ನಾರಾಯಣ ಮೂರ್ತಿಗಳು. ಅವರ ಮಾತುಗಳಲ್ಲಿ ಕೇಳಿರಿ.

ಕ್ರಿ.ಶ. ೧೯೬೭ರಲ್ಲಿ ಶ್ರೀವಾದಿರಾಜರ ಆರಾಧನೆಗೆ ಸೋದೆಗೆ ಹೋಗಿದ್ದಾಗ ಶ್ರೀಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ರಾಜಾಂಗಣದ ಜಾಗವನ್ನು ತೋರಿಸಿ ಈ ಜಾಗಕ್ಕೆ ಜಿಂಕ್‌ಶೀಟ್ ಮೇಲ್ಛಾವಣಿ ಮಾಡಿಸಬೇಕೆಂದು ಅಪ್ಪಣೆ ಮಾಡಿದರು ಹಾಗೂ ಇಲ್ಲಿ ಶ್ರೀರಾಜರ ಕೆಲಸಗಳನ್ನೆಲ್ಲಾ ಶ್ರೀ ಭೂತರಾಜರೇ ಮಾಡುವುದು ಎಂಬ ಸೂಚನೆಯನ್ನೂ ನೀಡಿದರು.

ಆ ಜಾಗದ ಅಳತೆ ೮೦'x೮೦'. ಇದೇ ಅಳತೆಯ ತುಮಕೂರಿನ ಸರ್ಕಾರಿ ಬಸ್ ಡಿಪೋಗೆ ೧೯೬೬ರಲ್ಲಿ ಒಂದು ಎ.ಸಿ. ಶೀಟ್ ರೂಫಿಂಗ್ ಕೆಲಸ ಮಾಡಿಸಿದ್ದೆ. ಸೋದೆಯ ಈ ಜಾಗವೂ ಅಷ್ಟೇ ಅಳತೆಯದ್ದಾಗಿತ್ತು. ಬೇಕಾದ ಸಾಮಾನುಗಳನ್ನು ಹೊಂದಿಸಿಕೊಂಡು ಟ್ರಸ್ ಮತ್ತು ೧೪ ಕಬ್ಬಿಣ ಕಂಭ ತಯಾರಿಸಿ ಸೋದೆಗೆ ಲಾರಿಯಲ್ಲಿ ಸಾಗಿಸಿದೆವು. ಸೋದೆಯಲ್ಲಿ ೧೪ ಲೋಹದ ಕಂಭಗಳನ್ನು ನಿಲ್ಲಿಸಲು ೫'x೫'x೫' ಅಳತೆಯ ಗುಂಡಿಗಳನ್ನು ತೋಡಲು ವ್ಯವಸ್ಥೆ ಮಾಡಿದೆವು. ೧೪ ಲೋಹದ ಕಂಭ (Column)ಗಳನ್ನು ನಿಲ್ಲಿಸಿ Trussಗಳನ್ನು ಕೂಡಿಸಿ ಜಿಂಕ್‌ಶೀಟ್ ತಗಡು ಹೊದಿಸುವ ಕೆಲಸವನ್ನು ಬೆಂಗಳೂರಿನಲ್ಲಿ ಒಬ್ಬ ಕಂಟ್ರಾಕ್ಟದಾರನಿಗೆ ಗುತ್ತಿಗೆ ನೀಡಲಾಗಿತ್ತು. ಒಂದು ಅಡಿ ಕಾಂಕ್ರಿಟ್ ಅರ್ಧ ಅಡಿ ಆರ್.ಸಿ.ಸಿ. ಕಾಂಕ್ರೀಟ್ ಹಾಕಿ Bed boltಗಳನ್ನು ನಿಲ್ಲಿಸುವ ಕೆಲಸ ಮಾಡಿಕೊಟ್ಟ ನಂತರ ಮುಂದಿನ ಕೆಲಸ ಆತನು ಮಾಡಿಸಬೇಕೆಂದು ಒಪ್ಪಂದವಾಗಿತ್ತು. ಇಷ್ಟೆಲ್ಲ ಕೆಲಸ ಮಾಡಲು ನಮಗೆ ಇದ್ದಿದ್ದು ಕೇವಲ ಏಳು ದಿನಗಳು ಮಾತ್ರ ೧೯೬೮ರ ವಾದಿರಾಜರ ಆರಾಧನೆ ಮತ್ತು ತ್ರಿವಿಕ್ರಮರ ಸಪ್ತೋತ್ಸವಕ್ಕೆ ಶ್ರೀಪಾದಂಗಳವರು ಬರುವುದರ ಒಳಗೆ ಕೆಲಸ ಪೂರ್ತಿಗೊಳಿಸಬೇಕಾಗಿತ್ತು. ಕಂಟ್ರಾಕ್ಟದಾರರು ನಾವು ಕಾಂಕ್ರಿಟ್ ಹಾಕಲು ಶುರುಮಾಡಿದ ದಿನವೇ ಬಂದುಬಿಟ್ಟರು. ನಾವು ಬೆಳಿಗ್ಗೆಯಿಂದ ಸಂಜೆಯವರೆಗೂ ಕೆಲಸ ಮಾಡಿದರೂ ೫ ಗುಂಡಿಗಳ ೧ ದಪ್ಪ ಕಾಂಕ್ರಿಟ್ ಮಾತ್ರ ಆಗಿತ್ತು. ಇನ್ನೂ ೯ ಗುಂಡಿಗಳ ಕೆಲಸವಾಗಬೇಕಾಗಿದೆ. ಇನ್ನೂ ಎರಡು ದಿನ ಬೇಕಾಗುತ್ತದೆ. ನಾವು ಕೆಲಸವಿಲ್ಲದೆ ಸುಮ್ಮನೆ ಕುಳಿತುಕೊಳ್ಳಬೇಕಾಗುವುದರಿಂದ ತಮಗೆ ತುಂಬಾ ನಷ್ಟ ಆಗುತ್ತದೆ ಎಂದು ತಕರಾರು ಮಾಡಲಾರಂಭಿಸಿದರು.

ನಾವು ಎಂತಹ ಪರಿಸ್ಥಿತಿಯಲ್ಲಿ ಕೆಲಸ ಮಾಡಬೇಕಾಯಿಗಿತ್ತೆಂದರೆ ಶ್ರೀ ತ್ರಿವಿಕ್ರಮ ದೇವರ ಗುಡಿಯ ಪಕ್ಕದಲ್ಲಿ ಜಲ್ಲಿ ಮರಳು ಕೆಳಗಡೆ ಆಗ ದನಗಳನ್ನು ಕಟ್ಟುತ್ತಿದ್ದ ಜಾಗದಲ್ಲಿ ಸಿಮೆಂಟು ಚೀಲಗಳಿದ್ದವು. ಧವಳ ಗಂಗೆಯಿಂದ ನೀರು ತಂದು ಭೂತರಾಜರ ಗುಡಿಯ ಪಕ್ಕದಲ್ಲಿ ಕಾಂಕ್ರೀಟ್ ಕಲಿಸಬೇಕಿತ್ತು. ಇದನ್ನು ರಾಜಾಂಗಣದ ಪಾಯದ ಗುಂಡಿಗಳಿಗೆ ಹಾಕಬೇಕಿತ್ತು.

ಆ ದಿನ ಸಂಜೆ ಯಾರೋ ಒಬ್ಬ ಭಕ್ತರು ಶ್ರೀ ಭೂತರಾಜರ ಪೂಜೆ ಮಾಡಿಸಿದರು. ಪೂಜೆ ಆದನಂತರ ಸಾಯಂಕಾಲ ೭ ಘಂಟೆಗೆ ಪುನಃ ಕೆಲಸ ಶುರುಮಾಡಿದೆವು. ಆಗ ಕೆಲಸ ಮಾಡಲು ನಮ್ಮವರು ೮ ಜನ. ಮಠದವರು ೪ ಜನ. ಹೀಗಿರುವಾಗ ಇದ್ದಕ್ಕಿದ್ದ ಹಾಗೆ ಸುಮಾರು ೬೦ ಜನರು ಯಾತ್ರಿಕರು ಭೂತರಾಜರ ಪೂಜಾ ನಂತರ ಎಲ್ಲಿಂದಲೋ ಬಂದರು. ಬಂದವರು ಮಠದ ಒಳಗೆ ಪ್ರವೇಶ ಮಾಡಲೇ ಇಲ್ಲ. ಆಗ ಮಠದ ಆಫೀಸಿನಲ್ಲಿ ಕುಳಿತಿದ್ದ ಶ್ಯಾನುಭೋಗರು "ಎಲ್ಲರೂ ಸ್ವಲ್ಪ ಸೇವೆ ಮಾಡಿ" ಎಂದು ಹೇಳಿದರು. ಇದನ್ನು ಕೇಳುತ್ತಿದ್ದಂತೆಯೇ ಅವರಲ್ಲಿ ಕೆಲವರು ಕಾಂಕ್ರಿಟ್ ಕಲಿಸಿದರು. ಕೆಲವರು ಧವಳಗಂಗೆಯಿಂದ ನೀರು ತಂದರು. ಉಳಿದವರು ಗುಂಡಿಗಳಿಗೆ ಕಾಂಕ್ರಿಟ್ ಹಾಕತೊಡಗಿದರು. ಅದಕ್ಕೆ ಬೇಕಾಗುವ ಬಾಂಡ್ಲಿ ಬಕೇಟು, ಗುದ್ದಲಿ ಮುಂತಾದ ಸಲಕರಣೆಗಳು ಹೇಗೆ ಬಂದವೋ ಗೊತ್ತಿಲ್ಲ. ೭ ಘಂಟೆಗೆ ಪ್ರಾರಂಭವಾದ ಕೆಲಸ ೯ ಘಂಟೆವರೆಗೆ ನಡೆದವು. ನಾವು ಮಾಡಬೇಕಾದಷ್ಟನ್ನು ಪೂರ್ತಿ ಮಾಡಿಮುಗಿಸಿದರು.

ಇದನ್ನು ನೋಡುತ್ತಿದ್ದ ಮಠದ ಅಡಿಗೆಯವರಾದ ಶ್ರೀಕಾಂತಣ್ಣನವರು ಖುಷಿಯಾಗಿ ಪಾಯಸದ ಅಡುಗೆ ಮಾಡಿದರು. ಕೆಲಸ ಮುಗಿದ ಮೇಲೆ ಬಂದವರೆಲ್ಲರೂ ಊಟ ಮಾಡಿದರು. ಆಮೇಲೆ ಸಾಮಾನುಗಳನ್ನೆಲ್ಲಾ ತೆಗೆದಿಟ್ಟು ಬಾಗಿಲು ಹಾಕುವಾಗ ನೋಡಿದರೆ ೬೦ ಜನ ಬಂದವರಲ್ಲಿ ಒಬ್ಬರೂ ಕಾಣಿಸಲಿಲ್ಲ. ಎಲ್ಲಿಂದ ಬಂದರೋ ಹೇಗೆ ಬಂದರೋ ಎಲ್ಲಿಗೆ ಹೋದರೋ ಒಂದೂ ಗೊತ್ತಾಗಲಿಲ್ಲ. ಬೆಳಿಗ್ಗೆ ಸ್ನಾನ ಮಾಡುವಾಗಲೂ ಅವರ್ಯಾರೂ ಕಾಣಲಿಲ್ಲ.

ಈ ಘಟನೆ ನೆನಸಿಕೊಂಡು ಆಶ್ಚರ್ಯಪಡುತ್ತಿದ್ದಾಗ ಶ್ರೀಗಳವರು ಹೇಳಿದ್ದು ನೆನಪಿಗೆ ಬಂತು. "ಶ್ರೀ ರಾಜರ ಕೆಲಸ ಭೂತರಾಜರೇ ಮಾಡುವುದು ಎಂದು" ಇದು ನಮಗೂ ದೃಢಪಟ್ಟಿತು.

**೨೭.** ಸುಮಾರು ಹತ್ತು ವರ್ಷಗಳ ಹಿಂದೆ ನಡೆದ ಘಟನೆ. ತುಮಕೂರಿನಿಂದ ೧೦–೧೫ ಜನರಿದ್ದ ಯಾತ್ರಿಕರ ತಂಡವೊಂದು ವಾಹನದಲ್ಲಿ ಹೊರಟು ಸೋದೆ ತಲ್ಪಿದರು. ಮರುದಿನ ಸಾಯಂಕಾಲ ಮಾರ್ಗದರ್ಶಿಯೊಬ್ಬನ ಸಹಾಯದಿಂದ ತಪೋವನಕ್ಕೆ ಹೋದರು. ಸ್ವಲ್ಪ ಸಮಯ ಅಲ್ಲಿದ್ದು ಸೋದೆಗೆ ಮರಳಿದರು. ಆಗ ಕತ್ತಲಾಗಿತ್ತು. ಆಗ ಅವರು ಗಮನಕ್ಕೆ ಬಂದದ್ದು ೭–೮ ವರ್ಷದ ಬಾಲಕನೊಬ್ಬನನ್ನು ತಪೋವನದಲ್ಲಿ ಬಿಟ್ಟು ಬಂದದ್ದು. ತಪೋವನಕ್ಕೆ ಮರಳಿ ಹೋಗಿ ಬಾಲಕನನ್ನು ಕರೆತರಲು ಮನಸ್ಸು ಮಾಡಿದರು. ಗಾಢಾಂಧಕಾರದಿಂದ ಮಾರ್ಗ ತೋರುವುದಿಲ್ಲ ಎಂಬ ಹೇಳಿ ಮಾರ್ಗದರ್ಶಿ ಒಪ್ಪಲಿಲ್ಲ. ಆಗ ಎಲ್ಲರೂ ಚಿಂತಾಕ್ರಾಂತರಾಗಿ ಶ್ರೀ ವಿಶ್ವೋತ್ತಮತೀರ್ಥರ ಮೊರೆ ಹೋದರು. ಆಗ ಶ್ರೀಗಳವರು ಹುಡುಗನ ರಕ್ಷಣೆಗಾಗಿ ಶ್ರೀ ಹಯವದನನ್ನು, ವಾದಿರಾಜಗುರುಗಳನ್ನು ಹಾಗೂ ಭೂತರಾಜರನ್ನು ಪ್ರಾರ್ಥಿಸಿದರು. 'ಬೆಳಗಾಗುತ್ತಲೇ ತಪೋವನಕ್ಕೆ ಹೋಗಿರಿ, ಭೂತರಾಜರು ಮಗುವನ್ನು ಕಾಪಾಡುತ್ತಾರೆ' ಎಂದು ಹೇಳಿ ಸಮಾಧಾನಪಡಿಸಿದರು. ಗಾಢಾಂಧಕಾರ, ದುಷ್ಟ ಮೃಗಗಳು ಇರುವ ಸ್ಥಳ, ಭಯಾನಕ ಕಾಡು, ನದಿತೀರ, ವಿಪರೀತ ಚಳಿ, ಇಂತಹ ಭೀಕರ ಪ್ರದೇಶದಲ್ಲಿ ಒಬ್ಬಂಟಿಗ ಬಾಲಕ ಈ ಎಲ್ಲವನ್ನೂ ನೆನಸಿಕೊಂಡು ಭಯಭೀತರಾಗಿ ನಿದ್ದೆಯಿಲ್ಲದೆ ಆ ರಾತ್ರೆ ಕಳೆದ ಯಾತ್ರಿಕ ತಂಡ ಬೆಳಗಾಗುತ್ತಲೇ ತಪೋವನಕ್ಕೆ ಧಾವಿಸಿದರು. ಅಲ್ಲಿ ನಿರಾಳವಾಗಿದ್ದ ಬಾಲಕನನ್ನು ನೋಡುತ್ತಲೇ ಎಲ್ಲರೂ ಆಶ್ಚರ್ಯ ಹಾಗೂ ಆನಂದಭರಿತರಾದರು. 'ರಾತ್ರಿ ನೀನೊಬ್ಬನೇ

ಇಲ್ಲಿ ಇರಲು ಭಯವಾಗಲಿಲ್ಲವೇ?' ಎಂದು ಕೇಳಲು, ಬಾಲಕನು "ಇಡೀ ರಾತ್ರಿ ಒಬ್ಬ ಅಜ್ಜನನ್ನೊಂದಿಗೆ ಆಟವಾಡುತ್ತ ಇದ್ದರು. ಈಗ ಸ್ವಲ್ಪ ಸಮಯದ ಹಿಂದೆ ಅವರು ಹೊರಟು ಹೋದರು" ಎಂತ ನುಡಿದನು. ಆ ರಾತ್ರಿ ಭೂತರಾಜರು ವೃದ್ಧನ ರೂಪದಿಂದ ಬಂದು ಬಾಲಕನೊಂದಿಗೆಯಿದ್ದು ಅವನ ರಕ್ಷಣೆ ಮಾಡಿದ್ದರು. ಭೂತರಾಜರೊಂದಿಗೆ ಒಂದು ರಾತ್ರಿ ಪೂರ್ತಿ ಇದ್ದ ಆ ಬಾಲಕ ಪುಣ್ಯವಂತನಲ್ಲವೆ?

೨೮. ಈಗ ನಾಲ್ಕು ವರ್ಷಗಳ ಹಿಂದೆ ಕುಂಭಾಶಿಯ ಮಿಲ್ ಹೆಬ್ಬಾರರ ಮನೆಯಲ್ಲಿ ಶ್ರೀ ಶ್ರೀ ವಿಶ್ವೋತ್ತಮತೀರ್ಥರ ಭಿಕ್ಷೆಯಿತ್ತು ಅಂದು ಬೆಳಿಗ್ಗೆ ಬಂದ ಸ್ವಾಮಿಗಳವರು ಪೂಜಾ ಕಾರ್ಯಕ್ರಮ ಮುಗಿಸಿ, ಸಂಜೆ ಭೂತರಾಜರ ಪೂಜೆ ಮುಗಿಸಿ, ರಾತ್ರಿ ಕುಂಭಾಸಿ ಮಠಕ್ಕೆ ಹೋದರು.

ಈ ಕಾರ್ಯಕ್ರಮಕ್ಕೆ ಆಗಮಿಸಿದ ನೆಂಟರಿಷ್ಟರು ರಾತ್ರಿ ಊಟ ಮಾಡಿ ಮನೆಯ ಒಳಗೆ ಕೆಲವರು ಮತ್ತು ಹೊರಗೆ ಅಂಗಳದಲ್ಲಿ ಕೆಲವರು ಮಲಗಿದರು. ಮಧ್ಯರಾತ್ರಿ ಸಮಯದಲ್ಲಿ ಎಲ್ಲರೂ ನಿದ್ರಿಸುತ್ತಿರುವಾಗ ಒಬ್ಬ ಕಳ್ಳ ಬಂದು ಐದು ವರ್ಷದ ಹುಡುಗಿಯನ್ನು ಎತ್ತಿಕೊಂಡು ಹೋದನು. ಆ ಮಗುವಿಗೂ ಗಾಢನಿದ್ರೆ ಬಂದಿತ್ತು. ಎಷ್ಟೋ ದೂರ ಹೋದ ಬಳಿಕ ಮಗುವಿಗೆ ಎಚ್ಚರವಾಗಿ ತನ್ನನ್ನು ಯಾರೋ ಎತ್ತಿಕೊಂಡು ಹೋಗುತ್ತಿರುವುದು ಗೊತ್ತಾಗಿ ಕೂಗತೊಡಗಿತು. ಯಾರಿಗೂ ಮಗುವಿನ ಧ್ವನಿ ಕೇಳಬಾರದು ಎಂದು ಆ ಕಳ್ಳ ಮಗುವಿನ ಬಾಯಿಯನ್ನು ಮುಚ್ಚಿ ಮುಂದೆ ನಡೆಯತೊಡಗಿದನು.

ಇತ್ತ ಮನೆಯಲ್ಲಿ ಸ್ವಲ್ಪ ಸಮಯದ ನಂತರ ಎಚ್ಚರವಾದಾಗ ಮಗು ಇಲ್ಲದ್ದು ಗಮನಕ್ಕೆ ಬಂದು, ಗಾಬರಿಯಿಂದ ಮಗುವಿಗಾಗಿ ಎಲ್ಲಾ ಕಡೆ ಹುಡುಕಾಡಿದರು. ದೇವರಿಗೆ ಪ್ರಾರ್ಥನೆಯನ್ನು ಸಲ್ಲಿಸಿದರು.

ಅತ್ತ ಮಗುವನ್ನು ಎತ್ತಿಕೊಂಡು ಸಾಗಿದ ಕಳ್ಳನಿಗೆ ಇದ್ದಕ್ಕಿದ್ದಂತೆ ಮಗು ಭಾರವಾದಂತೆ ಭಾಸವಾಗಿ ಅವನಿಗೆ ಮುಂದೆ ನಡೆಯುವುದು ಅಸಾಧ್ಯವಾಯಿತು. ಆಗ ಒಬ್ಬ ವಯಸ್ಸಾದವರು ಬಂದ 'ಮಗುವನ್ನು ಇಲ್ಲಿ ಕೊಡು, ನಾನು ಎತ್ತಿಕೊಳ್ಳುತ್ತೇನೆ' ಎಂದು ಅವನಿಂದ ಮಗುವನ್ನು ಸೆಳೆದುಕೊಂಡರು. ಆಗ ಆ ಕಳ್ಳನಿಗೆ ಭಾರ ಇಳಿದಂತಾಗಿ ಅವನು ಓಡಿ ಹೋದನು. ಆ ಮುದುಕರು ಮಗುವಿನೊಂದಿಗೆ ಮಾತನಾಡುತ್ತಾ ಮಗುವನ್ನು ನಡೆಸಿಕೊಂಡು ಮನೆಯ ಕಡೆಗೆ ಹೊರಟರು. ಮನೆ ಹತ್ತಿರ ಬರುತ್ತಿದ್ದಂತೆ ಮಗುವನ್ನು ಬಿಟ್ಟು ಅದೃಶ್ಯರಾದರು. ಆ ಮಧ್ಯ ರಾತ್ರಿಯಲ್ಲಿ ಮಗು ಒಬ್ಬಳೇ ಮನೆಗೆ ಬಂದದ್ದನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ಒಬ್ಬೊಬ್ಬರು ಒಂದೊಂದು ಪ್ರಶ್ನೆ ಕೇಳಲು ಮಗು ನಡೆದದ್ದನ್ನು ತನ್ನ ಬಾಲ ಭಾಷೆಯಲ್ಲಿ ಹೇಳಿತು.

ಮರುದಿನ ಬೆಳಿಗ್ಗೆ ಸ್ವಾಮಿಗಳವರು ಬಂದಾಗ ರಾತ್ರಿ ನಡೆದ ಘಟನೆಯನ್ನು ತಿಳಿಸಲು 'ಅದು ಯಾರೂ ಅಲ್ಲ. ಶ್ರೀ ಭೂತರಾಜರೇ ವೃದ್ಧರ ರೂಪದಿಂದ ಬಂದು ಮಗುವನ್ನು ಕಾಪಾಡಿದ್ದು' ಎಂದು ನುಡಿದರು.

೨೯. ಇದು ನಡೆದದ್ದು ಸುಮಾರು ೩೫ ವರ್ಷಗಳ ಹಿಂದೆ. ಆಗ ಭೂತರಾಜರ ಪ್ರತೀಕವನ್ನು ಮರದ ಮಂಚದ ಮೇಲೆ ಇರಿಸಲಾಗಿತ್ತು. ಶ್ರೀ ವಾದಿರಾಜರ ಗುಡಿ ನಿರ್ಮಾಣದ

ಸಮಯದಲ್ಲಿ ಭೂತರಾಜರ ಪ್ರತೀಕವನ್ನು ಮರದ ಮಂಚದ ಬದಲಾಗಿ ಮಾರ್ಬಲ್ ಮಂಚದ ಮೇಲಿರಿಸಲು ಸಿದ್ಧತೆ ಮಾಡಿಕೊಳ್ಳಲಾಗಿತ್ತು. ಶ್ರೀ ಭೂತರಾಜರ ಗುಡಿಯೊಳಗೆ ಬಹಳ ಮಡಿಯಿಂದ ಕೆಲಸ ಮಾಡಬೇಕಾಗಿತ್ತು. ಆ ಸಂದರ್ಭದಲ್ಲಿ ತುಮಕೂರಿನಲ್ಲಿರುವ ಶ್ರೀ ಬಿ.ಪಿ. ನಾರಾಯಣಮೂರ್ತಿಯವರೇ ಗುಡಿಯಲ್ಲಿ ಮಡಿಯಿಂದ ಗಾರೆಕೆಲಸವನ್ನು ಮಾಡಿದ್ದರು. ಆ ಮಾರ್ಬಲ್ ಮಂಚವನ್ನು ೩ ಜನ ಹೊರಗಡೆಯಿಂದ ಭೂತರಾಜರ ಗುಡಿಯವರೆಗೆ ತಂದು ಇಟ್ಟಿದ್ದರು. ಗಾರೆ ಕೆಲಸ ಮಾಡಿ ಆ ಮಾರ್ಬಲ್ ಮಂಚವನ್ನು ಒಳತರಲು ಆ ಮೂವರಿಂದ ಸಾಧ್ಯವಾಗಲಿಲ್ಲ. ನಂತರ ನಾಲ್ಕು ಅಲ್ಲ ಏಳು ಮಂದಿ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತಕ್ಷಣ ಈ ವಿಷಯವನ್ನು ಶ್ರೀ ವಿಶ್ವೋತ್ತಮತೀರ್ಥರಲ್ಲಿ ನಿವೇದಿಸಲು ಶ್ರೀಗಳವರು ಆ ಸ್ಥಳಕ್ಕೆ ಬಂದು ಪ್ರಾರ್ಥನೆ ಮಾಡಿ ಮಂಗಳಾರತಿ ಮಾಡಲು ಕೇವಲ ಮೂವರಿಂದಲೇ ಆ ಮಾರ್ಬಲ್ ಮಂಚವು ಸುಲಭವಾಗಿ ಒಳಗೆ ಬಂದಿತು. ಅದರ ಮೇಲೆ ಭೂತರಾಜರ ಪ್ರತೀಕವನ್ನು ಇರಿಸಲಾಯಿತು.

**೩೦.** ಈಗ ಸುಮಾರು ೩೫ ವರ್ಷಗಳ ಹಿಂದೆ ಕಾಳಿ ನದಿಯ ತೃತೀಯ ಹಂತದ ಯೋಜನೆಯನ್ನು ಸರ್ಕಾರ ಕಾರ್ಯಗತಗೊಳಿಸಲಿದೆ ಅಂತ ವರ್ತಮಾನವಿತ್ತು. ಯೋಜನೆ ಮುಗಿದರೆ, ಹವ್ಯಕರ ಸ್ವರ್ಣವಲ್ಲಿ ಮಠ ಹಾಗೂ ಸೋದೆಯ ಶ್ರೀವಾದಿರಾಜರ ವೃಂದಾವನವಿರುವ ತಗ್ಗು ಪ್ರದೇಶ ನದಿಯ ಹಿನ್ನೀರಿನಿಂದ ಮುಳುಗಡೆಯಾಗುತ್ತದೆಯಂತ ಸುದ್ಧಿಹರಡಿತು. ಇದು ಶ್ರೀ ವಿಶ್ವೋತ್ತಮತೀರ್ಥರ ಕಿವಿಗೆ ತಲ್ಪಿತು. ಆಗ ಶ್ರೀ ವಿಶ್ವೋತ್ತಮತೀರ್ಥರು ಶ್ರೀವಾದಿರಾಜರ ಸೇವಾ ಸೌಭಾಗ್ಯ ಕಳೆದುಕೊಳ್ಳುವ ಕಾಲ ಸಮೀಪಿಸಿತೆ ? ಎಂಬುದಾಗಿ ವ್ಯಾಕುಲರಾದರು. ಹೀಗಿರಲೊಂದು ದಿನ ಒಬ್ಬ ಭಕ್ತರು ಸೋದೆಗೆ ಬಂದು ಶ್ರೀ ವಿಶ್ವೋತ್ತಮರನ್ನು ಭೆಟ್ಟಿಯಾಗಿ ಅವರಿಗೆ ಹೀಗೆಂದರು "ನಾನು ಕಾಳಿಯೋಜನೆಯ ಮುಖ್ಯಾಧಿಕಾರಿಗಳ್ಳೊಬ್ಬನು. ನಾನು ವಾದಿರಾಜರ ದರ್ಶನಾಕಾಂಕ್ಷಿಯಾಗಿ ಬಂದಿದ್ದೇನೆ. ಈ ಪರಿಸರವನ್ನೆಲ್ಲಾ ಪರಿಶೀಲನೆ ಮಾಡಿದ್ದೇನೆ. ಕಾಳೀ ಮುಂದಿನ ಯೋಜನೆ ಕಾರ್ಯಗತವಾದರೆ ಶ್ರೀವಾದಿರಾಜರ ಪಂಚವೃಂದಾವವಿರುವ ಜಾಗ ಮುಳುಗಡೆಯಾಗುವುದಿಲ್ಲ. ಆದರೆ ಸ್ವರ್ಣವಲ್ಲಿ ಮಠ ಮುಳುಗಡೆಯಾಗುವುದು. ನೀವು ಆತಂಕಪಡುವ ಅಗತ್ಯವಿಲ್ಲ" ಎಂದು ತಿಳಿಸಿದರು. ಆಗ ಶ್ರೀಗಳವರು ನೆಮ್ಮದಿಯನ್ನು ಹೊಂದಿದರು.

ಇದಕ್ಕೂ ಮುಂಚೆ ಆಗ ಪೀಠಸ್ಥರಾದ ಸ್ವರ್ಣವಲ್ಲಿ ಮಠಾಧೀಶರು ಕಾಳಿ ಯೋಜನೆಯನ್ನು ಕೈ ಬಿಡುವಂತೆ ಒತ್ತಾಯಿಸಿ ಪರಿಸರ ಪ್ರೇಮಿಗಳ ಸಹಕಾರದಿಂದ ಸತ್ಯಾಗ್ರಹ ನಡೆಸಲು ಮುಂದಾದರು. ಅವರು ಶ್ರೀ ವಿಶ್ವೋತ್ತಮತೀರ್ಥರಿಗೂ ಚಳವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವಂತೆ ಆಹ್ವಾನಿಸಿದರು. ಆಗ ಶ್ರೀ ವಿಶ್ವೋತ್ತಮತೀರ್ಥರು "ನಾಲ್ಕು ನೂರು ವರ್ಷಗಳ ಹಿಂದೆ, ಭವಿಷ್ಯದ್ ಜ್ಞಾನಿಗಳಾದ ರಾಜರು ತಾವಾಗಿ ಈ ಸ್ಥಳವನ್ನು ಆಯ್ಕೆ ಮಾಡಿಕೊಂಡು ವೃಂದಾವನಸ್ಥರಾಗಿದ್ದಾರೆ. ಈ ಪ್ರದೇಶ ಮುಳುಗಡೆಯಾಗುವುದು, ಆಗದೇಯಿರುವುದು ಅವರ ಸಂಕಲ್ಪಕ್ಕೆ ಬಿಟ್ಟ ವಿಷಯ. ಆದುದರಿಂದ ನಾವು ಹೋರಾಟದಲ್ಲಿ ಸಕ್ರೀಯವಾಗಿ ಭಾಗವಹಿಸುವುದಿಲ್ಲ. ಆದರೆ ನಮ್ಮ ನೈತಿಕ ಬೆಂಬಲ ನಿಮಗಿದೆ ಎಂತ ತಿಳಿಸಿದರು. ಯೋಜನೆ ಕಾರ್ಯಗತವಾದರೆ ಕಾಡಿನ ಬಹುಭಾಗ ನಾಶವಾಗುವುದು. ಆಗ ಲಾಭಕ್ಕಿಂತ ಅಧಿಕ ನಷ್ಟ ಸಂಭವಿಸುತ್ತದೆ ಎಂಬ ಪರಿಸರ ಪ್ರೇಮಿಗಳ ವಾದಕ್ಕೆ ಮನ್ನಣೆ ನೀಡಿದ ಸರ್ಕಾರ ಯೋಜನೆ ಕೈಬಿಟ್ಟಿತು.

೩೧. ಶ್ರೀ ವಿಶ್ವೋತ್ತಮತೀರ್ಥರು ಒಮ್ಮೆ ಬೆಂಗಳೂರಿಗೆ ಆಗಮಿಸಿದಾಗ ಭಕ್ತರೊಬ್ಬರ ಮನೆಗೆ ಭಿಕ್ಷೆಗಾಗಿ ಹೋಗಿದ್ದರು. ಪೂಜೆ ಭಿಕ್ಷೆ ಕಾರ್ಯಕ್ರಮಗಳೆಲ್ಲಾ ಸಾಂಗವಾಗಿ ನೆರವೇರಿತು. ಶ್ರೀಗಳವರು ಎಲ್ಲರಿಗೂ ಮಂತ್ರಾಕ್ಷತೆ ನೀಡಿದರು. ಬೆಳಗಿನಿಂದ ಅಲ್ಲಿದ್ದ ಮನೆಯ ಕೆಲಸದಾಳಾದ ಹೆಂಗಸೊಬ್ಬಳು ಭಾವುಕಳಾಗಿ ಆನಂದಬಾಷ್ಪ ಸುರಿಸುತ್ತಾ ಭಕ್ತಿಭಾವದಿಂದ ಶ್ರೀಗಳವರನ್ನು ನೋಡುತ್ತಾ ನಿಂತಿದ್ದಳು. ಆಗ ಆಕೆ ಮನೆಯವರನ್ನು ಪ್ರಾರ್ಥಿಸಿ ತನಗೂ ಶ್ರೀಗಳವರಿಂದ ಆಶೀರ್ವಾದಪೂರ್ವಕ ಮಂತ್ರಾಕ್ಷತೆ ನೀಡುವಂತೆ ಕೇಳಿಕೊಂಡಳು. ಶ್ರೀಗಳವರಿಗೆ ಈ ವಿಷಯ ತಿಳಿಸಲು, ಆಕೆಗೆ ಬರಹೇಳಿ, ಅವಳಿಗೂ ಫಲ ಮಂತ್ರಾಕ್ಷತೆ ದಯಪಾಲಿಸಿದರು. ಆಕೆಗೆ ಜೋಡಿಬಾಳೆಹಣ್ಣನ್ನು ಫಲರೂಪದಲ್ಲಿ ದಯಪಾಲಿಸಿದ್ದರು. ಅದನ್ನು ಸ್ವೀಕರಿಸಿದ ಆಕೆ ಇನ್ನಷ್ಟು ಭಾವುಕಳಾಗಿ ಎಲ್ಲರಿಗೂ ಅದನ್ನು ತೋರಿಸುತ್ತಾ ತನ್ನ ಕಷ್ಟ ಇಂದು ಶ್ರೀಗಳವರಿಂದ ಪರಿಹಾರವಾಯಿತೆಂದು ಬಾರಿ ಬಾರಿ ಹೇಳುತ್ತಾ ಶ್ರೀಗಳವರಿಗೆ ಧನ್ಯತೆ ಅರ್ಪಿಸುತ್ತಿದ್ದಳು. ಆಕೆಯ ಆನಂದದ ಹಿನ್ನೆಲೆ ಇಷ್ಟೇ ಆಕೆ ಓರ್ವ ಗ್ರಾಮೀಣ ಮಹಿಳೆ. ಹದಿನಾಲ್ಕು ವರ್ಷಗಳ ಹಿಂದೆ ಈಕೆಯ ಗಂಡ ಈಕೆಯ ತವರು ಮನೆಯಿಂದ ಬಂದ ಜಮೀನುಗಳನ್ನು ತನ್ನ ಹೆಸರಿಗೆ ಮಾಡಿಕೊಂಡು ಇವಳನ್ನು ತ್ಯಜಿಸಿ, ಬೇರೊಬ್ಬಳನ್ನು ಮದುವೆಯಾಗಿ ಈಕೆಯನ್ನು ಬೀದಿಪಾಲು ಮಾಡಿದ್ದನು. ಬೆಂಗಳೂರು ಸೇರಿದ ಆಕೆ ಮನೆಗೆಲಸ ವೃತ್ತಿಯಿಂದ ಜೀವನ ಸಾಗಿಸುತ್ತಿದ್ದಳು. ಆದರೂ ಆಕೆಗೆ ಗಂಡನ ಬಗ್ಗೆ ದ್ವೇಷವಿಲ್ಲದೆ, ಪ್ರೀತಿ ಇಟ್ಟುಕೊಂಡು, ಮುಂದೊಂದು ದಿನ ಅವನೊಂದಿಗೆ ಬಾಳ್ವೆ ಮಾಡುವ ಆಸೆಯಿಂದಿದ್ದಳು. ಈಗ ಶ್ರೀಗಳವರಿಂದ ಪಡೆದ ಜೋಡಿ ಬಾಳೆಹಣ್ಣು ಆಕೆಯ ಆಸೆ ಕೈಗೂಡುತ್ತದೆ ಎಂಬ ಶುಭಸೂಚಕ ಎಂದು ಭಾವಿಸಿದಳು. ಇದಾದ ಐದು ದಿನಗಳಲ್ಲಿ ಆಕೆಯ ಗಂಡ ಬಂದು "ಇಲ್ಲಿ ಕೆಲಸ ಮಾಡುವ ಅಗತ್ಯವಿಲ್ಲ ಊರಿಗೆ ಬಾ, ಒಟ್ಟಿಗೆ ಇರೋಣ" ಎಂದು ಹೇಳಿ ಆಕೆಯನ್ನು ಕರೆದುಕೊಂಡು ಹೋದನು. ಅವಳ ಮನದಾಳದಲ್ಲಿದ್ದ ವಿರಹ ತಿಳಿದ ಶ್ರೀಗಳವರು ಜೋಡು ಫಲಗಳನ್ನು ನೀಡಿ ಅವಳ ಆಸೆ ಕೈಗೂಡುವಂತೆ ಮಾಡಿದ್ದು ಅದ್ಭುತವಲ್ಲವೇ ?

೩೨. ಈಗ ಸುಮಾರು ನಲ್ವತ್ತು ವರ್ಷಗಳ ಹಿಂದೆ. ತತ್ವವಾದ ಪತ್ರಿಕೆಗೆ ಅನೇಕ ವರ್ಷಗಳ ಕಾಲ ಆಧ್ಯಾತ್ಮಿಕ ಲೇಖನ ಬರೆಯುತ್ತಿದ್ದ, ಹರಪನ ಹಳ್ಳಿಯ ನಿವೃತ್ತ ನ್ಯಾಯಾಧೀಶರಾದ ಶ್ರೀರಾಯಸಂ ಶ್ರೀ ತಿರುಮಲರಾವ್‌ರಿಗೆ ಅನೇಕ ವರ್ಷಗಳ ಕಾಲ ಮಕ್ಕಳಾಗಿರಲಿಲ್ಲ. ಆಗ ಅವರು ಸೋದೆಗೆ ಹೋಗಿ ೧೫ ದಿನಗಳಕಾಲ ಶ್ರೀ ಗುರುರಾಜರ ಸೇವೆ ಮಾಡಿದರು. ಅವರ ಅನುಗ್ರಹದ ಫಲವಾಗಿ ಗಂಡು ಶಿಶು ಜನಿಸಿತು. ಮಗುವಿಗೆ ಶ್ರೀಧರ ಎಂತ ನಾಮಕರಣ ಮಾಡಿದರು. ಶ್ರೀಧರರೂ ಕೂಡಾ ಶ್ರೀ ವಾದಿರಾಜ ಗುರುಗಳ ಭಕ್ತರು. ಅವರು ಸೋದೆಗೆ ಹೋಗುತ್ತಿದ್ದರು ಅವರಿಗೆ ಶ್ರೀ ವಿಶ್ವೋತ್ತಮತೀರ್ಥರಿಂದಾದ ಅನುಗ್ರಹವನ್ನು ಅವರ ಮಾತುಗಳಲ್ಲೇ ಕೇಳಿರಿ.

"ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು ಸೌಮ್ಯ ಮುಖದ ಸದಾಮಂದಹಾಸ ಬೀರುತ್ತಾ ಮಂತ್ರಾಕ್ಷತೆ ಭಕ್ತಾದಿಗಳಿಗೆ ನೀಡುವ ದೃಶ್ಯ ಅಪೂರ್ವವಾಗಿತ್ತು. ಈಗ ನಾಲ್ಕು ವರ್ಷಗಳ ಹಿಂದೆ ಶ್ರೀ ವಾದಿರಾಜರ ಆರಾಧನೆ ದಿವಸ ನಾನೂ ತೀರ್ಥಪ್ರಸಾದವಾದ ನಂತರ ಫಲಮಂತ್ರಾಕ್ಷತೆ ಶ್ರೀ ಪಾದಂಗಳವರಿಂದ ಪಡೆಯಲು ಅವರಿದ್ದ ಕೊಠಡಿಗೆ ದಂಪತಿ ಸಹಿತ ಹೋಗಿದ್ದೆ. ನನ್ನ ಮಗ ಇಂಜನೀಯರ್ ಪರೀಕ್ಷೆ ಪಾಸು ಮಾಡಿದ್ದರೂ, ನೌಕರಿ ಸಿಕ್ಕಿರಲಿಲ್ಲ. ಫಲಮಂತ್ರಾಕ್ಷತೆ ಪಡೆದು ವಿನಯದಿಂದ ಶ್ರೀ ಪಾದಂಗಳವರಲ್ಲಿ, ದಯವಿಟ್ಟು ನನ್ನ ಮಗನಿಗೆ

ನೌಕರಿ ದೊರೆಯುವಂತೆ ಅನುಗ್ರಹ ಮಾಡಬೇಕೆಂದು ಬೇಡಿದೆನು. ಶ್ರೀಗಳವರು ವಿಷಯಗ್ರಹಿಸಿ "ಶ್ರೀವಾದಿರಾಜರನ್ನು ಶ್ರೀ ಭೂತರಾಜರನ್ನು ದರ್ಶಿಸಿ ಪುನಃ ಬೇಡಿಕೊಂಡು ಊರಿಗೆ ಮರಳಿರಿ, ಕೆಲಸವಾಗುತ್ತೆ" ಎಂದು ಅನುಗ್ರಹಿಸಿದರು. ಅದೇ ರೀತಿ ಪುನಃ ದರ್ಶನ ಮಾಡಿ ಬಳ್ಳಾರಿಗೆ ಬಂದಿಳಿದಾಗ ಮನೆಯ ಫೋನ್ ಶಬ್ದವಾಯಿತು. ಫೋನ್ ಎತ್ತಿಕೊಳ್ಳಲು, ಅತ್ತ ಕಡೆಯಿಂದ ನನ್ನ ಮಗ ಸಂತೋಷದಿಂದ ತನಗೆ ಟಾಟಾ ಕಂಪನಿಯಲ್ಲಿ ಕೆಲಸ ಸಿಕ್ಕ ವಿಷಯ ತಿಳಿಸಿದ. ಆಗ ನನಗೆ ಅಪಾರವಾದ ಸಂತೋಷವಾಯಿತು. ತಕ್ಷಣ ಮನದಲ್ಲಿ ಶ್ರೀ ವಾದಿರಾಜರಿಗೆ ಹಾಗೂ ಶ್ರೀ ವಿಶ್ವೋತ್ತಮ-ತೀರ್ಥರನ್ನು ನಮಸ್ಕರಿಸಿ, ಅವರ ಮಾತು ಸತ್ಯವಾಗಿದ್ದು. ಅವರ ಅಪಾರಮಹಿಮೆ ನೆನೆದು ಭಾವಪರವಶನಾದೆನು".

**೩೩. (ಸಂಪಾದಕನಾದ) ನನಗೆ ಮಾಡಿದ ಅನುಗ್ರಹ :**

ಶ್ರೀ ಶ್ರೀ ವಿಶ್ವೋತ್ತಮತೀರ್ಥರನ್ನು ನಾನು ಸುಮಾರು ನಾಲ್ಕು ದಶಕಗಳಿಂದ ನೋಡಿದ್ದೇನೆ. ಅವರ ಸುವರ್ಣ ವ್ಯಕ್ತಿತ್ವಕ್ಕೆ ಮಾರುಹೋದವನು ನಾನು. ನಮ್ಮ ಮಕ್ಕಳ ಉಪನಯನ ಕಾಲದಲ್ಲಿ ಹಾಗೂ ನಮ್ಮ ಮಾತೃಶ್ರೀಯವರ ವೈಕುಂಠ ಸಮಾರಾಧನೆ ಹಾಗೂ ಕ್ರಿ.ಶ. ೨೦೦೦ರಲ್ಲಿ ನನ್ನ ಸಹೋದರ ಶ್ರೀ ಕೆ.ಎಸ್. ಬದರಿನಾರಾಯಣರ ಷಷ್ಠ್ಯಬ್ಧಿಪೂರ್ತಿಶಾಂತಿ ಹೂವಿನಕೆರೆಯಲ್ಲಿ ನಡೆದ ಸಂದರ್ಭದಲ್ಲಿ ನಮ್ಮ ಆಹ್ವಾನಮನ್ನಿಸಿ ಪಟ್ಟದದೇವರ ಪೂಜೆ ಮಾಡಿ, ಭಿಕ್ಷೆ ಸ್ವೀಕರಿಸಿ ನಮ್ಮನ್ನು ಪುನೀತರನ್ನಾಗಿ ಮಾಡಿದ್ದಾರೆ.

ಬಹುಕಾಲದಿಂದ ನಾನು ಮಧುಮೇಹದಿಂದ ಬಳಲುತ್ತಿದ್ದೇನೆ. ಪ್ರತಿಸಲ ಶ್ರೀಗಳವರನ್ನು ಭೇಟಿಯಾದಾಗಲೂ ನನ್ನ ಆರೋಗ್ಯದ ಬಗ್ಗೆ ವಿಚಾರಿಸಿ ಔಷಧೋಪಚಾರದ ಬಗ್ಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ನನ್ನ ಆರೋಗ್ಯದ ಬಗ್ಗೆ ಅವರಿಗಿರುವ ಕಾಳಜಿ ನೋಡಿ ನನಗೇ ಆಶ್ಚರ್ಯವಾಗುತ್ತಿತ್ತು.

ಕ್ರಿ.ಶ. ೧೯೭೩ನೇ ಇಸ್ವಿಯಲ್ಲಿ ಶ್ರೀವಾದಿರಾಜ ಗುರುಸಾರ್ವಭೌಮರ ಆರಾಧನೆ ಸಂದರ್ಭದಲ್ಲಿ ಸೋದೆಗೆ ಹೋದಾಗ, ಗುರುರಾಜರ ಕೃತಿಯನ್ನು ಪ್ರಕಟಿಸುವ ಮೂಲಕ ಸೇವೆ ಮಾಡಬೇಕೆಂದು ಪ್ರೇರಣೆಯಾಯಿತು. ಕೆಲವು ದಿನಗಳಲ್ಲಿಯೇ ಬೆಂಗಳೂರಲ್ಲಿ ನಮ್ಮವರೇ ಆದ ಶ್ರೀಕೋಟೇಶ್ವರ ನರಸಿಂಹಾಚಾರ್ಯರು ಭೇಟಿಯಾದರು. ಪುಸ್ತಕ ಪ್ರಕಟಿಸುವ ವಿಷಯ ಅವರಲ್ಲಿ ಪ್ರಸ್ತಾಪಿಸಲು ತಾವು ರಾಜರ ಕೃತಿ ರುಕ್ಮಿಣೀಶ ವಿಜಯವನ್ನು ಕನ್ನಡದಲ್ಲಿ ಅನುವಾದಿಸಿರುವುದನ್ನು ತಿಳಿಸಿ ಅದನ್ನು ಪ್ರಕಟಿಸಬಹುದೆಂದು ತಿಳಿಸಿದರು. ಸ್ವಲ್ಪ ಸಮದಲ್ಲಿಯೇ ನಾನು ನಮ್ಮ ಭಾವನವರಾದ ಶ್ರೀ ಕೆ.ಎಸ್. ಗಣಪತಿರಾಯರು ಹಾಗೂ ದಿ|| ಜನಾರ್ಧನ ಉಪಾಧ್ಯಾಯರು, ನಾವು ಮೂವರೂ ಸೇರಿ ನಾಲ್ಕು ಭಾಗಗಳಲ್ಲಿ ರುಕ್ಮಿಣೀಶ ವಿಜಯವನ್ನು ಪ್ರಕಟಿಸಿದೆವು. ನಮ್ಮ ಈ ರಾಜರ ಸೇವೆಯು ಶ್ರೀ ವಿಶ್ವೋತ್ತಮತೀರ್ಥರಿಗೆ ತುಂಬಾ ಮೆಚ್ಚಿಗೆಯಾಯಿತು. ಮುನ್ನುಡಿ ಬರೆದುಕೊಟ್ಟು ಆಶೀರ್ವದಿಸಿದರು. ಕಾಲಕ್ರಮೇಣ ನಮಗೆ ಮೂವರಿಗೂ ಸತ್ಫಲ ದೊರೆಯಿತು.

ಕ್ರಿ.ಶ. ೧೯೮೧ರಲ್ಲಿ ನಾವು ತುಮಕೂರಿಗೆ ಬಂದು ಬಾಡಿಗೆ ಮನೆಯಲ್ಲಿ ವಾಸವಾಗಿದ್ದೆವು. ಆ ಸಮಯದಲ್ಲಿ ಶ್ರೀ ಶ್ರೀ ವಿಶ್ವೋತ್ತಮತೀರ್ಥರನ್ನು ಪಾದಪೂಜೆಗೆ ಆಹ್ವಾನಿಸಿದೆವು. ನಮ್ಮದು ಬಾಡಿಗೆ ಮನೆಯೆಂದು ತಿಳಿದು, ಮಂತ್ರಾಕ್ಷತೆ ನೀಡುವಾಗ, ಮುಂದಿನ ಸಲ ಭೂವರಾಹದೇವರು, ರಾಜರು ಸ್ವಂತ ನಿಮ್ಮ ಮನೆಗೆ ಬರುವಂತಾಗಲಿ ಎಂದು ಆಶೀರ್ವದಿಸಿದರು. ಅವರ ವಚನವು

ಸತ್ಯವಾಗಿ ಪರಿಣಮಿಸಿತು. ಅವರು ಮುಂದಿನ ಸಲ ನಮ್ಮ ಸ್ವಂತ ಮನೆಗೆ ಬಂದು ಪಟ್ಟದದೇವರ ಪೂಜೆ ಮಾಡಿ, ಭಿಕ್ಷೆ ಸ್ವೀಕರಿಸಿ ಆಶೀರ್ವದಿಸಿದರು. ಆದರೆ ವಿಧಿಯ ಸಂಕಲ್ಪ ಬೇರೆಯಿತ್ತು. ಕೆಲವೇ ವರ್ಷಗಳಲ್ಲಿ ಆ ಮನೆಯನ್ನು ಮಾರಾಟ ಮಾಡಬೇಕಾಯಿತು. ಆ ಸಂದರ್ಭದಲ್ಲಿ ತುಮಕೂರಿಗೆ ಆಗಮಿಸಿದ ಶ್ರೀ ಪಾದಂಗಳವರು ವಿಷಯ ತಿಳಿದು, ಮನೆ ಮಾರಾಟದಿಂದ ವ್ಯಥೆ ಪಡಬೇಡಿ, ನಿಮಗೆ ದೊಡ್ಡ ಆಪತ್ತು ಸಂಭವಿಸುವ ಪ್ರಸಂಗವಿತ್ತು. ಮನೆಯ ಮಾರಾಟದಿಂದ ಅದು ನಿವೃತ್ತಿಯಾಯಿತು ಎಂದು ಸಮಾಧಾನ ಹೇಳಿದರು. ಸ್ವಾಪ್ನ ವೃಂದಾವನಾಖ್ಯಾನ ಪಾರಾಯಣ ಮಾಡುವಂತೆ ಹಾಗೂ ದಶರಥ ಕೃತ ಶನಿ ಸ್ತೋತ್ರ ಪಠಿಸುವಂತೆ ಆಶೀರ್ವದಿಸಿ ಶನಿಸ್ತೋತ್ರ ಬರೆಸಿಕೊಟ್ಟರು.

ಶ್ರೀಗಳವರು ಸೂಚಿಸಿದಂತೆ ಪಾರಾಯಣ ಮಾಡಲು ನನಗೊದಗಿದ್ದ ಕಷ್ಟಗಳೆಲ್ಲಾ ಮಂಜಿನಂತೆ ಕರಗಿದವು. ಕ್ರಿ.ಶ. ೧೯೯೧ರಲ್ಲಿ ಬೆಂಗಳೂರಿಗೆ ಬಂದು, ಔಷಧ ಅಂಗಡಿಯನ್ನು ತೆರೆದು ವ್ಯಾಪಾರ ಪ್ರಾರಂಭಿಸಿದೆವು. ಅದು ಯಶಸ್ವಿಯಾಗಿ ನಮ್ಮ ಆರ್ಥಿಕ ಸ್ಥಿತಿ ಸುಧಾರಿಸಿತು. ಮನೆಯಲ್ಲಿ ಮಂಗಳ ಕಾರ್ಯಗಳು ಜರುಗಿದವು. ಸ್ವಂತ ಮನೆ ಹೊಂದುವ ಯೋಗ ಪ್ರಾಪ್ತವಾಯಿತು.

ಈಗ ಐದು ವರ್ಷಗಳ ಹಿಂದೆ ನಮ್ಮ ಸ್ವಂತಮನೆಯಲ್ಲಿ ದಿನಾಂಕ ೧೨-೭-೨೦೦೫ ರಲ್ಲಿ ಶ್ರೀ ವಿಶ್ವೋತ್ತಮತೀರ್ಥರಿಗೆ ಭೀಕ್ಷೆ ಮಾಡುವ ಅವಕಾಶ ದೊರೆಯಿತು. ಆ ಸಮಯದಲ್ಲಿ ನಮ್ಮ ಮಕ್ಕಳೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಶ್ರೀಗಳವರಿಗೆ ಪಾದಪೂಜೆ ಮಾಡಿ ಫಲಮಂತ್ರಾಕ್ಷತೆ ಪಡೆದರು. ನಮ್ಮ ಹಿರಿಯ ಮಗ ಸೊಸೆ, ಶ್ರೀಗಳವರ ಕರಕಮಲದಿಂದ ಪಡೆದ ಫಲವನ್ನು ಒಂದು ಪ್ಲಾಸ್ಟಿಕ್ ಕವರಿನಲ್ಲಿ ಹಾಕಿ ಟ್ರೆಜರಿಯ ಲಾಕರ್‌ನಲ್ಲಿ ಇಟ್ಟು ಮರೆತರು. ೭-೮ ತಿಂಗಳಾದ ಬಳಿಕ ಕೊನೆಗೊಮ್ಮೆ ನೋಡಿದಾಗ ಪ್ಲಾಸ್ಟಿಕ್ ಕವರಿನಲ್ಲಿದ್ದ ಕಾಯಿ ಮೊಳೆತು, ಪ್ಲಾಸ್ಟಿಕ್ ಚೀಲವನ್ನು ಭೇದಿಸಿ ಹೊರಗೆ ಬಂದಿತ್ತು. ಗಾಳಿ ಬೆಳಕು ನೀರು ಇಲ್ಲದ ಕಾರಣ ಸ್ವಲ್ಪ ಬಿಳಿಚಿಕೊಂಡಿತ್ತು. ಅದನ್ನು ದೊಡ್ಡ ಸಿಮೆಂಟಪಾಟ್‌ನಲ್ಲಿ ಬೆಳೆಸಿದೆವು. ಅದು ಕೆಲವು ದಿನಗಳಲ್ಲಿ ಚೆನ್ನಾಗಿ ಬೆಳೆದು ಸಣ್ಣ ಸಸಿಯಾಯಿತು. ಅದನ್ನು ಎಲ್ಲಿ ನೆಡಬೇಕೆಂದು ಪ್ರಶ್ನೆ ಉದ್ಭವಿಸಿತು. ಕೊನೆಗೆ ಎರಡು ವರ್ಷಗಳ ಹಿಂದೆ ಸೋದೆಯಲ್ಲಿ ಮಠದವರ ಒಪ್ಪಿಗೆಯಿಂದ ರಾಜರ ವೃಂದಾವನ ಹಾಗೂ ಅಶ್ವತ್ಥ ವೃಕ್ಷದ ಮಧ್ಯದಲ್ಲಿ ನೆಡಸಿದೆವು. ಅದು ಈಗ ಚೆನ್ನಾಗಿ ಬೆಳೆಯುತ್ತಿದೆ.

ನನ್ನ ಮಗಳು ಚಂದ್ರಿಕಾಳಿಗೆ ಮದುವೆಯಾಗಿ ಹನ್ನೆರಡು ವರ್ಷಗಳಾದರೂ ಸಂತಾನ ಪ್ರಾಪ್ತವಾಗಿಲ್ಲದ್ದು ಎಲ್ಲರಿಗೂ ಚಿಂತೆಯಾಗಿತ್ತು. ಯಾತ್ರೆ, ವೃತ, ಉಪವಾಸ, ಹೋಮ ಹವನ, ಹಾಗೂ ಔಷಧೋಪಚಾರ ಮಾಡಿದರೂ ಏನು ಫಲ ನೀಡಲಿಲ್ಲ.

ಕ್ರಿ.ಶ. ೨೦೦೬ರಲ್ಲಿ ಮಗಳು ಅಳಿಯ ದಂಪತಿಗಳು ಸೋದೆಗೆ ಹೋಗಿ ನಿಯಮಬದ್ಧರಾಗಿ ಸೇವೆ ಮಾಡಿ ಶ್ರೀ ಶ್ರೀ ವಿಶ್ವೋತ್ತಮ ತೀರ್ಥರಿಗೆ ಪಾದಪೂಜೆ ಮಾಡಲು ಶ್ರೀ ಪಾದಂಗಳವರು ಫಲ ಮಂತ್ರಾಕ್ಷತೆ ನೀಡಿ, ಒಂದು ಪುಸ್ತಕದಲ್ಲಿ ಪ್ರತಿದಿನ ಸ್ವಾಪ್ನವೃಂದಾವನಾಖ್ಯಾನ ಬರೆಯುವಂತೆ ಸೂಚಿಸಿದರು. ಬೆಂಗಳೂರಿಗೆ ಬಂದ ನಂತರ ನನ್ನ ಮಗಳು, ಅಳಿಯ ಇಬ್ಬರೂ ಪ್ರತಿನಿತ್ಯ ಸ್ವಾಪ್ನ ವೃಂದಾವನಾಖ್ಯಾನವನ್ನು ಬರೆದು ಪಾರಾಯಣ ಮಾಡಲು ಪ್ರಾರಂಭಿಸಿದರು. ಆರು ತಿಂಗಳಲ್ಲಿ ನನ್ನ ಮಗಳು ಗರ್ಭಿಣಿಯಾದಳು (ಈಗ ಎರಡು ಹೆಣ್ಣುಮಕ್ಕಳ ತಾಯಿಯಾಗಿದ್ದಾಳೆ).

ದಿನಾಂಕ ೨೫-೪-೨೦೦೭ ರಂದು ನನ್ನ ಮಗಳ ಮನೆಯವರು ರಾಜಾಜಿನಗರ ತಮ್ಮ ಸ್ವಗೃಹದಲ್ಲಿ ಶ್ರೀ ಶ್ರೀ ವಿಶ್ವೋತ್ತಮ ತೀರ್ಥರಿಗೆ ಪಾದಪೂಜೆ ಮಾಡಿದರು. ಆ ಸಂದರ್ಭದಲ್ಲಿ ನನ್ನ ಮಗಳು ಗರ್ಭಿಣಿಯಾಗಿರುವ ವಿಷಯ ತಿಳಿದು ಸಂತೋಷಪಟ್ಟರು.

ಆ ಸಂದರ್ಭದಲ್ಲಿ ನಾನು ಶ್ರೀಗಳವರಿಗೆ ಎರಡು ವರ್ಷಗಳ ಹಿಂದೆ ನನ್ನ ಮಗ ಸೊಸೆಗೆ ಪ್ರಸಾದರೂಪವಾಗಿ ಕೊಟ್ಟು ಕಾಯಿ ಮೊಳಕೆ ಒಡೆದು ಸಸಿಯಾದ ವಿಷಯ ತಿಳಿಸಿದಾಗ ಶ್ರೀಗಳವರು, ನಿಮ್ಮ ಮಗಳು ಗರ್ಭಿಣಿಯಾಗುವ ಮುನ್ಸೂಚನೆ ಅದಾಗಿತ್ತು. ಎಂಬುದಾಗಿ ಹೇಳಿ ಮಂತ್ರಾಕ್ಷತೆ ನೀಡಿ ಆಶೀರ್ವದಿಸಿದರು.

ಅಂದು ಅವರ ಅಮೃತಹಸ್ತದಿಂದ ಸ್ವೀಕರಿಸಿದ ಫಲ ಮಂತ್ರಾಕ್ಷತೆಯೇ ನಮ್ಮ ಪಾಲಿಗೆ ಕೊನೆಯದಾಗಿತ್ತು. ಇಂದು ಶ್ರೀಗಳವರು ನಮ್ಮ ನಡುವೆ ಇಲ್ಲ. ಆದರೆ ಅವರ ನೆನಪು ನಮ್ಮ ಚಿತ್ತದಲ್ಲಿ ಸದಾ ಹಸಿರಾಗಿರುತ್ತದೆ.

**ಜ್ಞಾನಭಕ್ತಿ ತಪೋ ವಿದ್ಯಾ ಕ್ಷಮಾದಿ ಸದ್ಗುಣೌಘರಾನಹಂ ।**
**ಶ್ರೀ ವಿಶ್ವೋತ್ತಮತೀರ್ಥಗುರುಂ ವಂದೇ ವಾದಿರಾಜ ಪದಾಶ್ರಯಾನ್ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

## ಈ ತನಕ 30 ಸುತ್ತು ಪರ್ಯಾಯ
## ನಡೆದ ಸಂವತ್ಸರಗಳು
### ಈಗ 31ನೇ ಸುತ್ತಿನ ಪರ್ಯಾಯ ನಡೆಯುತ್ತಿದೆ.

| | ಪಲಿಮಾರು ಮಠ | ಅದಮಾರು ಮಠ | ಕೃಷ್ಣಾಪುರ ಮಠ | ಪುತ್ತಿಗೆ ಮಠ | ಶೀರೂರು ಮಠ | ಸೋದೆ ಮಠ | ಕಾಣಿಯೂರು ಮಠ | ಪೇಜಾವರ ಮಠ |
|---|---|---|---|---|---|---|---|---|
| 1. | 1522 | 1524 | 1526 | 1528 | 1530 | 1532 | 1534 | 1536 |
| 2. | 1538 | 1540 | 1542 | 1544 | 1546 | 1548 | 1550 | 1552 |
| 3. | 1554 | 1556 | 1558 | 1560 | 1562 | 1564 | 1566 | 1568 |
| 4. | 1570 | 1572 | 1574 | 1576 | 1578 | 1580 | 1582 | 1584 |
| 5. | 1586 | 1588 | 1590 | 1592 | 1594 | 1596 | 1598 | 1600 |
| 6. | 1602 | 1604 | 1606 | 1608 | 1610 | 1612 | 1614 | 1616 |
| 7. | 1618 | 1620 | 1622 | 1624 | 1626 | 1628 | 1630 | 1632 |
| 8. | 1634 | 1636 | 1638 | 1640 | 1642 | 1644 | 1646 | 1648 |
| 9. | 1650 | 1652 | 1654 | 1656 | 1658 | 1660 | 1662 | 1664 |
| 10. | 1666 | 1668 | 1670 | 1672 | 1674 | 1676 | 1678 | 1680 |
| 11. | 1682 | 1684 | 1686 | 1688 | 1690 | 1692 | 1694 | 1696 |
| 12. | 1698 | 1700 | 1702 | 1704 | 1706 | 1708 | 1710 | 1712 |
| 13. | 1714 | 1716 | 1718 | 1720 | 1722 | 1724 | 1726 | 1728 |
| 14. | 1730 | 1732 | 1734 | 1736 | 1738 | 1740 | 1742 | 1744 |
| 15. | 1746 | 1748 | 1750 | 1752 | 1754 | 1756 | 1758 | 1760 |
| 16. | 1762 | 1764 | 1766 | 1768 | 1770 | 1772 | 1774 | 1776 |
| 17. | 1778 | 1780 | 1782 | 1784 | 1786 | 1788 | 1790 | 1792 |
| 18. | 1794 | 1796 | 1798 | 1800 | 1802 | 1804 | 1806 | 1808 |
| 19. | 1810 | 1812 | 1814 | 1816 | 1818 | 1820 | 1822 | 1824 |
| 20. | 1826 | 1828 | 1830 | 1832 | 1834 | 1836 | 1838 | 1840 |
| 21. | 1842 | 1844 | 1846 | 1848 | 1850 | 1852 | 1854 | 1856 |
| 22. | 1858 | 1860 | 1862 | 1864 | 1866 | 1868 | 1870 | 1872 |
| 23. | 1874 | 1876 | 1878 | 1880 | 1882 | 1884 | 1886 | 1888 |
| 24. | 1890 | 1892 | 1894 | 1896 | 1898 | 1900 | 1902 | 1904 |
| 25. | 1906 | 1908 | 1910 | 1912 | 1914 | 1916 | 1918 | 1920 |
| 26. | 1922 | 1924 | 1926 | 1928 | 1930 | 1932 | 1934 | 1936 |
| 27. | 1938 | 1940 | 1942 | 1944 | 1946 | 1948 | 1950 | 1952 |
| 28. | 1954 | 1956 | 1958 | 1960 | 1962 | 1964 | 1966 | 1968 |
| 29. | 1970 | 1972 | 1974 | 1976 | 1978 | 1980 | 1982 | 1984 |
| 30 | 1986 | 1988 | 1990 | 1992 | 1994 | 1996 | 1998 | 2000 |
| 31. | 2002 | 2004 | 2006 | 2008 | 2010 | 2012 | 2014 | 2016 |

# ಪರಿಶಿಷ್ಟ – ೧

ಬಾಲಕ ಮಾಧವ (ಭಾವಿ ವಿಶ್ವೋತ್ತಮ ತೀರ್ಥರ) ಜನ್ಮ ಕುಂಡಲಿ

ದಿನಾಂಕ : ೧೩–೧–೧೯೩೪ ಸಮಯ : ದಿವಾ ೧೨.೩೦ ಘಂಟೆ

ತಿಥಿ : ತ್ರಯೋದಶಿ ನಕ್ಷತ್ರ : ಜ್ಯೇಷ್ಠಾ

ವಾಸರ : ಸ್ಥಿರವಾಸರ ಸ್ಥಳ : ಉಡುಪಿ

| | | | |
|---|---|---|---|
| | ಲಗ್ನ | | |
| ಶುಕ್ರ | ಜನ್ಮ ಕುಂಡಲಿ | | ಕೇತು |
| ಕುಜ<br>ಶನಿ<br>ರಾಹು | | | |
| ರವಿ<br>ಬುಧ | ಚಂದ್ರ | | ಗುರು |

| | | | |
|---|---|---|---|
| ಚಂದ್ರ | ಲಗ್ನ | | ಕುಜ |
| ಕೇತು | ಜನ್ಮ ಕುಂಡಲಿ | | ಶನಿ |
| | | | ರಾಹು |
| ರವಿ | ಬುಧ | ಶುಕ್ರ | ಗುರು |

## ಪರಿಶಿಷ್ಟ – ೨

**ಉಡುಪಿ ಶ್ರೀ ಕೃಷ್ಣಧ್ಯಾನಮ್ :** ಧ್ಯಾಯೇದಿಂದೀವರಾಭಂ ನಿಜಕರ ಕಮಲೇ ದಕ್ಷಿಣೇ ದಂಡಮಗ್ರ್ಯಂ ಸವ್ಯೇ ಪಾಶಂದಧಾನಂ ಜಘನತಟಗತೇ ರೂಪ್ಯಪೀಠಾಲಯಸ್ಥಮ್ ! ಕಾಂಚೀಗ್ರೈವೇಯಹಾರಾಂಗದಕಟಕಕಿರೀಟಾಂಗುಲೀಯಾಂಘ್ರಿಭೂಷಾಕರ್ಣಾಕಲ್ಪೋ ಜ್ಜ್ವಲಾಂಗಂ ಯದುಕುಲತಿಲಕಂ ಕೃಷ್ಣಮಿಷ್ಟಾರ್ಥಸಿದ್ಧ್ಯೈ ॥ ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್ । ಶಿಖಾಬಂಧತ್ರಯೋಪೇತಂ ಭೈಷ್ಮೀಮಧ್ವಕರಾರ್ಚಿತಮ್ ॥

### ಶ್ರೀಸೋದಾಕ್ಷೇತ್ರ ಸನ್ನಿಹಿತ ಶ್ರೀಹರಿಗುರುದೇವತಾಸ್ತುತಿಪರ ಶ್ಲೋಕಗಳು :

**ಶ್ರೀತ್ರೀವಿಕ್ರಮಸ್ತುತಿಃ :**

ತ್ರಿವಿಕ್ರಮಂ ರಮ್ಯಗದಾರಿಶಂಖ – ಸರೋಜಮಾಲಾಧರಮಿಂದುವರ್ಣಮ್ ।
ಮನೋಹರಾಂಗಂ ಯತಿವಾದಿರಾಜ ಪ್ರತಿಷ್ಠಿತಂ ನೌಮಿ ಸದಾ ಪ್ರಸನ್ನಮ್ ॥

**ವೃಂದಾವನಸ್ಥಹಯಗ್ರೀವಾದಿಸ್ತುತಿಃ :**

ವಂದೇಽರವಿಂದನಯನಂ ಮದನಾಭಿರಾಮಂ
ಮಂದಾಕಿನೀಧರಮುಖ್ಯೈಃ ತ್ರಿದಶೈಃ ಸುವಂದ್ಯಮ್ ।

ವೃಂದಾವನೇ ಚ ಕೃತಮಂದಿರಮಪ್ರಮೇಯಂ
ಮಂದಾರಭೂಮಿಜಧರಂ ಹಯಶೀರ್ಷಮಾದ್ಯಮ್ ॥

ಅತ್ಯದ್ಭುತಾಕಾರಮೂರ್ತೇ ಪ್ರತ್ಯಯಾನಂತಸದ್ಗುಣ ।
ದೃಪ್ತದಾನವವಿಧ್ವಂಸಿನ್ ಮರ್ತ್ಯಸಿಂಹ ನಮೋ ನಮಃ॥

ಹಯಗ್ರೀವಂ ಚಿದಾನಂದವಿಗ್ರಹಂ ಸದನುಗ್ರಹಂ ।
ದಶಗ್ರೀವಚ್ಛಿದಂ ಶಾಪಾನ್ಮಣಿಗ್ರೀವವಿಮೋಚನಮ್ ॥

ಸುಗ್ರೀವಾಭಯದಂ ಸಮ್ಯಕ್ ಉಗ್ರಸೇನವಿಭೂತಿದಂ ।
ಉಗ್ರವಿಗ್ರಹಹಂತಾರಂ ಭಕ್ತಾಭಯಕರಗ್ರಹಮ್ ॥

ಸ್ವನಾಮಗ್ರಹಣಾದೇವ ನಿರಸ್ತಗ್ರಹವಿಗ್ರಹಂ ।
ವೃಂದಾವನಗತಂ ವಂದೇ ಬ್ರಹ್ಮರುದ್ರೇಂದ್ರವಂದಿತಮ್ ॥

ಸೀತಾಕಾಂತಂ ಶ್ರೀಹನೋಮತ್ತ್ರಸೇವ್ಯಂ
ಭೈಷ್ಮೀನಾಥಂ ದ್ರೌಪದೀಶರ್ಾರ್ಚಿತಾಂಘ್ರಿಂ ।

ವಿದ್ಯಾಧೀಶಂ ಮೋದತೀರ್ಥಾನುಚಿಂತ್ಯಂ
ವಂದೇಽಶ್ವಾಖ್ಯಂ ವಾದಿರಾಜೇಡ್ಯಪಾದಂ ॥

ಪಂಚವೃಂದಾವನೇ ಪುಣ್ಯೇ ಪಂಚರೂಪಾತ್ಮಕೋ ಹರಿಃ ।
ಪಂಚೀಕೃತ್ಯಸ್ವರೂಪಾಣಿ ನಿತ್ಯಂ ಸನ್ನಿಹಿತಃ ಸ್ವಯಂ ॥

**ಶ್ರೀ ಕೃಷ್ಣಸ್ತೋತ್ರಂ :**

ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ ।
ನಾಥಾಯ ರುಕ್ಮಿಣೀಶಾಯ ನಮೋ ವೇದಾಂತವೇದಿನೇ ॥

**ಶ್ರೀ ಭೂವರಾಹಸ್ತೋತ್ರಂ : –**

ಕೋಲಾಯ ಲಾರದಾಕಲ್ಪಜಾಲಯ ವನಮಾಲಿನೇ ।
ನೀಲಾಯ ನಿಜಭಕ್ತೌಘ ಪಾಲಾಯ ಹರಯೇ ನಮಃ ॥

**ಶ್ರೀಅಶ್ವತ್ಥನಾರಾಯಣಸ್ತೋತ್ರಂ :**

ಅಶ್ವತ್ಥದೇವ ಸಕಲೇಷ್ಟದ ದೇವದೇವ
ಭೂದೇವವಂದಿತಪದ ಪ್ರದದಾಸ್ಯಭೀಷ್ಟಂ ।
ವೇದೈಕವೇದ್ಯ ಸುಜನಾಬ್ಧಿಸುಪೂರ್ಣಚಂದ್ರ
ಭಕ್ತಾಭಯಪ್ರದ ಸುಪುತ್ರಮಪುತ್ರಿಣಾಂ ಚ ।

**ವ್ಯಾಸವರ್ಣನಮ್**

ವ್ಯಾಸಾಯಾಪ್ರತಿಮೇತಿಹಾಸರಚನೋಲ್ಲಾಸಾಯ ದುರ್ವಾದಿನಂ
ತ್ರಾಸಾಯಾಸಕರಾಯ ಸತ್ಸು ಕೃತ ವಿಶ್ವಾಸಾಯ ದೋಷದ್ವಿಷೇ ।
ಭಾಸಾ ಯಾಮುನರಮ್ಯ ತೋಯಸದೃಶಾಯಾಸಾಯಮಾಸೇವಿನೇ
ದಾಸಾಯಾಭಯದಾಯ ಮಧ್ವಗುರುಹೃದ್ವಾಸಾಯ ತುಭ್ಯಂ ನಮಃ ॥೧॥

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥೨॥

**ಶ್ರೀ ಲಕ್ಷ್ಮೀಸ್ತುತಿಃ :**

ಲಕ್ಷ್ಮೀಂ ಲಕ್ಷಣಸಂಪನ್ನಾಂ ಲಕ್ಷಣಾಗ್ರಜಕಾಂಕ್ಷಿಣೀಂ ।
ಲಕ್ಷಯಾಮಿ ಕ್ಷಣಂ ಲಕ್ಷವಿತ್ತದಾತ್ರೀಂ ಕಟಾಕ್ಷತಃ ॥

ಲಕ್ಷ್ಮೀಮಕ್ಷರಪಾದಾಬ್ಜಷಟ್ಪದಾಂ ಮಮ ಸೌಖ್ಯದಾಂ ।
ಗುರುರಾಜನುತಾಮಂಬಾಂ ಅರ್ಥಯೇ ಜ್ಞಾನದಾಯಿನೀಂ ॥

**ಶ್ರೀ ಹನುಮ – ಭೀಮ – ಮಧ್ವ – ವಾದಿರಾಜಸ್ತುತಿಃ :**

ಮತಿಮಂತಂ ಹನೂಮಂತಂ ಭೀಮಂ ಭೈಷ್ಮ್ಯಾಃಪತಿಪ್ರಿಯಂ ।
ಮಧ್ವಂ ಧ್ವಸ್ತಗುಣಾಭಾವಂ ಮಧುಹಂತುಃ ಪ್ರಿಯಂ ಭಜೇ ॥

(ವಾದಿರಾಜಂ)

ಗುರುಮಖಿಲಗುಣಜ್ಞಂ ಸದ್ಗುಣೈಕಾಧಿವಾಸಂ
ಶಮದಮಪರಿನಿಷ್ಠಂ ಸತ್ವನಿಷ್ಠಂ ವರಿಷ್ಠಮ್ ।
ಸಕಲಸುಜನಶಿಷ್ಟಂ ನಿತ್ಯನಿರ್ಧೂತಕಷ್ಟಂ
ಹಯಮುಖಪದನಿಷ್ಠಂ ಮಾಂ ಭಜಂತು ಪ್ರಪನ್ನಾಃ ॥

ಕೋಲವ್ಯಾಸಹಯಗ್ರೀವಪದಾಬ್ಜ ಪರಿಸೇವಕಃ ।
ಭಾವೀವಾಯುರ್ವಾದಿರಾಜಃ ಕಲ್ಪದ್ರುಃಕಾಮದೋಽಸ್ತುನಃ ।
ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ।
ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಃ ಸತಾಮ್ ॥

ಮಾತಾ ರಾಜಾ ಮತ್ಪಿತಾ ವಾದಿರಾಜಃ ,
ಭ್ರಾತಾ ರಾಜಾ ಮತ್ಸಖಾ ವಾದಿರಾಜಃ
ಸರ್ವಸ್ವಂ ಮೇ ವಾದಿರಾಜೋ ದಯಾಲುಃ
ನಾನ್ಯಂ ದೇವಂ ನೈನ ಜಾನೇ ನ ಜಾನೇ ॥

**ಶ್ರೀ ವೇದವೇದ್ಯತೀರ್ಥಸ್ತುತಿಃ :**

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವೇದವೇದ್ಯಶ್ರೀಪಾದೋಽಭೀಷ್ಟದಃ ಸತಾಮ್ ।

**ವೃಂದಾವನಸ್ಥಸಕಲದೇವತಾಸ್ತುತಿಃ :**

ವೃಂದಾರಕಾಣಾಂ ಭವ್ಯಾನಾಂ ವೃಂದಂ ವೃಂದಾವನೇ ಗತಂ ।
ಯಾಚೇ ಧೀನಿರ್ಮಲಂ ಸೋದಾಪುರವಾಸಸುಸೇವಕಂ ॥

**ಶ್ರೀ ವೇದನಿಧಿಗುರುಸ್ತುತಿಃ :**

ಯೇನ ಶ್ರೀವಾದಿರಾಜಸ್ಯ ಋಜುತಾ ಸ್ಫುಟತಾ ಗತಾ ।
ಸ್ವಾಪ್ನಾಖ್ಯಾನಗತಾಽದೇಶ್ಯೈಃ ಗುರುಂ ವೇದನಿಧಿಂ ಭಜೇ ॥

**ಶ್ರೀ ಶೇಷದೇವರಸ್ತೋತ್ರ ॥**

ನಾಗ ನಾಗೇಂದ್ರಶಯನಂ ನಾಗಾನಾಮಧಿಪ ಪ್ರಭೋ ।
ಆಗಮಸ್ತುತಚಾರಿತ್ರ ಯೋಗೀಂದ್ರಪ್ರಿಯ ದರ್ಶಯ ॥

**ಶ್ರೀ ಮಹರುದ್ರದೇವರಸ್ತೋತ್ರ ॥**

ಗಂಗಾಧರೋ ಮಂಗಲನಾಮ ಮೂರ್ಧ್ನಿ
ಧ್ಯಾನಾಂತರಂಗೀ ಸರ್ವಲಿಂಗಾತರಸ್ಥ ।

ಉತ್ತುಂಗಕೈಲಾಸಕೃತಾಂಗವಾಸೋ
ನಿಸ್ಸಂಗಿನಂ ಮಾಂ ಸಮುಪಾಜಗಾಮ ॥
ಗಿರೀಂದ್ರವಾಸ ಗೌರೀಶ ಪುರನಾಶ ಸತಾಂ ವಶ ।
ಫಣೀಂದ್ರಭೂಷ ನಿರ್ದೋಷ ಮಮ ತೋಷಕರೋ ಭವ ॥

**ಶ್ರೀ ಭೂತರಾಜಸ್ತುತಿಃ ॥**

ಗಣೈಃಸ ನಾರಾಯಣಭೂತನಾಥಃ
ಸಮನ್ವಿತಃ ಕರ್ಣವಿಕರ್ಣಸಂಜ್ಞೈಃ ।
ಮಹಮಣೀನಾಂ ಬಹುಲೈಃ ಸುಕೀರ್ಣ
ಮೌಲಿಂ ದದೌ ಮೇ ಶಿರಸಿ ಸ್ಥಿತೋಽಭೂತ್ ॥

ಭೂತರಾಜ ನಮಸ್ತುಭ್ಯಂ ವಾದಿರಾಜಗುರೋಃಪ್ರಿಯ ।
ವಿದ್ರಾವ್ಯ ಸರ್ವಬಾಧಾಂ ನಃ ಸದಾ ತ್ವಂ ರಕ್ಷಣಂ ಕುರು ॥

**ಶ್ರೀ ವೃಂದಾವನಚಾರ್ಯಸ್ತುತಿಃ ॥**

ವಾದಿರಾಜಸದೋಪಾಸ್ಯಹಯಗ್ರೀವಪದಾನುಗಾನ್ ।
ವಂದೇ ವೃಂದಾವನಾಚಾರ್ಯನ್ ವಿಶ್ವಪ್ರಿಯಗುರೂನ್ ಮುದಾ ॥

**ಶ್ರೀ ಧವಲಗಂಗಾಸ್ತೋತ್ರ ॥**

ಗಂಗಾ ಸುಮಂಗಲತರಂಗವತೀ ಸ್ವಭಕ್ತ –
ಪಾಪೌಘಭಂಗಕರಿಣೀ ತರಿಣೀ ಭವಾಬ್ಧೇಃ ।
ಸಾ ಮಾನಿನೀ ಪರಮಪಾವನಪಾವನೀ ಚ
ವೃಂದಾವನಸ್ಯ ಮಮ ಪಶ್ಚಿಮಗಾ ವಿಭಾತಿ ॥

**ಶ್ರೀ ವಿಶ್ವೋತ್ತಮತೀರ್ಥಸ್ತುತಿ ॥**

ಕೋಲವ್ಯಾಸ ಹಯಗ್ರೀವ ಪದಕಂಜ ಮಧುವ್ರತಮ್
ಶ್ರೀ ವಿಶ್ವೋತ್ತಮಯೋಗೀಂದ್ರಂ ವಂದೇಽಹಂ ವಾದಿರಾಟ್ ಪ್ರೀಯಮ್ ॥

## ೧. ಅಣುವೃಂದಾವನಾಖ್ಯಾನಮ್

ಹಯಗ್ರೀವಂ ಚಿದಾನಂದವಿಗ್ರಹಂ ಸದನುಗ್ರಹಮ್ ।
ದಶಗ್ರೀವಚ್ಛಿದಂ ಶಾಪಾನ್ಮಣಿಗ್ರೀವವಿಮೋಚನಮ್ ॥ ೧ ॥

ಸ್ವನಾಮಗ್ರಹಣಾದೇವ ನಿರಸ್ತಗ್ರಹವಿಗ್ರಹಮ್ ।
ವೃಂದಾವನಗತಂ ವಂದೇ ಬ್ರಹ್ಮರುದ್ರೇಂದ್ರವಂದಿತಮ್ ॥೨॥

ಯೋ ಮಾಂ ದೇವಂ ವಿಜಾನಾತಿ ಋಜುಸ್ಥಂ ಪುಣ್ಯಕೃನ್ನರಃ ।
ಸ ಯಾತಿ ನಿಲಯಂ ಪುಣ್ಯಂ ಯದ್ಗತ್ವಾನ ನಿವರ್ತತೇ ॥ ೩ ॥

ಶ್ರೀ ಶ್ರೀ ವಿಶ್ವೋತ್ತಮತೀರ್ಥರು / ೧೪೧

ವಿಮಾನಂ ದಿವ್ಯಮಾನಂ ಚ ದೀಪ್ಯಮಾನಂ ಸದಾಯನಮ್ ।
ವೃಂದಾವನೋಪರಿಗತಂ ಪೂಜಯಂತು ಸದಾ ಮಮ ॥ ೪ ॥

ಪಂಚವೃಂದಾವನೇ ಪುಣ್ಯೇ ಪಂಚರೂಪಾತ್ಮಕೋ ಹರಿಃ ।
ಪಂಚೀಕೃತ್ಯ ಸ್ವರೂಪಾಣಿ ನಿತ್ಯಂ ಸನ್ನಿಹಿತಃ ಸ್ವಯಮ್ ॥ ೫ ॥

ಅಹಂ ಬ್ರಹ್ಮಾಚ ವಾಯುಶ್ಚ ವಿಷ್ಣೂ ರುದ್ರಶ್ಚ ಪಂಚಮಃ ।
ರಮಾಮಾ ನಿತ್ಯಮೇವಾತ್ರ ಶ್ವೇತದ್ವೀಪೇ ಯಥಾ ವಯಮ್ ॥ ೬ ॥

ಅಹಂ ಸದಾ ದೇವಸಭಾಸಭಾಜಿತಃ ಸುಭಾಸ್ವರೈರ್ದಿವ್ಯವಿಭೂಷಣೈರ್ಯುತಃ
ಅಹಂಸಮಾನ್ಯೈಃ ಸುರಮಾನಮಾನಿತಃ ಸುಮಾನಯುಕ್ತೈಃ ಸುಮನೋಭಿರಂಜಸಾ ॥೭॥

ಗುರುಮಖಿಲಗುಣಜ್ಞಂ ಸದ್ಗುಣೈಕಾಧಿವಾಸಂ ಶಮದಮಪರಿನಿಷ್ಠಂ ಸತ್ತ್ವನಿಷ್ಠಂ ವರಿಷ್ಠಮ್ ।
ಸಕಲಸುಜನಶಿಷ್ಟಂ ನಿತ್ಯನಿರ್ಧೂತಕಷ್ಟಂ ಹಯಮುಖಪದನಿಷ್ಠಂ ಮಾಂ ಭಜಂತು ಪ್ರಪನ್ನಾಃ ॥೮॥

ತೀರ್ಥಾನಾಮುತ್ತಮಂ ತೀರ್ಥಂ ವನಾನಾಮುತ್ತಮಂ ವನಮ್ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮಮ ವೃಂದಾವನಂ ದ್ವಿಜ ॥೯॥

ತಸ್ಮಾದ್ವೃಂದಾವನಮಿದಂ ಸರ್ವಾಭೀಷ್ಟಪ್ರದಂ ಸತಾಮ್ ।
ಪಂಚವೃಂದಾವನೇ ಪುಣ್ಯೇ ಸುಪರ್ವಾಣಶ್ಚ ಸರ್ವದಾ ॥೧೦ ॥

ವಸಂತಿ ಪುಣ್ಯಕರ್ಮಾಣೋ ವಿಶೇಷಾತ್ತೇ ಚ ಪರ್ವಸು ।
ಪಂಚಮ್ಯಾಂ ಚ ತಿಥೌ ನಿತ್ಯಂ ಪಂಚಪರ್ವಸು ಪೂಜಯೇತ್ ॥೧೧॥

ಧೂಪೈರ್ದೀಪೈಸ್ತಥಾಮಾಲ್ಯೈರ್ಗಂಧೈರ್ದೂರ್ಕ್ಷತಾದಿಭಿಃ ।
ಪಂಚಭಕ್ಷ ಸಮಾಯುಕ್ತಂ ಪಂಚಾಮೃತಸಮನ್ವಿತಮ್ ॥ ೧೨ ॥

ಪಂಚಖರ್ಜೂರರಸಯುಕ್ತಂ ನೈವೇದ್ಯಂ ವಿನಿವೇದಯೇತ್ ।
ಏವಂ ಸಂಪೂಜ್ಯಮಾನೋಽಹಂ ದದ್ಯಾಂ ವರಮನುತ್ತಮಮ್ ॥೧೩॥

ತಸ್ಮಾದ್ವೃಂದಾವನೇ ಪುಣ್ಯೇ ಪಂಚಪರ್ವಸುಪೂಜನಮ್ ।
ದರ್ಶನಂ ಸುಜನಾನಾಂ ತು ಸರ್ವಾಘೌಘವಿನಾಶನಮ್ ॥೧೪॥

ವಾದಿರಾಜಾಖ್ಯಯತಿನಾ ಬ್ರಾಹ್ಮಣಸ್ವಾಪ್ನಮೂರ್ತಿನಾ ।
ಕೃತಂ ವೃಂದಾವನಾಖ್ಯಾನಂ ಪಠತಾಂ ಸಂಪದಾಂಪದಮ್ ॥೧೫॥

ವೇದನಿಧ್ಯಾಖ್ಯಯತಿನಾ ವಾದಿರಾಜೇನ ಚೋದಿತಮ್ ।
ಸ್ವಾಪ್ನಂ ವೃಂದಾವನಾಖ್ಯಾನಂ ಲಿಖಿತಂ ಪ್ರೀತಯೇ ಗುರೋಃ ॥೧೬॥

ಮಾತಾ ರಾಜಾ ಮತ್ಪಿತಾ ವಾದಿರಾಜೋ ಭ್ರಾತಾ ರಾಜಾ ಮತ್ಸಖಾ ವಾದಿರಾಜಃ ।
ಸರ್ವಸ್ವಂ ಮೇ ವಾದಿರಾಜೋ ದಯಾಲುರ್ನಾನ್ಯದ್ದೈವಂ ನೈವ ಜಾನೇ ನ ಜಾನೇ ॥೧೭॥

೧೪೨ / ಶ್ರೀ ಶ್ರೀ ವಿಶ್ವೋತ್ತಮತೀರ್ಥರು

ಹರಿಭಕ್ತಿದಯಾಂಭೋಧಿ ತರಲಕ್ರೀಡನೋತ್ಸುಕಾಃ ।
ಗುರುವ್ಯೋ ವಾದಿರಾಜಾರ್ಯಾಃ ಕರುಣಾಂ ವಿತರಂತು ಮೇ ॥೧೮॥

ಇತ್ಯಣುವೃಂದಾವನಾಖ್ಯಾನಂ ಸಂಪೂರ್ಣಮ್

## ೬೫. ಗಂಗಾಸ್ತೋತ್ರಂ

ತ್ವಂ ದೀನೇಷು ದಯಾವತೀತಿ ವಿದಿತಂ ಯದ್ ಬ್ರಹ್ಮಹಸ್ತಾಶ್ರಯಮ್
ಪ್ರಾಪ್ತಾಽಥಾಚ್ಯುತಪಾದಸಂಗಮಹಿತಾ ಪಶ್ಚಾಚ್ಚನಾಕಂ ಶ್ರಿತಾ ॥
ಸೌವರ್ಣಾಚಲಶೃಂಗಮೇತ್ಯ ಮುದಿತಾ ಶಂಭೋಃ ಶಿರಃಸಂಗತಾಽಽ –
ಪ್ಯಾಸ್ಮಾಕಕ್ಷಿತಿಮಂಡಲೇ ತ್ರಿ ಪಥಗೇ ತುಷ್ಟಾಸ್ಯಭೀಷ್ಟಪ್ರದಾ ॥ ೧ ॥

ಆದೌ ಪಾದತಲೋರ್ಧ್ವಭಾಗಮಹಸಾ ಯಾ ರಕ್ತ ನೀಲಾ ಹರೇಃ
ಸ್ವರ್ಗಸ್ತ್ರೀಕುಚಕುಂಕುಮಾಂಕನಯನೋಪಾಂತಶ್ರಿ ಯಾಽಭ್ಯಂತರೇ ।
ಅಂತೇ ಶಂಭುಕಪರ್ದಪನ್ನಗಗಲಶ್ರೇಣೀಜ್ವಲಜ್ಜ್ಯೋತಿಷಾ
ಜನ್ಮಾರಭ್ಯ ಸರಸ್ವತೀನತನಯಾಸಂಗೇವ ಗಂಗಾಽಸ್ತಿ ಸಾ ॥೨॥

ಅಜ್ಞಾನಾದ್ಯದಿ ಸಜ್ಜನೇಷು ರಚಿತದ್ರೋಹಾನ್ಮಯಿ ಸ್ವರ್ಧುನಿ
ಸ್ವಸ್ಫೂರ್ತ್ಯಾ ಸುಜನೇಷು ದೂಷಣಗಣಾರೋಪಾದವಜ್ಞಾ ತವ।
ತರ್ಹಿ ತ್ವಾಂ ಸಗರಾತ್ಮಜಾಸ್ಥಿನಿಕರಾ ಜಾನಂತಿ ಕಿಂ ತೈಃ ಪ್ರಭೋಃ
ದ್ರೋಹಃ ಕಿಂ ನ ಕೃತಂ ಕಿಮಂಬ ನ ಹರಾವಾರೋಪಿತಾ ಚೋರತಾ ॥೩॥

ಆರಭ್ಯಾಬ್ಜಜಲೋಕಮಾಕ್ಷಿತಿತಲಾದಾಯಾತಯಾ ಕಿಂ ತ್ವಯಾ
ಮಚ್ಚಿತ್ತಂ ಬಹುದೂರಮಿತ್ಯಬಲಯಾ ತ್ಯಕ್ತಂ ಭಿಯಾ ಜಾಹ್ನವಿ ।
ಅಕ್ಷಯ್ಯಾಚಲತುಂಗಶೃಂಗನಿಕರಾನ್ನಿರ್ಭಿದ್ಯ ಯಾಂತೀ ಮಮ
ಸ್ವಲ್ಪಂ ಕಿಂ ಬಹುಮನ್ಯಸೇ ಶುಭಕುಲಂ ಗಂಗೇಽಂತರಂಗೇ ಚಲಮ್ ॥೪॥

ಅಸ್ಥಿಸ್ಪರ್ಶನಮಾತ್ರತಃ ಕಿಲ ತವ ಶ್ರೇಯಃಪ್ರದತ್ವಂ ಗತಂ
ವಿಸ್ತೀರ್ಣಾನ ಕಿಮಚ್ಯುತಸ್ಯ ನಗರೀ ಮನ್ಮಾತ್ರದೇಶೋಜ್ಝಿತಾ।
ತದ್ವಾರ್ತ್ತಾಽಪಿ ಸಕಂಟಕಂ ಕಿಮು ಸತಾಂ ಸಂತಾನಜೋಽಹಂ ನ ಕಿಂ
ಕಸ್ಮಾದಂಬ ನ ಮೇ ಪ್ರದಾಸ್ಯಸಿ ಪದಂ ಗಂಗೇಽಖಿಲಾರ್ಥಪ್ರದಮ್ ॥೫॥

ಹೇ ಗಂಗೇ ತವ ಕೋಮಲಾಂಘ್ರಿನಲಿನಂ ರಂಭೋರುನೀವೀಲಸತ್
ಕಾಂಚೀದಾಮತನೂದರಂ ಘನಕುಚವ್ಯಾಕೀರ್ಣಹಾರಂ ವಪುಃ ।
ಸನ್ಮುದ್ರಾಂಗದಕಂಕಣಾದ್ಯತಕರಂ ಸ್ಮೇರಂ ಸ್ಫುರತ್ಕುಂಡಲಂ
ಸಾರಂಗಾಂಕ್ಷಿ ಜಲಾನ್ಯದಿಂದುರುಚಿ ಯೇ ಜಾನಂತಿ ತೇಽನ್ಯೇ ಜಲಾತ್ ॥೬॥

ಶ್ರೀನಾರಾಯಣರಾಮಗೋಪತಿಹೃಷೀಕೇಶಾದಿರೂಪೋಽಕ್ಷಮ –

ಸ್ತ್ವಾಂ ಪಾತುಂ ಹರಿಸೂಕರಾಕೃತಿರಥ ಶ್ರೀದೇವಹೂತ್ಯಾತ್ಮಜಃ ।
ವೇಣೀಮಾಧವ ಬಿಂದುಮಾಧವತನುಸ್ತೀರೇ ವ್ಯಧತ್ತ ಸ್ಥಿತಿಂ
ಗಂಗೇ ಕಿಂ ಬಹುನಾಽಧುನಾಽಪಿ ವಸತಿ ತ್ವದ್ ಭರ್ತೃಗೇಹೇಽಪ್ಯಸೌ ॥೭॥

ಗಂಗೇ ತ್ವಂ ಶುಭಸಂಚಯಸ್ಯ ಜಯದಾ ದೋಷಾತ್ಮನಾಮ ನ ತ್ವಿತಿ
ಜಾತಂ ಯತ್ ಕ್ರತುಕೋಟಿಲಭ್ಯಸುಕೃತಸ್ಯಾಭ್ಯುನ್ನತಿಂ ಯಚ್ಛಸಿ ।
ದುಷ್ಕರ್ಮಾಣ್ಯಮಿತಾನಿ ದೂರಯಸಿ ಯತ್ ತ್ವದ್ಗೇಯತೋಯೇಕ್ಷಯಾ
ಪಾನೇನಾಪ್ಯವಗಾಹನೇನ ಮನಸಾ ಧ್ಯಾನೇನ ಗಾನೇನ ವಾ ॥೮॥

॥ಇತಿ ಶ್ರೀಮದ್ವಾದಿರಾಜಪೂಜ್ಯಚರಣವಿರಚಿತಗಂಗಾಸ್ತೋತ್ರಮ್ ॥

## ಶಿಲಾನ್ಯಾಸ ವಿಜಯೋತ್ಸವ

ದೇವಹಯಮುಖ ಭಜಕವೃಂದದೊಳಗಪ್ರತಿಮ ಲಾತವ್ಯ ಋಜುಪ್ರಭುಗಳೂ ।
ಭವರೋಗ ದಾಟಿಸುವ ಗುರುಗಳೊಳಗುತ್ತಮರು ದೇವತಾ ಪೂಜ್ಯತಮರೂ ॥

ಹಂಸವಾಹನರೆಂದು ಪ್ರಖ್ಯಾತಿ ಪಡೆದಿಹರು ಕೃಷ್ಣನಾ ಪ್ರಿಯಭಕ್ತರೂ ।
ಅಂಜುವರಿಗಭಯವನು ಈಯುತ್ತ ಸಲಹುವರು ಮಂಗಳಾಮಹಿಮರಿವರೂ ॥೧॥

ಭಾವಿಸಲು ಯತಿಕುಲ ಕಮಲವ್ಯೂಹಕೆ ದ್ಯುಮಣಿ ಧ್ಯಾನಿಸೇ ಚಿಂತಾಮಣೀ ।
ಭಾವಿಪವಮಾನ ಶ್ರೀವಾದಿರಾಜರು ಜೀವಸಂಕುಲಕೆ ಚೂಡಾಮಣೀ ॥

ಅರವಿಂದನಾಭನನು ಅರವಿಂದಕರಗಳಿಂ ಪೂಜಿಸುವ ಋಜುವರ್ಯರೂ ।
ಅರವಿಂದನೇತ್ರನಾ ಸಚಿವಪದಕೈತರುವ ಯತಿಧರ್ಮಬೀಜರಿವರೂ ॥೨॥

ಪಂಚವೃಂದಾವನಾದಿ ನಿಂದು ಹರಿಯಾಜ್ಞೆಯಲಿ ವಿಪ್ರನಿಗೆ ಕನಸಿನಲ್ಲೀ ।
ಬಂದು ತಾ ಸ್ವಾಪ್ನವೃಂದಾವನಾಖ್ಯಾನವನು ಚಂದದಿಂ ಪೇಳಿಹರು ಕೇಳೀ ॥

ಅಂದದನು ಅಶ್ವಿನೀಪತಿ ಮೆಚ್ಚಿ ಮಾನಿಸಿದ ಶ್ರುತಿಯಸಾರವಿದೆಂದು ಪೊಗಳೀ ।
ಸಂತಸದಲದನಾಘ್ರಾಣಿಸುತ ಶಿರದಲ್ಲಿ ಧರಿಸಿದನು ಭಕುತರಿದ ಕೇಳೀ ॥೩॥

ರಾಜರಾ ಪೀಠದಲಿ ರಾರಾಜಿಸುತ್ತ ವಿಶ್ವೋತ್ತಮತೀರ್ಥರಿಂದೂ
ರಾಜಿಸುತ ಸೋದೆಯನು ವಿಶ್ವದೇ ಬೆಳಗಿಹರು ಉತ್ತಮ ಯತಿಗಳೆಂದೂ ॥

ವಿಮಲಮಂದಾಕಿನಿಯು ಹೊನ್ನೂರಿನಲಿ ಇವರ ಕರೆಗೋಡಿಬಂದಳಂತೇ ।
ಅಮಲಕೀರ್ತಿಯನಂದು ಪ್ರೀತಿಯಲಿ ಯತಿಗಳಿಗೆ ಧರೆಯಲ್ಲಿ ಇತ್ತಳಂತೇ ॥೪॥

ವಿಶ್ವೋತ್ತಮಯತಿಯು ವಿಪ್ರಗೃಹ ಸಂಪುಟದೆ ರಾಜರನು ಕಂಡಿರ್ಪರೂ ।
ವಿಶ್ವಪತಿಮೆಚ್ಚಲಾಖ್ಯಾನವನು ರಾಜರಾಜಣೆಯಂತೆ ಬರೆಸಿರ್ಪರೂ ॥

ವಿಶ್ವಕಚ್ಚರಿಯೆನಿಪ ಸ್ವಾಪ್ನವೃಂದಾವನಾಖ್ಯಾನ ಕೃತಿ ಕಂಗೊಳಿಸುತಾ ।
ಅಶ್ವಮುಖಭಜಕರಿಂ ಮೂಡಿತ್ತೈ ಶಿಲೆಯಲ್ಲಿ ಪೊನ್ನಂತೆ ಝುಗಝುಗಿಸುತಾ ॥೫॥

ಮೆರೆಯುತಿಹುದಷ್ಟಕೋನದ ದಿವ್ಯಮಂಟಪದಿ ಯತಿಸ್ವರ್ಣವರ್ಣರಿಂದಾ।
ಧರೆಯಲ್ಲಿ ಸ್ಥಿರವಾಗಿ ರೂಪುಗೊಂಡಿಹುದಿಂದು ಬಹುಪುಣ್ಯಪುರುಷರಿಂದಾ॥

ಭಕುತಜನವೃಂದಕ್ಕೆ ಆನಂದವೀಯುತ್ತ ನಮ್ಮ ಗುರುವರ್ಯರಿಂದೂ ।
ಯುಕುತಿಗೆಸದಳವಾದ ಪುಣ್ಯಭಾಜನರಾಗಿ ಭುವಿಯೊಳಗೆ ಮೆರೆವರೆಂದೂ ॥೬॥

ಕಲ್ಲಿನಲಿ ಹೊಳೆಯುತಿರೆ ಕನಕವರ್ಣದ ಲಿಪಿಯು ಸಹಸ್ರದಳ ಪದ್ಮದಂತೇ ।
ಬಲ್ಲವರು ಅರಿವಂತೆ ಸಾಸಿರಾ ನುಡಿಗಳಿಂ ಚೆನ್ನಾಗಿ ಬೆಳಗಿತಂತೇ ॥

ಫುಲ್ಲನಾಭನ ದಯದಿ ಈ ಮಂಗಳೋತ್ಸವವು ನಡೆದ ವೈಖರಿಯ ವಿಭವಾ ।
ಸಲ್ಲಲಿತ ದಿವಿಜರಲಿ ಬಲ್ಲಿದಾ ಭುವಿಜರಲಿ ಶೋಭಿಪಗೆ ವಿಜಯೋತ್ಸವಾ ॥೭॥

ಅಲ್ಲಲ್ಲಿ ಹರಿಕಥೆಯು ಅಲ್ಲಲ್ಲಿ ಹರಿನಾಮ ಅಲ್ಲಲ್ಲಿ ಶುಭಸಂಭ್ರಮಾ ।
ಅಲ್ಲಲ್ಲಿ ಸೌರಭದ ಹೂವಿನಾ ಶೃಂಗಾರ ಅಲ್ಲಲ್ಲಿ ಭಕುತಸ್ತೋಮಾ ॥

ಕಣ್ಮನಕೆ ಹಬ್ಬವನು ಈಯುತ್ತ ತಣಿಸುತಿದೆ ಈ ದಿವ್ಯಭವ್ಯನೋಟಾ ।
ಏನಪೇಳಲಿ ಭಕುತವೃಂದದಾ ಮನದಲ್ಲಿ ಬೆಳಗಿತ್ತೈ ನಂದದೀಪಾ ॥೮॥

ಸಂಭ್ರಮದ ನಾನ್ನೂರು ವರ್ಷ ವೃಂದಾವನದಿ ಕಳೆಯಿತ್ತೈ ರಾಜರಿದ್ದೂ ।
ಚಂದದಾ ದಿನದಲ್ಲಿ ಕಣ್ಗೆಸೆವ ದೃಶ್ಯದಿಂ ಸ್ವಪ್ನನುಡಿ ದಿಟವಾಯಿತಿಂದೂ ॥

ಭಾವಪೂರ್ವಕವಾಗಿ ನಡೆಸಿ ಈ ಉತ್ಸವ ವಿಶ್ವೋತ್ತಮತೀರ್ಥರಿಂದೂ ।
ಚಂದದಾ ದಿನದಲ್ಲಿ ಕಣ್ಗೆಸೆವ ದೃಶ್ಯದಿಂ ಸ್ವಪ್ನನುಡಿ ದಿಟವಾಯಿತಿಂದೂ ॥

ಭಾವಪೂರ್ವಕವಾಗಿ ನಡೆಸಿ ಈ ಉತ್ಸವ ವಿಶ್ವೋತ್ತಮತೀರ್ಥರಿಂದೂ ।
ಭಾವನ್ನೈಯ್ಯನ ಪ್ರೇಮ ಪಾತ್ರರಾಗುತ ಲೋಕವಿಖ್ಯಾತಿ ಪಡೆದರಿಂದೂ ॥ ೯ ॥

ಬಹುಜನ್ಮದಾ ಭಾಗ್ಯ ಸಮನಿಸಿದೆ ನಮಗಿಂದು ಪಾವನಾರಾದೆವಲ್ಲಾ ।
ಮಹಾತ್ಮರಹ ವಿಶ್ವೋತ್ತಮರ ಕೀರ್ತಿ ಎಲ್ಲೆಡೆಯು ಚೆನ್ನಾಗಿ ಬೆಳಗಿತಲ್ಲಾ ॥

ಮುನಿರಾಜರಾಶಯವು ನಡೆದ ಈ ಶುಭದಿನವು ಮಂಗಳಕೆ ಮಂಗಳವಲಾ ।
ಘನ್ನ ಸೌಂದರ್ಯಪುರಿ ಬೆಳಗುತಾ ವೈಕುಂಠಲೋಕ ತಾನಾಯಿತಲ್ಲಾ ॥೧೦॥

ಭಾವಿಸಮೀರ ಶ್ರೀವಾದಿರಾಜ ಗುರುಸಾರ್ವಭೌಮರ ಆರಾಧನಾ ಚತುಃಶತಮಾನೋತ್ಸವ
ಹಾಗೂ ಆಖ್ಯಾನಮಂದಿರ ಸಮರ್ಪಣೆಯ

ಸುಸಂದರ್ಭದಲ್ಲಿ ಶ್ರೀವಿಶ್ವೋತ್ತಮ ತೀರ್ಥಯತಿವರ್ಯರಲ್ಲಿ ಭಕ್ತಿಪೂರ್ವಕವಾಗಿ
ಸಮರ್ಪಿಸಿದ ಅಭಿನಂದನೆ

ಅಶ್ವಧಾಟಿಯಲ್ಲಿ ಬರೆದವರು : ಶ್ರೀಮತಿ ಶ್ಯಾಮಲಾದೇವಿ ನಾಗಭೂಷಣ ರಾವ್,
ತುಮಕೂರು

॥ ಶ್ರೀ ॥

# ಶ್ರೀ ವಿಶ್ವೋತ್ತಮತೀರ್ಥಸ್ತುತಿಕುಸುಮಾಂಜಲಿಃ

## ಸ್ತೋತಾ : ಆನಂದತೀರ್ಥಾಚಾರ್ಯಃ (ಆತ್ಮಕೂರು)

೧. ಶ್ರೀಮದಾನಂದತೀರ್ಥಶ್ರೀವಾದಿರಾಜಹೃದಬ್ಜಗಃ ।
ಇಂದಿರಾರಾಧ್ಯಪಾದಾಬ್ಜಃ ಪ್ರೀಯತಾಂ ಶ್ರೀಹಯಾನನಃ ॥

೨. ಸಂಸಾರೋದನ್ವದುತ್ತಾರಯಾನಪಾತ್ರಂ ಗುರೂರಸಮ್ ।
ಶ್ರೀ ವಿಶ್ವೋತ್ತಮಯೋಗೀಂದ್ರಃ ಸ್ವರ್ಣವರ್ಣಃ ಪುನಾತು ಮಾಮ್ ॥

೩. ಸ್ವಪ್ನಶಬ್ದೋದಿತಶ್ರೀಮದ್ವಾದಿರಾಜಮಠಾಧಿಪಃ ।
ಶ್ರೀಮಾನ್ ವಿಶ್ವೋತ್ತಮಾರ್ಯೋ ಮೇ ಸಂತಾಪಾನ್ ಹಂತು ಸಂತತಮ್ ।

೪. ವಿಶ್ವಾಧೀಶಕರಾಬ್ಜೋತ್ಥವಿಶ್ವೇಂದ್ರವರಪುತ್ರಕಮ್ ।
ವಿಶ್ವೋತ್ತಮಗುರುಂ ವಂದೇ ಸದಾ ಸೌಭಾಗ್ಯಭಾಗ್ಯದಮ್ ॥

೫. ಮಧ್ವಶಾಸ್ತ್ರಮಹಾಂಭೋಧಿಪಾರೋತ್ತೀರ್ಣಧಿಯೋ ವಿದಃ ।
ಪ್ರಣೌಮಿ ವೈಷ್ಣವಾನ್ ನಿತ್ಯಂ ವಿಶ್ವೋತ್ತಮಗುರೂನ್ ಯತೀನ್ ॥

೬. ರಮಾತ್ರಿವಿಕ್ರಮಕೃಷ್ಣಹಯಗ್ರೀವಪ್ರಸಾದತಃ ।
ಶ್ರೀಮಾನ್ ವಿಶ್ವೋತ್ತಮಾರ್ಯೋಽಸೌ ಪಾಯಾತ್ ಸ ಶರದಃಶತಮ್ ॥

೭. ಭೂವರಾಹಕೃಪಾಪಾತ್ರಂ ಸರ್ವಸಂಪತ್ಪ್ರದಾಯಕಮ್ ।
ಶ್ರೀವಿಶ್ವೋತ್ತಮಯೋಗೀಂದ್ರಂ ಪ್ರಣೌಮಿ ಮಧ್ವಕಿಂಕರಮ್ ॥

೮. ಶ್ರೀವಿಠ್ಠಲವ್ಯಾಸಮುಷ್ಟಿಕೃಷ್ಣಪೂಜಾಧುರಂಧರಮ್ ।
ತಂ ಬುಧಾನವರಂ ವಂದೇ ವಿಶ್ವೋತ್ತಮ ಯತೀಶ್ವರಮ್ ॥

೯. ಸರ್ವವೇದಾರ್ಥತತ್ತ್ವಜ್ಞಃ ಶಿಷ್ಟೋ ವಿಶ್ವೋತ್ತಮೋ ಮಹಾನ್ ।
ಶ್ರೀಮಧ್ವಾವಾದಿರಾಜೇಂದ್ರಸಮಪೂಜಾರತೋಽವತಾತ್॥

೧೦. ಯೋಽಶುಭಾನಿ ನಿರಾಚಷ್ಟೇ ತನೋತಿ ಶುಭಸಂತತಿಮ್ ।
ಬ್ರಹ್ಮತರ್ಕಾಧ್ವಗೋ ಧನ್ಯಃ ಸ ಶ್ರೀವಿಶ್ವೋತ್ತಮೋಽವತಾತ್॥

೧೧. ತತ್ತ್ವಪ್ರಕಾಶಿಕಾನ್ಯಾಯಸುಧಾವಾದಾವಲೀಸ್ತಥಾ।
ಬೋಧಯನ್ ವ್ಯಾಸರಾಜೀಯಗ್ರಂಥಾನ್ ವಿಶ್ವೋತ್ತಮೋಽವತಾತ್ ॥

೧೨. ಪಂಚವೃಂದಾವನಾಖ್ಯಾನಸೇವೋತ್ಕಃ ಪ್ರಗುಣೋಜ್ಜ್ವಲಃ ।
ಶ್ರೀವಿಶ್ವೋತ್ತಮಯೋಗೀಂದ್ರೋ ದೀನಂ ದೂನಂ ಪುನಾತು ಮಾಮ್ ॥

೧೩. ಅಸಮಾಸಮಸಮಾಜ್ಞಪ್ತಃ ಸ್ವರ್ಣವರ್ಣಃ ಸುಧೀಃ ಪ್ರಧೀಃ ।
ಸ್ವಾಪ್ನವೃಂದಾವನಾಖ್ಯಾನಭವನಂ ನಿರ್ಮಮೇ ಸ್ಫುಟಮ್ ॥

೧೪. ಭಾಸ್ವದ್ದಿವ್ಯಶಿಲಾಜಾಲೇ ಸ್ವರ್ಣವರ್ಣಾಕ್ಷರೋಜ್ಜ್ವಲಮ್ ।
ಆಖ್ಯಾನಂ ಲೇಖಯಾಮಾಸ ಯೋಽಸೌ ವಿಶ್ವೋತ್ತಮೋಽವತಾತ್ ॥
(ಯುಗ್ಮಮ್)

೧೫. ಆಖ್ಯಾನಗತಮಂತ್ರಾನ್ ಯಃ ಸ್ವರ್ಣವರ್ಣೈರ್ವ್ಯಲೇಖಯತ್ ।
ನವ್ಯೋವೃಂದಾವನಾಚಾರ್ಯಃ ಸ ಶ್ರೀವಿಶ್ವೋತ್ತಮೋಽವತಾತ್ ॥

೧೬. ತೀರ್ಥಪ್ರಬಂಧಗಾನ್ ಶ್ಲೋಕಾನ್ ಬದರೀಹರಿಸನ್ನಿಧೌ ।
ಸಮರ್ಪ್ಯ ಧನ್ಯತಾಂ ಪ್ರಾಪ್ತಃ ಸ ಶ್ರೀವಿಶ್ವೋತ್ತಮೋಽವತಾತ್ ॥

೧೭. ವಿಶ್ವೋತ್ತಮೋ ಹಯಗ್ರೀವಮೃತ್ತಿಕಾಭೂಷಿತಾಲಿಕಃ ।
ಜಗದ್ವಂದ್ಯಪದದ್ವಂದ್ವೋ ವೈಷ್ಣವಾಗ್ರೇಸರೋಽವತಾತ್ ॥

೧೮. ಪಾಪೌಘಧ್ವಾಂತವಿಧ್ವಂಸಭಾಸ್ಕರಾಯಿತವಿಗ್ರಹಮ್ ।
ಭೂತರಾಜಪ್ರಿಯಂ ವಂದೇ ವಿಶ್ವೋತ್ತಮಮಹಾಗುರುಮ್ ॥

೧೯. ಸಮಸ್ತವಿಪದುಚ್ಛೇದಂ ಪ್ರಾಣದಾನಚಣಂ ಗುರುಮ್ ।
ಶ್ರೀಮದ್ವಿಶ್ವೋತ್ತಮಂ ವಂದೇ ವಿನಯಾದರಮೇದುರಃ ॥

೨೦. ಅಜ್ಞಾನನಿದ್ರಾವಿದ್ರಾಣಸುಪ್ರಭಾತಕಪ್ರಭಾಕರಾನ್ ।
ವಿಶ್ವೋತ್ತಮಗುರೂನ್ ವಂದೇ ಸರ್ವದಾ ಧೀಶುದ್ಧಯೇ ॥

೨೧. ಸ್ವಭಕ್ತೋದ್ಧಾರಕಂ ನಿತ್ಯಂ ಫಲಮಂತ್ರಾಕ್ಷತಪ್ರದಮ್ ।
ಹಯಾಸ್ಯಾಂಕೇ ಸಮಾಸೀನಂ ವಿಶ್ವೋತ್ತಮಮುಪಾಸ್ಮಹೇ ॥

೨೨. ಸರ್ವತಂತ್ರಸ್ವತಂತ್ರೋಽಸೌ ವಿಶ್ವೋತ್ತಮಮಹಾಮುನಿಃ ।
ಯತ್ಪಾದಜಲಸಂಸ್ಪರ್ಶಾನ್ಮಂದೋ ವಾಚಸ್ಪತೀಯತಿ ॥

೨೩. ವಿಸ್ಮೃತಾಯಾ ಧರ್ಮರೀತೇರುದ್ಧಾರ್ತಾರಂ ಪುನಃ ಪುನಃ ।
ಅಪಮೃತ್ಯುಹರಂ ವಂದೇ ವಿಶ್ವೋತ್ತಮಮುನೀಶ್ವರಮ್ ॥

೨೪. ಪಂಚವೃಂದಾವನಾಖ್ಯಾನೇ ಪ್ರಥಿತೋ ಯಃ ಸುರೇಶ್ವರಃ ।
ತಸ್ಮೈ ವಿಶ್ವೋತ್ತಮಾರ್ಯಾಯ ನಮೋವಾಕಂ ಪ್ರಶಾಸ್ಮಹೇ ॥

೨೫. ಹಯಾಸ್ಯನಾಭಿಪದ್ಮಸ್ಥಂ ಬ್ರಹ್ಮಾಣಮೃಜುಭಿರ್ಯುತಮ್ ।
ಯೋಽದ್ರಾಕ್ಷೀದ್ಧ್ರು ದಯಾಕಾಶೇ ಸ ಶ್ರೀವಿಶ್ವೋತ್ತಮೋಽವತಾತ್ ॥

೨೬. 'ಯೋಽಜಸ್ಯನಾಭೌ'ಶ್ರುತ್ಯರ್ಥಂ ಸ್ಫುಟಂ ಯೋ ದೃಷ್ಟವಾನ್ ಪುನಃ ।
ಸ ಶ್ರೀ ವಿಶ್ವೋತ್ತಮೋ ಯೋಗೀ ಸ್ವರ್ಣವರ್ಣಃ ಪುನಾತು ಮಾಮ್ ॥

೨೭. ಗೋಪೀಚಂದನಪುಂಡ್ರಭೂಷಿತತನುಶ್ಚಕ್ರಾದಿಮುದ್ರಾಂಕಿತಃ
ಸ್ವಂಗಾರಾಕ್ಷತಗಂಧಪುಷ್ಪತುಲಸೀನಿರ್ಮಾಲ್ಯಧಾರೀ ಯತೀ ।

ಯತ್ಕೀರ್ತಿರ್ದ್ರುಹಿಣಾಂಡಭಾಂಡಮಭಿತೋ ವೃತ್ತ್ವಾ ಪರಿಭ್ರಾಮ್ಯತಿ,
ಸೋಽಸೌ ಶ್ರೀಗುರುರನ್ವಹಂ ವಿಜಯತೇ ವಿಶ್ವೋತ್ತಮೋ ಮಸ್ಕರೀ ॥

೨೮. ಯಸ್ಮಿನ್ ಪ್ರಸಾದಸುಮುಖೇ ವಿಮುಖೀಭವಂತಿ
ವಿಘ್ನಾಃ ಸಮೀಹಿತವಿಧೌ ದುರಿತೈಕನಿಘ್ನಾಃ ।
ರಾಕಾಶಶಾಂಕಶತಕೋಟಿವಿಜಿತ್ವರಾಸ್ಯಂ
ವಿಶ್ವೋತ್ತಮಾರ್ಯಯತಿನಂ ತಮಿಹ ಸ್ಮರಾಮಿ ॥

೨೯. 'ನಮೋ ವಿಶ್ವೋತ್ತಮಾರ್ಯಾಯ ವಿಶ್ವವಿಘ್ನವಿನಾಶಿನೇ' ।
ಸರ್ವಮಂತ್ರೇಷ್ವಯಂ ಮಂತ್ರೋ ನಿತ್ಯಂ ಚಿಂತಾಮಣೀಯತೇ ॥

೩೦. ವಿದ್ವದ್ವೃಂದಶಿರಸ್ಸುಚಂದನರುಚೋ, ನೇತ್ರೇಷು ಮಿಥ್ಯಾದೃಶಾಂ
ಧೂಲೀ ಮುಷ್ಟಿಕಿರೋ, ವಿಪಕ್ಷದಲನಸ್ತಂಭಾಯ ದಂಭೋಲಯಃ ।
ಅಸ್ಮನ್ಮಾನಸಸಾರಸಾರಗತಯೋ ಹಂಸಾಃ ಪರಾಗಾಣವಃ
ಶ್ರೀ ವಿಶ್ವೋತ್ತಮದೇಶಿಕಾಂಘ್ರಿಕಮಲೋದ್ಧೂತಾಃ ಸದಾ ಪಾಂತು ನಃ ॥

೩೧. ಶ್ರೀವಾದಿರಾಜಕೃಪಯಾ ಮಹನೀಯರೂಪೋ
ರೂಪಾನುರೂಪಚರಿತಃ ಸುಕೃತಪ್ರಧಾನಃ ।
ವಿಶ್ವೋತ್ತಮೋ ಗುರುವರೋ ಯದಜಸ್ರದಾನ –
ನೀರೈರುಪೈತಿ ಮರುಭೂಮಿರನೂಪ ಭಾವಮ್ ॥

೩೨. ತ್ವಂ ಮಾತಾಪಿತರೌ ತ್ವಮೇವ ಶರಣಮ ಚಿಂತಾಮಣಿಸ್ತ್ವಂಗುರೋ
ದೌರ್ಭಾಗ್ಯಂ ಮಮ ಲೋಲವೀತು ಸ ಭವಾನ್ ಶ್ರೇಯಃಶ್ರಿಯಾಮಾಶ್ರಯಃ
ಸ್ವಾಮಿನ್! ತ್ವತ್ಪದಪಂಕಯೋನಿಯಮಲೇ ಭೃಂಗಾಯತಾಂ ಮೇ ಮನಃ,
ಭೋ! ವಿಶ್ವೋತ್ತಮ ! ತಾಪಮಪ್ರತಿಹತಂ ಲೋಪಂ ನಯ ಶ್ರೀಗುರೋ ॥

೩೩. ರಾಮರಾಮೇತಿ ಮಂತ್ರಂ ಯೋ ಜಪನ್ ಸ್ವಚ್ಛಂದಮೃತ್ಯುತಃ[1]।
ದಕ್ಷಿಣಾಕ್ಷ್ಣ ಯೋಗರೂಢಃ ಸ ಶ್ರೀ ವಿಶ್ವೋತ್ತಮೋಽವತಾತ್॥

೩೪. ವಿಶ್ವೋತ್ತಮಾರ್ಯಪದಪಂಕಜಸತ್ಪ್ರಸಾದಾದ್
ಆಸಾದಿತಾಖಿಲಸದಾಗಮಸದ್ರಹಸ್ಯಃ ।
ಸಿಂಹೋದ್ಧತೋ ನನು ಕುವಾದಿಗಜೇಂದ್ರತತ್ತ್ಯೈ
ಶ್ರೀವಿಶ್ವವಲ್ಲಭ ಇಹ ಪ್ರತಿಭಾತಿ ಲೋಕೇ ॥

೩೫. ವಿಶ್ವೋತ್ತಮಗುರುಸ್ತೋತ್ರಂ ಯೇ ಪಠಂತಿ ದಿನೇ ದಿನೇ ।
ತೇಷು ಶ್ರೀಮಧ್ವಶಾಸ್ತ್ರಾರ್ಥಜ್ಞಾನಸಿದ್ಧಿರ್ಭವೇದ್ಧ್ರುವಮ್ ॥

೩೬. ಆನಂದತೀರ್ಥಾಚಾರ್ಯೇಣ ರಚಿತಂ ಮಂಗಳಪ್ರದಮ್ ।
ವಿಶ್ವೋತ್ತಮಗುರುಸ್ತೋತ್ರಂ ತೃಣೇಢು ಕಲಿಕಿಲ್ಬಿಷಮ್ ॥

---

1. 'ಸ್ವಚ್ಛಂದಮೃತ್ಯುತಃ' ಇತ್ಯತ್ರ ಸಾರ್ವವಿಭಕ್ತಿಕಸ್ತಸಿಃ॥

॥ಶ್ರೀಮಧ್ವವಾದಿರಾಜಾಂತರ್ಗತಅಶ್ವಿನೀಹಯಗ್ರೀವಾರ್ಪಣಮಸ್ತು ॥

## ಶ್ರೀ ವಿಶ್ವೋತ್ತಮಾಷ್ಟಕಮ್

ವಿಶ್ವಾಧೀಶ ಕರಾಬ್ಜೋತ್ಥ ವಿಶ್ವೇಂದ್ರ ಕರಸಂಭವಮ್ ।
ವಿಶ್ವೋತ್ತಮಗುರುಂ ವಂದೇ ವಿರಕ್ತಿಪರಿಪೂರಿತಮ್ ॥ ೧

ಶ್ರೀವಾಗೀಶಕರಾಬ್ಜೋತ್ಥ ವಾದಿರಾಜಸುಸೇವಕಮ್ ।
ಸೋದಾಕ್ಷೇತ್ರೇ ಸನ್ನಿವಾಸಂ ವಿಶ್ವೋತ್ತಮ ಗುರುಂ ಭಜೇ ॥ ೨

ಶ್ರೀವಾದಿರಾಜ ಸಂಸೇವ್ಯ ಶ್ರೀ ರಮಾಪತಿ ಸೇವಕಮ್ ।
ಶ್ರೀವಿಶ್ವೇಂದ್ರಸುತಂ ಧೀರಂ ವಿಶ್ವೋತ್ತಮ ಗುರುಂ ಭಜೇ॥ ೩

ಭಾವೀಸಮೀರಸಂಸೇವ್ಯ ಭೂಮ್ಯಾಲಿಂಗಿತ ಶ್ರೀವರಮ್ ।
ವಿಶ್ವಪ್ರಿಯಗುರುಂ ಚಾಪಿ ವಿಶ್ವೋತ್ತಮ ಗುರುಂ ಭಜೇ ॥ ೪

ಶ್ವಾಸೋಚ್ಛ್ವಾಸಕರಂ ದೇವಂ ವಾಜಿವಕ್ತ್ರಂ ಚ ಶ್ರೀವರಮ್ ।
ವಿಶ್ವಪ್ರಿಯಗುರುಂ ವಂದೇ ನೌಮಿ ವಿಶ್ವೋತ್ತಮಂ ಸದಾ ॥ ೫

ಭಾವೀಸಮೀರಸಂಸೇವ್ಯ ವೇದವ್ಯಾಸಪದಾರ್ಚಕಮ್ ।
ಮೋದಶಾಸ್ತ್ರಾನುರಕ್ತಂ ಚ ವಿಶ್ವೋತ್ತಮ ಗುರುಂ ಭಜೇ ॥ ೬

ಶ್ರೀಭೂತರಾಜಸಂಸೇವ್ಯ ವಾದಿರಾಜಸುಸೇವಕಮ್ ।
ಶ್ರೀಮನ್ಮಧ್ವಮತೇಂದುಂಚ ವಿಶ್ವೋತ್ತಮ ಗುರುಂ ಭಜೇ ॥ ೭

ಭದ್ರಾನದೀ ತಟಸ್ಥೇ ಶ್ರೀ ಸತ್ಯಧರ್ಮಸುಸನ್ನಿಧೌ ।
ಸ್ವರ್ನದೀಂ ದರ್ಶಯಾಮಾಸ ವಿಶ್ವೋತ್ತಮಗುರುಂ ಭಜೇ ॥ ೮

ಯ ಇದಂ ಅಷ್ಟಕಂ ನಿತ್ಯಂ ಜಪೇದ್ವಾಶ್ರುಣುತೇಪಿ ವಾ ।
ಸರ್ವಾಭಿಷ್ಟಂ ದದಾತೀಹ ವಾದಿರಾಜೋ ನ ಸಂಶಯಃ ॥

## ಶ್ರೀ ವಿಶ್ವೋತ್ತಮ ಸ್ತುತಿ ಪಂಚಕಂ

ಭದ್ರಾ ನದೀತಟಸ್ಥೇ । ಶ್ರೀ ಸತ್ಯಧರ್ಮಸುಸನ್ನಿಧೌ ॥
ಯಃ ತತ್ರ ಸ್ವರ್ನದೀಂ ದ್ರಷ್ಟಃ । ವಿಶ್ವೋತ್ತಮಗುರುಂ ಭಜೇ ॥ ೧

ನಮಾಮಿ । ಭೀಮೇಶ । ನೃಸಿಂಹ । ಸೇವಕಮ್ ।
ನಮಾಮಿ । ವಾಗೀಶ । ಕರೋದ್ಭವ ಪ್ರಿಯಮ್ ॥
ನಮಾಮಿ । ಭೂತೇಶ । ಪದಾಬ್ಜಪೂಜಕಮ್ ।
ನಮಾಮಿ । ವಿಶೋತ್ತಮತೀರ್ಥ । ವರ್ಯಮ್ ॥ ೨

ಸದಾ । ಸುಧಾ । ಸುಬೋಧಕಮ್ ।
ಸದಾ । ಸುಕೋವಿದಪ್ರಿಯಮ್ ॥

ಶ್ರೀ ಶ್ರೀ ವಿಶ್ವೋತ್ತಮತೀರ್ಥರು / ೧೪೯

ಬುಧೋತ್ತಮಂ । ಮುನಿಂ ಗುರುಮ್ ।
ನಮಾಮ್ಯಹಂ ನಮಾಮ್ಯಹಂ ॥ ೩

ವಿಶ್ವೋತ್ತಮಗುರುಂ ವಂದೇ । ನಂದಬಾಲ ಸುಪೂಜಕಮ್ ।
ನಂದೀತೀರ್ಥ ಸುಪೀಠಸ್ಥಂ । ನಂದಭಾಷ್ಯ ಸುಬೋಧಕಮ್ ॥ ೪

ಚಿತ್ತಜ ಪಿತ । ಶ್ರೀ ಕೃಷ್ಣ ಸುಪೂಜಕಮ್ ।
ತ್ಯಕ್ತ ಸಂಸಾರ । ವಿರಕ್ತಿ ಸುಪೂರಿತಮ್ ॥
ಮುಕ್ತ ಸುಭಾಷಿತ ಯುಕ್ತಿ ಸಂಪೂರಿತಮ್ ।
ಸ್ತುತ್ಯ ವಿಶ್ವೋತ್ತಮತೀರ್ಥಂ । ನಮಾಮ್ಯಹಮ್ ॥ ೫

॥ ಶ್ರೀ ವಿಶ್ವೋತ್ತಮ ಗುರ್ವಂತರ್ಗತ ಶ್ರೀ ಭೂತರಾಜಾಂತರ್ಗತ
ಶ್ರೀ ವಾದಿರಾಜಾಂತರ್ಗತ ಶ್ರೀಮದ್ಧ್ವೇಶಾರ್ಪಣಮಸ್ತು ॥

ರಾಗ : ಅಠಾಣ ತಾಳ : ಆದಿ

ಅನುಗ್ರಹಿಸಿದರಮ್ಮ ನೋಡೆ । ಎನ್ನ ।
ನನುಗ್ರಹಿಸಿದರಮ್ಮ ನೋಡೆ । ಘನ್ನ ।
ಮುನಿ ವಿಶ್ವೋತ್ತಮರೆ ॥ಪ॥

ಸೋದೆ ಸಂಸ್ಥಾನದ । ಅಧಿಪರಿವರಮ್ಮ ।
ವಾದಿರಾಜರ ವರ । ಸಾಧುವಂಶಜರಮ್ಮ ॥೧॥

ನಿಗ್ರಹಾನುಗ್ರಹದಿ । ಅಗ್ರಗಣ್ಯರಮ್ಮ ।
ಆಗ್ರಹಗೊಳ್ಳದೆ । ಜಾಗ್ರತೆ ಕೇಳಮ್ಮ ॥೨॥

ಪಾವನಗೊಳಿಸುವ । ದೇವಪಾದಗಳಮ್ಮ ।
ಸೇವಕ ಸುಜನರ । ಭವ ಭಯಹರವಮ್ಮ ॥೩॥

ಕಟಿಯನು ನೋಡಮ್ಮ । ಸಟೆಯಲ್ಲ ಸಿಂಹವಮ್ಮ ।
ಸ್ಫುಟಗೊಳಿಪುದುದ್ಧಟ । ರಟ್ಟುಳಿಯೆಂದಮ್ಮ ॥೪॥

ವ್ಯೂಢುರದಿಕ್ಕೆಲದಿ । ರೂಢಭುಜಗಳಮ್ಮ ।
ಗಾಢವಾಗಿಳಿದಿರ್ಪ । ಮೋಡಿಯ ನೋಡಮ್ಮ ॥೫॥

ಕಮಲಕಣ್ಣರಮ್ಮ । ಅಮಲಹೃದಯರಮ್ಮ ।
ವಿಮಲ ಚರಿತರಮ್ಮ । ನಿರ್ಮಲ ಚಿತ್ತರಮ್ಮ ॥೬॥

ಮಿಂಚುಭಂಗಾರದ । ಕೆಂದು ಮೈ ನೋಡಮ್ಮ ।
ಸಂಚುಸಂಚುಗಳಲ್ಲು । ಮಿಂಚುವ ರಾಜರಮ್ಮ ॥೭॥

ಹಯಮುಖ ದೇವನ ।ದ್ವಯರಹಿತ ಭಕ್ತರಮ್ಮ ।
ದಯಾಭಾವಿಗುಣರಮ್ಮ । ಸ್ವಯಂಪೂರ್ಣ ಪ್ರಜ್ಞರಮ್ಮ ॥೮॥

ಹಂಸವಾಹಿ ರಾಜರ । ಅಂಶವೆ ನಿಜವಮ್ಮ ।
ಸಂಶಯ ಬೇಡ ಪ್ರ । ಶಂಸೆಯಿದಲ್ಲವಮ್ಮ ॥೯॥

ನಿರ್ಮಮ ನಿರ್ಮೋಹಿ । ಕರ್ಮತರಿವರಮ್ಮ ।
ದುರ್ಮತಿ ದುರುಳರ । ಮರ್ಮಭೇದಕರಮ್ಮ ॥೧೦॥

ಪಾಮರ ಜನರಿಗೆ । ಸಾಮಾನ್ಯರಿವರಮ್ಮ ।
ನೇಮನಿಷ್ಠರ ಕಲ್ಪ । ದ್ರುಮರಾಗಿಹರಮ್ಮ ॥೧೧॥

ಹದಿನಾಲ್ಕು ಪೀಳಿಗೆ । ಹಾದುಹೋದುವಮ್ಮ ।
ವಾದಿರಾಜರ ಘನತೆ । ವೇದ್ಯವಾಗುತಿಹುದಮ್ಮ ॥೧೨॥

ಕಲಿಮಲ ಹೆಚ್ಚಲು । ಬಲದಿ ಮಿಂಚುವುದಮ್ಮ ।
ಕುಲಕೋಟಿ ಪುಣ್ಯವು । ಫಲಿಸಿ ನಿಂದಿಹುದಮ್ಮ ॥೧೩॥

ಮಾಯಿಯ ಭಂಗಿಸಿ । ನ್ಯಾಯಗೆದ್ದಂತಮ್ಮ ।
ಮಾಯೆಯ ಖಂಡಿಸಿ । ಧ್ಯೇಯಸಾಧಿಪರಮ್ಮ ॥೧೪॥

ಮುತ್ತಿನ ಗದ್ದಿಗೆ । ಹತ್ತಿದ ತೆರನಮ್ಮ ।
ಭಕ್ತರ ಬೆಳ್ಳಿಪೀಠ । ಹತ್ತಿ ಕುಳಿತರಮ್ಮ ॥೧೫॥

ಸ್ವರ್ಣಸಂಸ್ಥಾನದ । ಜೀರ್ಣೋದ್ಧಾರವಮ್ಮ ।
ವರ್ಣಿಸಿದಂತಂದು । ಪೂರ್ಣಕೈಗೊಂಡರಮ್ಮ ॥೧೬॥

ಕಟುಮಾತನಾಡರಮ್ಮ । ಹಟವಿನಿತಿಲ್ಲವಮ್ಮ
ದಿಟದ್ವೈತ ಶಾಸ್ತ್ರದಲ್ಲು । ಪಟುವಾಗಿಹರಮ್ಮ ॥೧೭॥

ಅಕ್ಕರೆ ಮಿಕ್ಕಲು । ಮಕ್ಕಳಾಂತಾಡುವರಮ್ಮ ।
ಚೊಕ್ಕವಾಗೊಂದೊಮ್ಮೆ । ಸಿಕ್ಕು ನುಡಿವರಮ್ಮ ॥೧೮॥

ಗುರುವಿಶ್ವೇಂದ್ರರ । ಕರಸಂಜಾತರಮ್ಮ ।
ವರವಿಶ್ವೋತ್ತಮ । ಧರೆಯಲ್ಲಿ ಖ್ಯಾತರಮ್ಮ ॥೧೯॥

ಗುರುರಾಜರಂಶಪೊತ್ತು । ವಿರಾಜಿಪರಿವರಮ್ಮ ।
ತುರಗಮುಖನರ್ಚಕರ । ವಿರಾಗವ ನೋಡಮ್ಮ ॥೨೦॥

ಬಲ್ಲವರೆ ಬಲ್ಲ । ರೆಲ್ಲ ಮಹಿಮೆಯಮ್ಮ ।
ಒಲ್ಲದವರಿಗವರು । ಚೆಲ್ಲರೆ ಯತಿಗಳಮ್ಮ ॥೨೧॥

ಗಿರಿಬಾಲೆವರದರು । ಗುರುವಾದಿರಾಜರಮ್ಮ ।
ವರವಿಶ್ವೋತ್ತಮರಂತೆ । ದರುಶನವಿತ್ತರಮ್ಮ ॥೨೨॥

# ಅರಿತು ಭಜಿಸಿರೋ ವಿಶ್ವೋತ್ತಮಾರ್ಯರಾ

ರಾಗ : ತೋಡಿ ತಾಳ : ರೂಪಕ

ಅರಿತು ಭಜಿಸಿರೋ ವಿಶ್ವೋತ್ತಮಾರ್ಯರಾ ।
ಕೋರಿದಿಷ್ಟವಾ ತಕ್ಷಣದಿ ಕೊಡುವರಾ ॥ಪ॥

ಮೇರು ಪರ್ವತಾ ಅಘಕೆ ಪವೀ ಎನಿಪರಾ
ಘೋರಕರ್ಮದಾ ಸುಳಿಯ ಪಾರು ಮಾಡ್ವರಾ ॥೧॥

ಕಾಮಧೇನುವೂ ಕಲ್ಪವೃಕ್ಷ ನಾಕವೂ ।
ವ್ಯೋಮಚರರೂ ಇವರಧೀನವೆಂಬರೂ ॥೨॥

ಪಾರಮೇಷ್ಠಿಯ ಪದಕೆ ರಾಜರರ್ಹರು ।
ಪುರಂದರಾದಿಯೂ ಇವರು ತಿಳಿದರೆಂದರೂ ॥೩॥

ಸೌಮ್ಯರೂಪರು ಋಜುಗೆ ಪ್ರೇಮಪಾತ್ರರೂ ।
ಕಾಮರಹಿತರೂ ನಿಷ್ಕಾಮಗಣ್ಯರೂ ॥೪॥

ಧರೆಯ ಮುನಿಗಳಾ ಋಷೀವರರ ವಂದ್ಯರಾ
ಸುರರ ವಂದ್ಯರಾ ಋಜೂ ಆವೇಶಸಾಂದ್ರರಾ ॥೫॥

ಕೋಟಿವರ್ಣನಾ ಕೋಟಿರೂಪಭಂಗಿಲಿ ।
ದಿಟದಿ ವರ್ಣಿಸೀ ಋಜುವ ಕೋಟಿ ರಂಜಿಸೀ ॥೬॥

ದಿಟವೆ ತಿಳಿಯದಾ ಸಟೆಯ ಜೀವರೆಲ್ಲರೂ ।
ಚಾಟಿ ಏಟಿಲೀ ತಮದಿ ಬೀಳ್ವರೆಂದರೂ ॥೭॥

ಅಜಪದಾರ್ಹನು ರಾಜ ಋಜುವು ಎನ್ನುತಾ ।
ಕುಜಭಂಜಕಾ ಸಜ್ಜನರ ರಂಜಕಾ ॥೮॥

ಸಟೆಯಿದಲ್ಲವೋ ಕಟೂ ಸತ್ಯವೆಂದರೂ ವಿ –
ಕಟಮತಿಗಳೇ ಯಮ ಕುಟ್ವನೆಂದರೂ ॥೯॥

ಸಾಟಿಯಿಲ್ಲವೋ ಕೃಪಾಕಟಾಕ್ಷಪೂರ್ಣರೂ ।
ಕೋಟಿರೀತಿಲೀ ತಾವ್ ಬಿಡದೆ ಪೊರೆವರೂ ॥೧೦॥

ಭೂವಿಠಲನಾ ಬಿಂಬದಲ್ಲಿ ಕಾಂಬರಾ ।
ಭುವನ ತಾತಗೆ ಪೌತ್ರಜರೆನಿಪರಾ ॥೧೧॥

ಭಾವಿಮಾರುತರಾ ಭಾವಪೂರ್ಣಭಜಿಸುತಾ ।
ಭೂವಿಠಲನಾ ಅಡಿಗಳಿಗೆ ಸಾರ್ದರಾ ॥೧೨॥)

೧೫೨ / ಶ್ರೀ ಶ್ರೀ ವಿಶ್ವೋತ್ತಮತೀರ್ಥರು

# ಅಮೃತಪುರವಾಸ ಸೋಮರೀಶಾ

ರಾಗ : ಕಾಂಬೋಧಿ ತಾಳ : ಝಂಪೆ

ಅಮೃತಪುರವಾಸ ಸೋಮರೀಶಾ ॥ ಪ ॥
ಸೋಮಪಾನಾರ್ಹರಲಿ ಸರ್ವರಗ್ರೇಶಾ ॥ ಅ. ಪ.।

ಘನ್ನಮಹಿಮನೆ ಎನ್ನ ಒಂಟಿಯಾಗಿಟ್ಟಿನ್ನು
ಮುನ್ನ ಮೌನವ ತಾಳ್ದೆ ಹೇಳೇತಕೇ ।
ಇನ್ನು ಋಜುಪದದಾ ರಜದ ಗಂಧದಲಿ ಮಹ –
ಮಗ್ನನಾಗಿಹೆ ಭವದ ಸಂಗ ಸಾಕೆಂದೂ ॥೧॥

ಭೂತರಾಜನ ಪ್ರಿಯನೆ ಭೌತಿಕವ ಕಳೆಯಯ್ಯಾ
ವಾತಾತ್ಮಜ ಸಮನ ತೋರಿ ಭವದೀ ।
ಪೂತಾತ್ಮ ಪವನ ಪಿತ ಕಮಲಾತ್ಮ ಅವಿಯೋಗೀ
ನಾಥ ಶ್ರೀಭೂದುರ್ಗೆಯರ ರಮಣನ ಪ್ರಿಯದಾಸಾ॥೨॥

ಸೋಮಶೇಖರ ತನ್ನ ಭಾಮಿನಿಗೆ ಪೇಳಿದಾ
ಆ ಮಹಾಮಂತ್ರನ ನಿತ್ಯ ಬಿಂಬದೀ ।
ಕಾಮಪಿತ ಮನ್ಮಥಗೇ ಮನ್ಮಥನ ನೋಡುತ್ತ
ಸುಮಮನೋಹರ ಪ್ರೀಯ ಭೂವಿಠಲದಾಸಾ ॥೩॥

# ವಂದಿಪೇನಂಘ್ರಿಯ ಯತಿಚಂದ್ರಮಾ

ರಾಗ : ಕಾಂಬೋಧಿ ತಾಳ : ಝಂಪೆ

ವಂದಿಪೇನಂಘ್ರಿಯ ಯತಿಚಂದ್ರಮಾ
ವಂದಿಪೆನು ತವ ಚರಣದಿ ಯತಿ ಚಂದ್ರಮಾ ॥ಪ॥

ಸಂಧಿಸಿಹ ಸುಗುಣಗಳ ವರ್ಣಿಪೆನೆ ಗುಣಸಾಂದ್ರ ॥ಅ.ಪ.॥

ವಿಶ್ವಸರ್ವೋತ್ತಮನೆ ಅಶ್ವರೂಪದಿ ನಿನ್ನ
ಶಾಶ್ವತದಿ ಕೃಪೆ ಮಾಡಿ ತಂದ ಕರೆದೂ
ಅಶ್ವ ಆನನನಲ್ಲಿ ಭೂವರಾಹದೇವನಾ ಶ್ರೀಪತಿ
ವ್ಯಾಸರಾ ಅನವರತ ಪೂಜಿಸಿದೆ ವಿಶ್ವೋತ್ತಮಾ ॥೧॥ ।

ಚಾಷಷ್ಠಿ ವರುಷಗಳ ಅಶನ ಪವನಾಶನದಿ
ಕಾಷಾಯ ಧರಿಸಿ ನೀ ನಿಷ್ಠೆಯಲಿ ವ್ರತದೀ ।
ವಿಷಧರಾ ತಲ್ಪನನ ಅಜ ಅನುಜರ ಒಲಿಸಿ
ಮಾಷ ಮಾತ್ರವು ಬಿಡದೆ ಪೂಜೆ ಜಪ ತಪದೀ ॥೨॥

ಶ್ರೀ ಶ್ರೀ ವಿಶ್ವೋತ್ತಮತೀರ್ಥರು / ೧೫೩

ಪಂಚವೃಂದಾವನದಿ ಪಂಚಾತ್ಮಶ್ರೀಹರಿಯ
ಪಂಚಪ್ರಾಣನ ಭಾವಿ ಪಂಚಪ್ರಾಣಾ ।
ಇಂಚರ ವಾಹನ್ನ ವಾದಿರಾಜನ ನೀನು ಹೃದಯ
ಅಂಚಿನಲಿ ಅನವರತ ಕಂಡೆ ನೀ ಅನಘ ಮಹಿಮ ॥೩॥

ವೃಂದಾವನಾಚಾರ್ಯ ಪಂಚವೃಂದಾವನರ ಸಂ –
ಪ್ರದಾಯಸ್ಥನೀ ಸಂತೋಷ ಕುವರಾ । ಪಂಚ
ವೃಂದಾವನನು ಮುಂದೆ ಮಾತುರನೆಂದು ಡಂಗು –
ರದಿ ಭೂಸುರಕೆ ಸ್ವಾಪ್ನವೃಂದಾವನದ ಮಂದಿರವ ರಚಿಸಿದೆ ॥೪॥

ಸೌಮ್ಯ ಚಂದ್ರನೆ ನಿನ್ನ ಸೌಜನ್ಯ ಗುಣಗಳನು
ರಮ್ಯವಾಗ್ವರ್ಣಿಪೆನು ಸುಜನಚಂದ್ರ ನಿ –
ಷ್ಕಾಮ ಕರ್ಮದಲಿ ಕಾಮನೆಯ ಕೊಡು ಎನಗೆ
ವ್ಯೋಮಚರ ಸುಚರಿತ್ರ ನಿಷ್ಕಾಮ್ಯಯೋಗಿ ವಿಶ್ವೋತ್ತಮಾ ॥೫॥

ಸುಗುಣೋತ್ತಮನೆ ನಿನ್ನ ಅಗಣಿತದ ಗುಣಗಳನು
ದುಗುಡಮತಿ ವರ್ಣಿಪೆನೆ ಸುಗಣೋಪಕಾರೀ ।
ಬಾಗಿ ಈ ಶಿರಪುಷ್ಪ ಚರಣದಲಿ ಅರ್ಪಿಪೆನು
ಯೋಗಿವರ ಋಜುವರನ ತೋರು ಹೃದಯದಿ ಇಂದು। ॥೬॥

ಸುಚರಿತ್ರವರ ನಿನ್ನ ಸುಚರಿತ್ರಗಳೆನೆಲ್ಲ
ಪ್ರಚರಿಪೆನೆ ನಾನಿಲ್ಲಿ ಅಚರ ಮಹಿಮ ।
ಸಚ್ಚೇತನರಿಗೆಲ್ಲಾ ಋಜು ಉಪಾಸನೆಗ–
ಲ್ಲಿ ಚೈತನ್ಯದಾಯಕ ಕುಜನ ಕುಠಾರ ಸುಜನಮಂದಾರ ॥೭॥

ದವಳಗಂಗೆಲಿ ಮಿಂದು ಧವಳಮೌನಿಯ ಕುವರಾ
ಧವಳಪರತ್ರಯರ ಒಲಿಸಿ ತ್ವರದೀ ।
ಧವಳೋತ್ತರಿಯ ಪತಿಯ ಜಾವಜಾವಕೆ ನೆನೆದು
ಸರ್ವೋತ್ತಮನೆ ಶ್ರೀ ರಾಮರಾಮಾ ರಾಮನೆಂದೇ ॥೮॥

ಸರ್ವಜಿತು ವತ್ಸರದಿ ಸರ್ವಕಾರ್ಯವ ಮುಗಿಸಿ
ಶರ್ವ ಗುರುರಾಜರ ಅರ್ಚಿಸಿ ಮೆಚ್ಚಿಸಿ ।
ಶರ್ವಾದಿ ಗುರುವಂದ್ಯ ಭೂವಿಟ್ಠಲನ ಪಾದ
ಸರ್ವತ್ರ ಧ್ಯಾನಿಸುತ ಗೀರ್ವಾಣವೈದೆ ಸೋದೆಯಲಿ ॥೯॥

# ಗ್ರಂಥಋಣ

೧. ಪೂರ್ಣಪ್ರಜ್ಞ ದರ್ಶನ ಲೇ : – ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ

೨. ಶ್ರೀ ಸರ್ವಮೂಲ ಗ್ರಂಥಗಳು ಸಂಪುಟ ೧ ಹಾಗು ೭ ಗೀತಾಪ್ರಸ್ಥಾನ ಹಾಗೂ ಯತಿಪ್ರಣವಕಲ್ಪ : ಪ್ರಕಾಕರು ಅ. ಭಾ. ಮ. ಮಂಡಲ

೩. ನೀರಾಜನ : ಸಂಪಾದಕರು – ಶ್ರೀ ರಾಘವೇಂದ್ರ ಪುರಾಣಿಕರು

೪. ಸುಮಧ್ವವಿಜಯ ಅನುವಾದಕರು – ಕೋಟೇಶ್ವರ ನರಸಿಂಹಾಚಾರ್ಯರು

೫. ಮಾಧ್ವಸಿಂಚನ– ಮೈತ್ರಿಸಮೂಹ

೬. ರಜತ ಪೀಠಪುರ ಮತ್ತು ಪಾಜಕಕ್ಷೇತ್ರ : ಅಗ್ರಹಾರ ನಾರಾಯಣ ತಂತ್ರಿಗಳು

೭. ಶ್ರೀ ವಾದಿರಾಜ ಚರಿತ್ರೆ ಲೇಖಕರು : ಬಿ.ಪಿ. ನಾಗಭೂಷಣರಾವ್

೮. ನಾ ಕಂಡ ಶ್ರೀ ಶ್ರೀ ವಿಶ್ವೋತ್ತಮತೀರ್ಥರು – ಎಸ್. ಆರ್. ಪ್ರಹ್ಲಾದಾಚಾರ್ಯರು

೯. ಶ್ರೀ ವಾದಿರಾಜ ಕೃಪಾತರಂಗ – ಗಿರಿಬಾಲೆ

೧೦. ಲಕ್ಷಾಲಂಕಾರ ಸ್ಮೃತಿ ಸಂಚಿಕೆ – ಪರ್ಯಾಯೋತ್ಸವ ಹಾಗೂ ವಾದಿರಾಜೋತ್ಸವ ಸಮಿತಿ.

೧೧. ವಿಶ್ವ ಸೌರಭ ಸ್ಮರಣ ಸಂಚಿಕೆ : ಶ್ರೀ ಲಾತವ್ಯಾತ್ಮಕ ವಾದಿರಾಜ ಗುರು ಸೇವಾ ಸಮಿತಿ.

೧೨. ರುಕ್ಮಿಣೀಶವಿಜಯಂ : ೧೯೯೬ ಸೋದೆ ಪರ್ಯಾಯ ಮಹೋತ್ಸವ ಸಮಿತಿ

೧೩. ಸ್ತೋತ್ರಮಣಿ ಮಾಲಾ : ಪ್ರಕಾಶಕರು ಅ.ರಾ. ಪಂಚಮುಖಿ

೧೪. ತತ್ವಮಲ್ಲಿಕಾ : ಜ್ಞಾನಸತ್ರ ಉತ್ಸವ ಸಮಿತಿ, ಸ್ಮರಣ ಸಂಚಿಕೆ

೧೫. ಸೋದೇಶಕ್ಷೇತ್ರ ದರ್ಶನ : ಡಾ. ಗುರುರಾಜ ಕೃ, ನಿಪ್ಪಾಣಿ

೧೬. ತರಂಗ ವಾರ ಪತ್ರಿಕೆ : ೨೧.೧.೧೯೯೬ ರ ಸಂಚಿಕೆ

೧೭. ಉದಯವಾಣಿ ದೈನಿಕ : ೧೯.೧.೧೯೯೬ ರ ಸಂಚಿಕೆ

೧೮. ಶ್ರೀಕೃಷ್ಣನ ಉಡುಪಿ : ಲೇಖಕರು : – ಪಿ. ಲಾತವ್ಯ ಆಚಾರ್ಯ

೧೯. ಋಜುಕುಂಜಮಂಜರೀ, ಲೇಖಕರು : – ಶ್ರೀನಿವಾಸಾಚಾರ್ಯ ಇಟಗಿ

೨೦. ರಂಗವಿಠಲ : ಮಾಸಪತ್ರಿಕೆ

## ಈಗ ಮಾರುಕಟ್ಟೆಯಲ್ಲಿ ಲಭ್ಯವಿರುವ ಇದೇ ಲೇಖಕರ ಇತರ ಕೃತಿಗಳು

೧) ರಾಯರ ಪವಾಡಗಳು

೨) ಶ್ರೀ ವಾದಿರಾಜ ಗುರುವರ ಚರಿತಾಮೃತ

೩) ರುದ್ರರು ಭಾವಿರುದ್ರರು

೪) ಶ್ರೀ ಶ್ರೀ ವಿಶ್ವೋತ್ತಮ ತೀರ್ಥರು

## ಕೆಳಕಂಡ ಸ್ಥಳಗಳಲ್ಲಿ ಪುಸ್ತಕಗಳು ದೊರೆಯುತ್ತವೆ

**೧) ಬೆಂಗಳೂರಿನಲ್ಲಿ** ೧) ಪೂರ್ಣಪ್ರಜ್ಞ ವಿದ್ಯಾಪೀಠ ಹನುಮಂತನಗರ

೨) ಕೃಷ್ಣ ವಾದಿರಾಜ ಮಂದಿರ, ರಾಯರಾಯ ಕಲ್ಯಾಣಮಂಟಪ ಆವರಣ, ಚಾಮರಾಜಪೇಟೆ

**ಸೋದೆಯಲ್ಲಿ :** ಮಠದ ಪುಸ್ತಕ ಅಂಗಡಿ

**ಹಾಗೂ ಕೆಳಕಂಡ ಊರುಗಳಲ್ಲಿ ದೊರೆಯುತ್ತವೆ**

೧) ಮಂತ್ರಾಲಯ ೨) ಹುಬ್ಬಳ್ಳಿ ೩) ಬಳ್ಳಾರಿ ೪) ಗುಲ್ಬರ್ಗ ೫) ತುಮಕೂರು ೬) ಮಂಗಳೂರು



ಪ್ರಕಾಶಕರ ತಂದೆ ತಾಯಿಗಳಾದ
ದಿ॥ ಡಿ.ಕೆ. ಪುಟ್ಟುರಾವ್ ಹಾಗೂ ಶ್ರೀಮತಿ ನಿರ್ಮಲಾದೇವಿಯವರು
ಇವರ ಸ್ಮರಣಾರ್ಥ ಈ ಕೃತಿಯನ್ನು ಪ್ರಕಟಿಸಲಾಗಿದೆ.



ಪ್ರಕಾಶಕರಾದ
ಶ್ರೀ. ಕೆ.ಪಿ. ರಾಧಾಕೃಷ್ಣ ಮತ್ತು ಶ್ರೀಮತಿ ಚಂದ್ರಿಕಾ ಹಾಗೂ ಮಗಳು ಚಿ॥ ರೋಚನಾ
(ಸಂಪಾದಕರ ಅಳಿಯ, ಮಗಳು ಹಾಗೂ ಮೊಮ್ಮಗಳು)



## ಶ್ರೀ ವಿಶ್ವೋತ್ತಮತೀರ್ಥರನ್ನು ಕುರಿತು ಯತಿಶ್ರೇಷ್ಠರ ಅಭಿಪ್ರಾಯಗಳು

ಶ್ರೀ ವಿಶ್ವೋತ್ತಮತೀರ್ಥರು ತಮ್ಮ ಜೀವನದಲ್ಲಿ ಶಮದಮಾದಿಗುಣ ಸಂಪನ್ನರಾಗಿ ಸೌಜನ್ಯಭರಿತರಾಗಿ, ತಪೋ, ವಿದ್ಯಾ, ವೈರಾಗ್ಯಭೂಷಿತರಾಗಿ, ಶಾಂತವದನ ಪ್ರಸನ್ನರಾಗಿ, ಜನತೆಯ ಪ್ರೇಮಾದರ ಗೌರವಗಳನ್ನು ಪಡೆದು, ಆದರ್ಶಯತಿಗಳಾಗಿ ಮೆರೆದರು.

**ಪೇಜಾವರಮಠಾಧೀಶರಾದ ಶ್ರೀವಿಶ್ವೇಶತೀರ್ಥರು**

ಶ್ರೀಹರಿಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರರಾದ ಶ್ರೀ ವಿಶ್ವೋತ್ತಮತೀರ್ಥರನ್ನು ನಾವು ನಮ್ಮ ವಿದ್ಯಾಗುರುಗಳನ್ನಾಗಿ ಪಡೆದುದು ಹರಿಗುರುಗಳು ನಮ್ಮ ಮೇಲೆ ತೋರಿದ ಕರುಣೆ ಎಂದು ಭಾವಿಸುತ್ತೇವೆ. ಅವರ ಜ್ಞಾನಾದಿ ಸಂಪತ್ತು ನಮ್ಮನ್ನು ಬೆರಗುಗೊಳಿಸುತ್ತಿತ್ತು. ಎಂತಹ ಕ್ಲಿಷ್ಟ ಪ್ರಮೇಯಗಳನ್ನು ಬಹುಸುಲಭವಾಗಿ ಸ್ಪಷ್ಟಗೊಳಿಸಿ, ನಮಗೆ ಮನದಟ್ಟಾಗುವಂತೆ ಹೇಳುತ್ತಾ ಚಿತ್ತಾಪಹಾರ ಗುರುಗಳಾಗಿದ್ದರು.

**ಕೃಷ್ಣಾಪುರ ಮಠಾಧೀಶರಾದ ಶ್ರೀ ವಿದ್ಯಾಸಾಗರತೀರ್ಥರು**

ಶ್ರೀ ಮದ್ವಿಶ್ವೋತ್ತಮತೀರ್ಥರದ್ದು ಭಾಸುರ ವ್ಯಕ್ತಿತ್ವ. ಅವರು ಬಹಿರ್ಮುಖಿಗಳಲ್ಲ. ಹೆಚ್ಚು ಅಂತರ್ಮುಖಿಗಳು, ಬಾಹ್ಯ ಸಾಧನೆಗಿಂತ ಅಂತಃಸಾಧನದಲ್ಲಿ ಅಂತರ್ಭೂತರಾದವರು. ಅವರು ರಾಜರ ಮಹಿಮೆಗಳನ್ನು ಸಾಕ್ಷಾತ್ ಕಂಡುಕಂಡವರು, ಆದರೆ ಡಂಗುರ ಸಾರಿದವರಲ್ಲ. ಅವರು ಏಕಾಂತದಲ್ಲಿ ರಾಜರ ಜೊತೆ ಮಾತನಾಡುತ್ತಿದ್ದರು. ಎಂಬುದು ಬರೇ ಮಾತಲ್ಲ. ಶಿಷ್ಯಸ್ವೀಕಾರ ಇತ್ಯಾದಿ ಮಹತ್ವದ ಘಟ್ಟಗಳಲ್ಲಿ ರಾಜರೇ ಸ್ವತಃ ಅವರಿಗೆ ಅಂತಃಪ್ರೇರಣೆ ಕೊಡುತ್ತಿದ್ದರು ಎಂಬುದು ಅಸತ್ಯವೇನಲ್ಲ.

**ಪುತ್ತಿಗೆ ಮಠಾಧೀಶರಾದ ಶ್ರೀ ಸುಗುಣೇಂದ್ರತೀರ್ಥರು**

ನಮ್ಮ ಗುರುಗಳು ಶ್ರೀಹರಿಪಾದವನ್ನು ಸೇರಿದ್ದು ಅನಿರೀಕ್ಷಿತವಾಗಿದ್ದರೂ ಅವರಿಗೆ ಅದು ನಿರೀಕ್ಷಿತವಾಗಿತ್ತು ಎಂಬುದು ನಮಗೆ ಭಾಸವಾಗುತ್ತಿದೆ. 'ಶರಣರ ಬಾಳನ್ನು ಮರಣದಲ್ಲಿ ಕಾಣು' ಎಂಬ ಉಕ್ತಿಯಂತೆ ಅವರ ದೇಹತ್ಯಾಗಕ್ಷಣವೇ ಅವರ ಮಹತ್ತಿಕೆಯನ್ನು ತಿಳಿಸುತ್ತದೆ. ಶ್ರೀ ಮದಾಚಾರ್ಯರ 'ಸಂತತಂ ಚಿಂತಯೇನಂತಮ್ ಅಂತಕಾಲೇ ವಿಶೇಷತಃ' ಎಂಬ ಮಾತು ಅವರ ಬಾಳಿನ ಕೊನೆಯ ಕ್ಷಣದಲ್ಲಿ ಅಕ್ಷರಶಃ ಸತ್ಯವಾಗಿತ್ತು. ಅದರ ಮೂಲಕ ಅವರ ಮಾಧ್ವನಿಷ್ಠೆ ಯಾವ ಮಟ್ಟದಲ್ಲಿತ್ತು ಎಂಬುದನ್ನು ತಿಳಿಯಬಹುದು. ಅದಲ್ಲದೇ ಶ್ರೀ ಗುರುರಾಜರನ್ನು ಋಜುದೇವತೆಯೆಂದು ಉಪಾಸಿಸಿದುದ್ದರ ವಿಶಿಷ್ಟ ಫಲವಾಗಿತ್ತು ಎಂಬುದು ಗಮನಾರ್ಹವಾಗಿದೆ.

**ಸೋದೆಮಠಾಧೀಶರಾದ ಶ್ರೀ ವಿಶ್ವವಲ್ಲಭತೀರ್ಥರು**